# ಶ್ರೀಮದ್ ಉಜ್ಜಯಿನಿ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಪೀಠಾರೋಹಣ ದ್ವಾದಶ ವರ್ಧಂತಿ ಮಹೋತ್ಸವ

## ಸದ್ಧರ್ಮ ಕಿರಣ – ೦೫

# ವೀರಶೈವ ಪಂಚಪೀಠ ಪರಂಪರೆ

(ಪರಿಷ್ಕೃತ ಮೂರನೆಯ ಆವೃತ್ತಿ)

**ಲೇಖಕರು**

ಶ್ರೀ ಷ.ಬ್ರ. ಡಾ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು
ಅಮರೇಶ್ವರಮಠ, ಗುಳೇದಗುಡ್ಡ
(ಪ್ರಸ್ತುತ ಶ್ರೀ ಕಾಶೀ ಜಗದ್ಗುರುಗಳವರು)

**ಸಂಪಾದಕ**

ಪ್ರಾ.ಅ.ಸಿ.ಹಿರೇಮಠ
ಅಧ್ಯಕ್ಷರು, ಹಾವೇರಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು,
ರಾಣೇಬೆನ್ನೂರು

**ಪ್ರಕಾಶಕರು**

ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ
ಜ್ಞಾನಗುರು ವಿದ್ಯಾಪೀಠ, ಉಜ್ಜಯಿನಿ

ಶ್ರೀಶಕೆ ೧೯೨೮ ಕ್ರಿಸ್ತಶಕೆ ೨೦೦೭

**"VEERASHAIVA PANCHAPEETHA PARAMPARE"**
BY: H.H. Dr. Chandrashekhar Shivacharya Swamiji, Guledgudda
(Present Shree Kashi Jagadguruji)

Revised : III Edition

Editor: : Prof. A.S.Hiremath
President, Haveri Dist. Kannada Sahitya Parishat
Ranibennur 581115 - Haveri Dist
Phone: 08373266862

Publisher: : Shree Jagadguru Saddharma Sihmasana Jnanaguru
Vidyapeeth, Ujjayini 583136, Bellary Dist

Size : Demi 1/8

Price : Rs. 60/- (Rs. Sixty Only)

ಪರಿಷ್ಕೃತ ಮುದ್ರಣ : ೨೦೦೭
ಪ್ರತಿಗಳು : ೨೦೦೦
ಪುಟಗಳು : ೧೫೭ +
@ : ಗ್ರಂಥಕರ್ತರು
ಕಲೆ – ವಿನ್ಯಾಸ : ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ, ಉಪನ್ಯಾಸಕ, ಹಂಪಿ ಕನ್ನಡ ವಿಶ್ವವಿದ್ಯಾಲಯ
ಬೆಲೆ : ರೂ.೬೦ (ರೂ.ಅರವತ್ತು ಮಾತ್ರ)
ಬೆರಳಚ್ಚು : ಡಾ. ಚನ್ನು ಅ. ಹಿರೇಮಠ,
ರಾಣೇಬೆನ್ನೂರು – ೯೪೪೮೪ ೦೧೮೮೨
ಮುದ್ರಣ : ಶ್ರೀ ಜಗದ್ಗುರು ದಾರುಕ ಗ್ರಾಫಿಕ್ಸ್
ಚಿರಿಬಿ ರಸ್ತೆ, ಕೊಟ್ಟೂರು ೫೮೩೧೩೪
ಬಳ್ಳಾರಿ ಜಿಲ್ಲೆ
ದೂ. :

## ಸಂಪಾದಕರ ನುಡಿ

(ತೃತೀಯ ಆವೃತ್ತಿ)

ವೀರಶೈವ ಪಂಚಪೀಠ ಪರಂಪರೆ ಮಾರಾಟದಲ್ಲಿ ದಾಖಲೆ ಸ್ಥಾಪಿಸುವತ್ತ ಮುನ್ನಡೆದಿದೆ. ಈಗಾಗಲೇ ಎಂಟು ಸಾವಿರ ಪ್ರತಿಗಳು (ಪ್ರಥಮ ೩೦೦೦, ದ್ವಿತೀಯ ೫೦೦೦)ಮುಗಿದಿರುವುದು ಸಂತೋಷವನ್ನುಂಟು ಮಾಡಿದೆ. ಧರ್ಮಾಸಕ್ತರು ಈ ಗ್ರಂಥವನ್ನು ಆತ್ಮೀಯವಾಗಿ ಸ್ವಾಗತಿಸಿದ್ದಾರೆ ಎಂಬುದು ಅಭಿಮಾನದ ಸಂಗತಿಯಾಗಿದೆ.

ಇದೀಗ ಶ್ರೀಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಪೀಠಾರೋಹಣದ ದ್ವಾದಶ ವರ್ಧಂತಿ ಮಹೋತ್ಸವವು ೨೦೦೭ನೆಯ ಫೆಬ್ರವರಿ ೩,೪,೫,ರಂದು ಉಜ್ಜಯನಿಯಲ್ಲಿ ವೈಭವಪೂರ್ಣವಾಗಿ ಭಕ್ತಿ – ಗೌರವಗಳೊಂದಿಗೆ ನೆರವೇರಲಿದೆ. ಈ ಸುವರ್ಣ ಅವಕಾಶವನ್ನು ಗಮನಿಸಿ ಶ್ರೀ ಉಜ್ಜಯಿನಿ ಜಗದ್ಗುರು ಮಹಾಸನ್ನಿಧಿಯವರು ಕೆಲವು ಅಲಭ್ಯ ಗ್ರಂಥಗಳನ್ನು ಮರುಮುದ್ರಿಸುವ ಹಾಗೂ ಕೆಲವು ಉಪಯುಕ್ತ ಗ್ರಂಥಗಳನ್ನು ಕೊಡಮಾಡುವ ಒಳ್ಳೆಯ ಯೋಜನೆ ಹಾಕಿಕೊಂಡಿದ್ದಾರೆ. ಈ ಯೋಜನೆಯ ಅಡಿಯಲ್ಲಿ "ವೀರಶೈವ ಪಂಚಪೀಠ ಪರಂಪರೆ" ಮರುಮುದ್ರಣಗೊಳ್ಳುತ್ತಿರುವುದು ಶ್ರೀ ಸನ್ನಿಧಿಯವರು ಧರ್ಮಜಿಜ್ಞಾಸುಗಳಿಗೆ ಮಾಡಿದ ಉಪಕಾರವಾಗಿದೆ. ಈ ಮೊದಲು ೨೦೦೧ ರಲ್ಲಿ ಇದೇ ಗ್ರಂಥವು 'ಶ್ರೀ ಜಗದ್ಗುರು ಸದ್ಧರ್ಮ ಸಿಂಹಾಸನ ಜ್ಞಾನಗುರು ವಿದ್ಯಾಪೀಠ'ದ ಪ್ರಕಟಣೆಯಾಗಿ ಐದು ಸಾವಿರ ಪ್ರತಿಗಳ ರೂಪದಲ್ಲಿ ಕೊಡಮಾಡಲ್ಪಟ್ಟಿತ್ತು ಎಂಬುದನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕಾಗಿದೆ.

ಪರಿಷ್ಕೃತ ದ್ವಿತೀಯ ಆವೃತ್ತಿಗೂ ಸಂಪಾದಕನಾಗಿ ಕಾರ್ಯನಿರ್ವಹಿಸಿದ ಭಾಗ್ಯಶಾಲಿಯಾದ ನನಗೆ ಜಗದ್ಗುರುಗಳವರು ಈ ತೃತೀಯ ಆವೃತ್ತಿಯ ಸಂಪಾದನಾ ಕಾರ್ಯವನ್ನು ವಹಿಸಿಕೊಟ್ಟಿರುವುದು ಸಂತಸ ತಂದಿದೆ. ಪಂಚಪೀಠಾಧೀಶ್ವರರು ಸಮಾಜ – ಧರ್ಮ – ಸಂಸ್ಕೃತಿ ಹಾಗೂ ನಾಡು – ನುಡಿಗೆ, ದ್ವಿತೀಯ ಆವೃತ್ತಿಯ ನಂತರದ ದಿನಗಳಲ್ಲಿ ನೀಡಿದ ಕೊಡುಗೆಗಳನ್ನು ಈ ಕೃತಿಯಲ್ಲಿ ದಾಖಲಿಸಲಾಗಿದೆ. ಇದು ಎಲ್ಲ ಪೀಠಗಳ ಹಾಗೂ ಪೀಠಾಚಾರ್ಯರ ಸಂಕ್ಷಿಪ್ತ ಪರಿಚಯ ಮಾಡಿಕೊಡುವಲ್ಲಿ ಸಫಲವಾಗಿದೆ ಎಂದು ಭಾವಿಸಿದ್ದೇನೆ. ಗ್ರಂಥದ ಮೂಲ ಲೇಖಕರಾದ ಪ್ರಸ್ತುತ ಶ್ರೀ ಕಾಶಿ ಜ್ಞಾನಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರ ಆಶೀರ್ವಾದ ಹಾಗೂ ಅಪ್ಪಣೆಗಳೊಂದಿಗೆ ಈ ಸೇವೆಯನ್ನು ಶಿರಸಾವಹಿಸಿ ಮಾಡುತ್ತಿದ್ದು ಅವರಿಗೂ ಮತ್ತು ಉಜ್ಜಯಿನಿ ಜಗದ್ಗುರು ಮಹಾಸನ್ನಿಧಿಯವರಿಗೂ ತ್ರಿಕರಣಪೂರ್ವಕ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಮುದ್ರಣ ಸೇವೆಗೈದ ಶ್ರೀ ಜಗದ್ಗುರು ದಾರುಕ ಗ್ರಾಫಿಕ್ಸ್, ಕೊಟ್ಟೂರು ಇವರಿಗೂ, ಅಕ್ಷರ ಜೋಡಣೆ ಸೇವೆ ಮಾಡಿದ ಡಾ. ಚೆನ್ನು ಹಿರೇಮಠ ಇವರಿಗೂ



## ಮುನ್ನುಡಿ ೧

ಡಾ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ನಿಗಮಾಗಮಗಳ ಆಧಾರದ ಮೇಲೆ ಬರೆದಿರುವ 'ವೀರಶೈವ ಪಂಚಪೀಠ ಪರಂಪರೆ'ಯು ಅವರದೇ ಆದ ಪೀಠಿಕೆಯೊಡನೆ ಪ್ರಕಟವಾಗುತ್ತಲಿರುವುದು ವೀರಶೈವ ಸಮಾಜದ ಪುಣ್ಯೋದಯವೆನಿಸಿದೆ. ಇದು ಸರ್ವ ಮಾನವರ ಹೃದಯದ ಕಗ್ಗತ್ತಲೆಯನ್ನು ಹೊರದೂಡುವ ಜ್ಞಾನದೀವಿಗೆಯಾಗಿ ಶೋಭಿಸುತ್ತಲಿರುವುದು. ಮಾನವ ಸಮಾಜ ಕತ್ತಲೆಯಿಂದ ಬೆಳಕಿಗೆ ಹಾದುಹೋಗುವಾಗ ಜಾತಿ ಮತಗಳ ಗೊಂದಲಕ್ಕೆಡೆಗೊಡದೆ ಸರ್ವರನ್ನೂ ಆತ್ಮೋನ್ನತಿಯ ದಿವ್ಯಪಥದಲ್ಲಿ ಒಯ್ಯುವ ದಿವ್ಯತೇಜೋಮೂರ್ತಿಗಳು ಯುಗಯುಗದಲ್ಲೂ ಅವತರಿಸುತ್ತ ಬಂದಿದ್ದಾರೆ.

ಯದಾಯದಾಹಿ ಧರ್ಮಸ್ಯ ಹಾನಿಃ ಶೈವಸ್ಯ ಜಾಯತೇ ।
ತದಾತದಾವತಾರೋಽಯಂ ಗಣೇಶಾನಾಂ ಮಹೀತಲೇ ॥

ಶೈವ ಧರ್ಮ ಪ್ರಸಾರಕ್ಕೆ ಯಾವಾಗ ಹಾನಿ ಸಂಭವಿಸುವುದೋ ಆಯಾ ಕಾಲಗಳಲ್ಲಿ ಈ ಭೂಮಿಯಲ್ಲಿ ಪ್ರಮಥಗಣರು ಅವತರಿಸುವರು ಎಂದು ಶಂಕರ ಸಂಹಿತೆ ಧರ್ಮೋದ್ಧಾರಕ್ಕಾಗಿ ಪ್ರಮಥರು ಆಗಾಗ್ಗೆ ಅವತರಿಸುವರೆಂದು ತಿಳಿಸಿದೆ. ಹಾಗೆ ಅವತರಿಸಿದ ಮಹಾಪುರುಷರೇ ರೇಣುಕಾದ್ಯಾಚಾರ್ಯರೆಂದೂ, ಬಸವಾದಿ ಪ್ರಮಥರೆಂದೂ ವಿಶ್ರುತರಾಗಿರುವರು.

"ಪುರಾದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ" ಎಂದು ಸಿದ್ಧಾಂತ ಶಿಖಾಮಣಿ ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತವನ್ನು ಬಹಳ ಪ್ರಾಚೀನ ಕಾಲದಲ್ಲಿಯೇ ಪರಶಿವನು ಕೈಲಾಸದಲ್ಲಿ ತನ್ನ ಭಾರ್ಯೆಯಾದ ಭವಾನಿಗೂ, ಮಗನಾದ ಷಣ್ಮುಖನಿಗೂ ಬೋಧಿಸಿದನೆಂದೂ ಅದೇ ತತ್ತ್ವವನ್ನು ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗೆ ಇಲ್ಲಿ ಬೋಧಿಸಿದರೆಂದೂ ತಿಳಿಸುತ್ತದೆ. ಹೀಗೆಯೇ ಲೋಕಕಲ್ಯಾಣಕ್ಕಾಗಿ ಪರಮಾತ್ಮನೇ ಯುಗಯುಗದಲ್ಲಿ ಅವತರಿಸಿ ಮಾನವ ಸಮಾಜವನ್ನು ಕತ್ತಲೆಯಿಂದ ಬೆಳಕಿಗೆ ಒಯ್ಯುತ್ತಿರುವನು. ಲೋಕದಲ್ಲಿ ಅಧರ್ಮ ಹೆಚ್ಚಿ ಧರ್ಮಕ್ಕೆ ಗ್ಲಾನಿಯುಂಟಾಗುವುದನ್ನು ಅವನು ಎಂದೆಂದಿಗೂ ಸಹಿಸಲಾರನು. ಹಾಗೆಯೇ ಸಾಧುಗಳು ಸಂತಾಪ ಪಡುವುದನ್ನೂ, ಪಾಪಿಗಳು ದುರಹಂಕಾರದಿಂದ ಮೆರೆಯುವುದನ್ನೂ ಅವನು ಒಪ್ಪಲಾರನು. ಜಗತ್ತೆಲ್ಲವೂ ಅವನ ಲೀಲಾರಂಗ ಸ್ಥಳವೇ ಆಗಿರುವುದರಿಂದಲೂ, ಪ್ರತಿಯೊಬ್ಬ ಜೀವಿಯೂ ಅವನ ಚೈತನ್ಯದ ನೇರವಾದ ಅಂಶವಾಗಿರುವುದರಿಂದಲೂ ಅವನಿಗೆ ನಮ್ಮ ಮೇಲೆ ಅಪಾರವಾದ ಕರುಣೆಯಿದೆ. ಆದ್ದರಿಂದ ಜಗದ್ರಕ್ಷಣೆಯ ಹೊಣೆಯನ್ನು ಅವನೇ ಹೊತ್ತಿರುವನು. ಇದಕ್ಕಾಗಿ ಕೆಲವು ವೇಳೆ ಅವನೇ ನೇರವಾಗಿ ಅವತರಿಸುವನು. ಇದು ಶೈವ ವೈಷ್ಣವ ಪಂಥಗಳಿಗೆ ಸಹಜವಾಗಿ ಅನ್ವಯಿಸುತ್ತದೆ. ವೀರಶೈವ ಪಂಥದಲ್ಲಾದರೋ ಹಿಂದೆ ತಿಳಿಸಿದಂತೆ ಜ್ಞಾನಪೂರ್ಣ ಪರಂಜ್ಯೋತಿ ಸ್ವರೂಪರಾದ ಪ್ರಮಥ ಗಣಗಳ ಅವತಾರವು ಪ್ರತಿಯೊಂದು ಯುಗದಲ್ಲೂ ಸಹಜವಾಗಿ ಸಂಭವಿಸುತ್ತಲಿರುವುದು.

---

೧. ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಪ್ರಾಧ್ಯಾಪಕರು ಮತ್ತು ಸಂಸ್ಕೃತ ವಿಭಾಗದ ಮುಖ್ಯಸ್ಥರೂ ಆಗಿದ್ದ ಡಾ. ಟಿ.ಜಿ.ಸಿದ್ಧಪ್ಪಾರಾಧ್ಯ ಅವರು ಪ್ರಥಮ ಆವೃತ್ತಿಗೆ ಬರೆದ ಮುನ್ನುಡಿಯನ್ನು ಯಥಾವತ್ ಉಲ್ಲೇಖಿಸಲಾಗಿದೆ. ಏಕೆಂದರೆ ಇದು ವಿದ್ವತ್‌ಪೂರ್ಣವಾಗಿದ್ದು, ಪರಂಪರೆ

ಹಾಗೂ ಸಿದ್ಧಾಂತಕ್ಕೆ ಪೋಷಕವಾಗಿದೆ.

– ಸಂಪಾದಕ

ರೇಣುಕಾರಾಧ್ಯ, ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯ ಎಂಬ ಆಚಾರ್ಯರು ಬಹಳ ಹಿಂದೆಯೇ ಅವತರಿಸಿ ಭಾರತದ ಅನೇಕ ಕಡೆಗಳಲ್ಲಿ ನೆಲೆಸಿ ಧರ್ಮವನ್ನು ಬೋಧಿಸಿರುವರು. ಅವರು ಸ್ಥಾಪಿಸಿರುವ ಮಠಗಳು ಈಗಲೂ ಭಕ್ತವೃಂದಕ್ಕೆ ಆದರ್ಶವೂ, ಮಾರ್ಗದರ್ಶಕವೂ ಎನಿಸುವಷ್ಟು ಪವಿತ್ರ ಜ್ಞಾನಕೇಂದ್ರಗಳಾಗಿ ಶೋಭಿಸುತ್ತಲಿವೆ. ಈ ಮಠಗಳು ರಂಭಾಪುರಿ, ಉಜ್ಜಯಿನಿ, ಕೇದಾರ, ಶ್ರೀಶೈಲ, ಕಾಶೀ ಕ್ಷೇತ್ರಗಳಲ್ಲಿ ಈಗಲೂ ಭಕ್ತರಿಗೆ ಆಕರ್ಷಕವಾಗಿರುವುವು. ವೀರಶೈವ ಮತವು ಮಹಾಭಾರತ ಕಾಲದಲ್ಲಿ ಇದ್ದುದರಿಂದಲೇ ಲಿಂಗಧಾರಿಗಳನ್ನು ದಾನಾರ್ಹರೆಂದೂ, ಶಿವಯಜ್ಞರೂಪವಾದ ತಪಸ್ಸನ್ನಾಚರಿಸುವವರೆಂದೂ ಭೀಷ್ಮನು ಸೂಚಿಸಿದ್ದಾನೆ. ಹೀಗೆಯೇ ರಾಮಾಯಣ ಕಾಲದಲ್ಲಿ ಲಿಂಗಪೂಜೆ ಇದ್ದುದರಿಂದಲೇ ಈ ಮತದ ಪ್ರಾಚೀನತೆಯು ಸ್ಪಷ್ಟಪಡುತ್ತದೆ. ರಾಮನೇ ಲಿಂಗಪೂಜೆ ಮಾಡಿ ಶಿವನ ಅನುಗ್ರಹವನ್ನು ಪಡೆದು, ರಾವಣ ಸಂಹಾರದಿಂದೊದಗಿದ ತನ್ನ ಪಾಪವನ್ನು ಕಳೆದುಕೊಂಡಿರುವನು. ದ್ರಾವಿಡ ಸಂಸ್ಕೃತಿಗೆ ಮೂಲಪುರುಷನಾದ ಅಗಸ್ತ್ಯನಿಗೆ ರೇಣುಕಾಚಾರ್ಯರು ಶಿವದೀಕ್ಷೆಯನ್ನು ಅನುಗ್ರಹಿಸಿ ಶಿವತತ್ತ್ವವನ್ನು ಉಪದೇಶಿಸಿದ್ದರಿಂದ ಸುಮಾರು ಕ್ರಿಸ್ತಪೂರ್ವ ಆರು ಸಾವಿರ ವರ್ಷಗಳ ಹಿಂದೆಯೇ ರೇಣುಕಾಚಾರ್ಯರು ಕಲಿಯುಗದಲ್ಲಿ ಕೊಲ್ಲಿಪಾಕಿ ಸೋಮೇಶ್ವರ ಲಿಂಗದಲ್ಲಿ ಉದ್ಭವಿಸಿ, ಅನೇಕ ಕಡೆ ಸಂಚರಿಸಿ ಶಿವತತ್ತ್ವವನ್ನು ಬೋಧಿಸಿರುವರೆಂದು ತಿಳಿದುಬರುತ್ತದೆ. ಅವರು ಇದಕ್ಕೂ ಹಿಂದೆ ತ್ರೇತಾಯುಗದಲ್ಲಿ ವಿಭೀಷಣನ ಪ್ರಾರ್ಥನೆಯಂತೆ ಲಂಕೆಯಲ್ಲಿ ಮೂರು ಕೋಟಿ ಗುರು ರೂಪಗಳನ್ನು ಧರಿಸಿ ಮೂರು ಕೋಟಿ ಲಿಂಗಗಳನ್ನು ಏಕಕಾಲದಲ್ಲಿ ಸ್ಥಾಪಿಸಿದರೆಂದು 'ಸಿದ್ಧಾಂತಶಿಖಾಮಣಿ' ತಿಳಿಸುತ್ತದೆ. ಸಿಲೋನ್‌ನಲ್ಲಿ ಭೂಗರ್ಭ ಶೋಧನೆಯಿಂದ ಸಿಕ್ಕಿರುವ ಲಿಂಗಗಳು ಹಿಂದೆ ರೇಣುಕರು ಪ್ರತಿಷ್ಠಿಸಿದ ಲಿಂಗಗಳೇ ಆಗಿರಬೇಕೆಂದು ಊಹಿಸಬಹುದಾಗಿದೆ. ಒಟ್ಟಿನಲ್ಲಿ ಆಚಾರ್ಯರು ವೀರಶೈವ ಧರ್ಮವನ್ನು ಭೂಲೋಕದಲ್ಲಿ ಮೊದಲಿಗೆ ಬೋಧಿಸಿದರೆಂಬ ಬಗ್ಗೆ ಯಾವ ಸಂದೇಹಕ್ಕೂ ಎಡೆಯಿಲ್ಲ. ಈ ಬಗ್ಗೆ ಡಾ॥ ಶಿ.ಚೆ. ನಂದೀಮಠರು ಹೀಗೆ ಹೇಳುತ್ತಾರೆ. "ಸಂಕ್ಷೇಪವಾಗಿ ಹೇಳುವುದಾದರೆ ಈ ಐದು ಜನ ಆಚಾರ್ಯರು ವೀರಶೈವ ಧರ್ಮವನ್ನು ಮೊದಲು ಬೋಧಿಸಿದರೆಂದು ನಂಬಲಾಗಿದೆ. ಅಂದರೆ ಅವರು ಸಂಪ್ರದಾಯಾನುಸಾರವಾಗಿ ವೀರಶೈವ ಧರ್ಮವನ್ನು ಬೋಧಿಸಿದ ಮೂಲ ಪುರುಷರಾಗಿರುವರು. ಇವರು ಬೋಧಿಸಿದ ಧರ್ಮವನ್ನು ಬಸವಾದಿ ಶರಣರು ವಿಶೇಷವಾಗಿ ಪ್ರಚಾರ ಮಾಡಿದ್ದಾರೆ".

ಇಂಥ ಪರಿಸ್ಥಿತಿಯಲ್ಲಿ ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ವೀರಶೈವರ ವೈಶಿಷ್ಟ್ಯಗಳನ್ನು ಸ್ಪಷ್ಟವಾಗಿ ಪ್ರತಿಪಾದಿಸಿರುವುದು ತುಂಬ ಆದರ್ಶವೆನಿಸಿದೆ. ಇವರು ಹೇಳುವಂತೆ ಯಾರು ಶೈವಮತ ಸಂರಕ್ಷಣೆಗಾಗಿ ತಮ್ಮ ಪ್ರಾಣವನ್ನೂ ಸಹ ಸಮರ್ಪಿಸಲು ಮುಂದೆ ನುಗ್ಗುವರೋ ಅವರು ಶಿವನ ನಿತ್ಯಭಿಯೋಗದಿಂದ ಶಿವಭಕ್ತರೆನಿಸಿ ಶಿವಯಜ್ಞವನ್ನು ಆಚರಿಸುವವರೆಂದು ವೀರಪದವು ತಿಳಿಸುತ್ತದೆ. ವೀರಶೈವ ಮತವು ಅಹಿಂಸೆಯನ್ನು ಪ್ರಧಾನವಾಗಿ ಬೋಧಿಸಿದೆಯಾದರೂ, ಶಿವಲಿಂಗಕ್ಕೂ, ಶಿವಯೋಗಿಗೂ ದುಷ್ಟರಿಂದ ಹಿಂಸೆಯೊದಗಿದಾಗ ನಪುಂಸಕರಾಗಬಾರದೆಂದೂ, ತಮ್ಮ ಶಕ್ತಿಮೀರಿ ದುಷ್ಟರನ್ನು ನಿಗ್ರಹಿಸಬೇಕೆಂಬ ವೀರವ್ರತದಿಂದ ಶಿವಭಕ್ತನಿಗೆ ವೀರಶೈವನೆಂಬ ಹೆಸರು ಬಂದಿತೆಂದೂ ಶ್ರೀ ಸ್ವಾಮಿಗಳು ಪ್ರಮಾಣಬದ್ಧವಾಗಿ ಪ್ರತಿಪಾದಿಸಿರುವರು. ವೀರಶೈವರು ಲಿಂಗಕ್ಕೆ ಅಧೀನವಾಗಿ ನಿತ್ಯವ್ಯವಹಾರವನ್ನು ಲಿಂಗ ಪ್ರೀತ್ಯರ್ಥವಾಗಿಯೇ ನಡೆಸುತ್ತ , ಇವರ ಮನಚಿತ್ ಪ್ರಾಣಗಳೆಲ್ಲವೂ ಲಿಂಗಕ್ಕೇ ಅಂಟಿಕೊಂಡಿರುವುದರಿಂದ ಇವರಿಗೆ ವೀರಶೈವ ಹೆಸರಿದೆ. ಶೈವಮತವು ಪ್ರತಿಷ್ಠಿತ ಲಿಂಗದ ಅರ್ಚನವನ್ನು ವಿಧಿಸಿದೆ. ಇದರಿಂದ ದೇಹಕ್ಕೆ ಶಿವನ ನಿತ್ಯ ಸಂಬಂಧವುಂಟಾಗಲಾರದೆಂದು ವೀರಶೈವ ಮತವು ಗುರ್ವನುಗ್ರಹೀತವೂ, ಷಟ್‌ಸ್ಥಲಾತ್ಮಕವೂ, ಪ್ರಾಣರೂಪವೂ ಆದ ಇಷ್ಟಲಿಂಗದ ಅರ್ಚನೆಯ ವಿನಾ ಬೇರೆ ಯಾವ ಮೂರ್ತಿಪೂಜೆಯನ್ನಾಗಲಿ ಪ್ರತಿಷ್ಠಿತ ಲಿಂಗದ ಆರ್ಚನೆಯನ್ನಾಗಲಿ ಮಾಡಬಾರದೆಂದು ವಿಧಿಸಿದೆ. ದೇವಾಲಯದಲ್ಲಿ ಪ್ರತಿಷ್ಠಿತವಾದ ಸ್ಥಾವರಲಿಂಗದ ಆರಾಧನವನ್ನು ಇದು ಒಪ್ಪುವುದಿಲ್ಲ. ಆದರೆ ವೀರಶೈವನು ದೀಕ್ಷಾಕಾಲದಲ್ಲಿ ಗುರುವಿನಿಂದ ಪಡೆದ ತನ್ನ ಇಷ್ಟಲಿಂಗದಲ್ಲಿಯೇ ಪರಮಾತ್ಮನನ್ನು ಆರಾಧಿಸಬೇಕೆಂದು ಅದು ಪ್ರತಿಪಾದಿಸುತ್ತದೆ. ವೀರಶೈವರಿಗೆ ಲಿಂಗವೆಂದರೆ ಶಿವನೇ ಆಗಿರುವನಲ್ಲದೆ ಲಿಂಗವು ಶಿವನ ಕೇವಲ ವಿಗ್ರಹವೆಂದಲ್ಲ. ಪರಶಿವನು ದೇಹದಲ್ಲಿ ಚೈತನ್ಯರೂಪದಲ್ಲಿ ವಾಸವಾಗಿದ್ದಾನೆ. ಅವನನ್ನು ಗುರುವು ತನ್ನ ಆತ್ಮಶಕ್ತಿಯ ಪ್ರಭಾವದಿಂದ ಲಿಂಗರೂಪದಲ್ಲಿ ಹೊರಗೆ ತಂದು ಶಿಷ್ಯನ ಕೈಗೆ ಅರ್ಚನೆಗಾಗಿ ಕೊಡುವನು. ಈ ಲಿಂಗವು ಶಿಷ್ಯನ ಕೈಯಲ್ಲಿ ಅವನ ಕಣ್ಮನ ಭಾವನೆಗಳಿಗೆ ಒಂದು ದಿವ್ಯ ತೇಜೋನಿಧಿಯಾಗಿ ಶೋಭಿಸುತ್ತಿರುವುದು. ಅದು ಯಾವ ಕಾರಣದಿಂದಲೂ ದೇಹದಿಂದ ವಿಯೋಗ ಹೊಂದಬಾರದು. ಅದರ ವಿಯೋಗವು ಆತ್ಮಶಕ್ತಿಯ ನಾಶಕ್ಕೆ ಸಮವೆನಿಸುವುದು. ಆ ಲಿಂಗದ ವಿನಾ ಬೇರೆ ಯಾವ ಆಕಾರದಲ್ಲೂ ಶಿವನ ಅರ್ಚನೆಯನ್ನು ವೀರಶೈವ ಧರ್ಮವು ಒಪ್ಪುವುದಿಲ್ಲ. ಈ ಬಗೆಯ ನಿಷ್ಠೆಯನ್ನು ಯಾವಜ್ಜೀವವೂ ಆಚರಿಸುವುದೇ ವೀರವ್ರತವೆಂಬುದನ್ನು ಶ್ರೀ ಸ್ವಾಮಿಗಳು ಪ್ರಮಾಣಬದ್ಧವಾಗಿ ಪ್ರತಿಪಾದಿಸಿರುವರು.

ಇಷ್ಟಲಿಂಗಧಾರಿಯೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯಾಗುವನೆಂದು ಶ್ರೀಕರಭಾಷ್ಯದ ಪ್ರಮಾಣವನ್ನು ಶ್ರೀಗಳು ಉದಾಹರಿಸಿರುವುದು ಸಮಂಜಸವಾಗಿದೆ. ವೀರಶೈವ ದಾರ್ಶನಿಕ ಸಿದ್ಧಾಂತವನ್ನು ಪೀಠಿಕೆಯಲ್ಲಿ ಹೆಸರಿಸುತ್ತ ಅದನ್ನು ಭೂತಲದಲ್ಲಿ ಸ್ಥಾಪಿಸಿದ ಜಗದ್ಗುರು ಪಂಚಾಚಾರ್ಯರ ಪಂಚಪೀಠ ಪರಂಪರೆಯನ್ನು ಶ್ರೀಗಳು ಸೂಕ್ತವಾಗಿ ಆರಂಭಿಸಿರುವರು. ಅವರೈವರಿಗೂ ನಾಲ್ಕು ಯುಗಗಳಲ್ಲೂ ಪ್ರಚಾರದಲ್ಲಿದ್ದ ಹೆಸರುಗಳನ್ನೂ, ಅವರ ಉತ್ಪತ್ತಿ ಪ್ರಕಾರಗಳನ್ನೂ ವಿಶದವಾಗಿ ಪ್ರತಿಪಾದಿಸಿರುವರು. ಪ್ರತಿಯೊಂದು ಪೀಠದ ಪರಂಪರೆಯನ್ನು ತಿಳಿಸುತ್ತ ಆ ಪರಂಪರೆಯಲ್ಲಿ ಅಧಿಕಾರಕ್ಕೆ ಬಂದು ಅಂದಿನಿಂದ ಇಂದಿನವರೆಗೂ ಆಗಿರುವ ಜಗದ್ಗುರುಗಳ ಹೆಸರುಗಳನ್ನು ಪ್ರತ್ಯೇಕವಾಗಿ ಸೂಚಿಸಿರುವರು. ಈ ಸಂದರ್ಭದಲ್ಲಿ ಶಿವನಾಗಲಿ, ರುದ್ರನಾಗಲಿ ಮಠಸ್ಥಾಪಕನೆನಿಸದೆ ರೇಣುಕಾದಿ ಆಚಾರ್ಯರೇ ಮೊದಲಿಗೆ ಸಿದ್ಧಾಂತವನ್ನು ಉಪದೇಶಿಸಿದ್ದರಿಂದ ಮಠಸ್ಥಾಪಕರೆಂದು ಪ್ರಮಾಣಬದ್ಧವಾಗಿ ನಿರೂಪಿಸಿರುವರು. ಐವರು ಆಚಾರ್ಯರೂ ಲಿಂಗಗಳಿಂದಲೇ ಉದ್ಭವಿಸಿ ತಮ್ಮ ಗುರುಕಾರ್ಯವನ್ನು ನಿರಾತಂಕವಾಗಿ ನೇರವೇರಿಸಿದೊಡನೆಯೇ ತಾವು ಅವೇ ಲಿಂಗಗಳಲ್ಲಿ ಐಕ್ಯರಾದರೆಂಬುದನ್ನು ಯಾರಿಗೂ,

ಯಾವ ಸಂಶಯವೂ ಹುಟ್ಟದಂತೆ ವೈಜ್ಞಾನಿಕವಾಗಿ ಹಾಗೂ ವೈಚಾರಿಕವಾಗಿ ಎಂತಹ ನಾಸ್ತಿಕರಿಗೂ ಒಪ್ಪಿಗೆಯಾಗುವಂತೆ ಪ್ರತಿಪಾದಿಸಿರುವರು. ಕೊನೆಯಲ್ಲಿ ವೀರಶೈವರ ಗೋತ್ರಸೂತ್ರಗಳನ್ನು ಎಲ್ಲರಿಗೂ ಮನವರಿಕೆಯಾಗುವಂತೆ ವಿಶದಗೊಳಿಸಿರುವರು.

ಸ್ವಾಮಿಗಳು ಸಮಾಜಕ್ಕೆ ಅರ್ಪಿಸಿರುವ ಈ ಮಹತ್ವಪೂರ್ಣ ಗ್ರಂಥವು ವೀರಶೈವ ಪಂಚಪೀಠ ಪರಂಪರೆಯನ್ನು ಸಪ್ರಮಾಣವಾಗಿ ಪ್ರತಿಪಾದಿಸಿ ಯಾರಿಗೂ ಸಂಶಯ ಹುಟ್ಟದಂತೆ ಎಲ್ಲರೂ ಪೀಠಾಚಾರ್ಯರನ್ನು ಗೌರವಿಸಿ, ಪುರಸ್ಕರಿಸುವಂತೆ ಸಮಾಜಕ್ಕೆ ಮಹೋಪಕಾರವನ್ನು ಮಾಡಿರುವರು. ಇಂತಹ ಪವಿತ್ರ ಪ್ರಮಾಣಗ್ರಂಥವು ವೀರಶೈವ ಸಿದ್ಧಾಂತದ ಪ್ರಾಧ್ಯಾಪಕರ ಅಮೃತಹಸ್ತದಿಂದ ಹೊರಬಂದು ಸಮಾಜದ ಬಂಧುಗಳಿಗೆ ದೊರೆತು ಎಲ್ಲರ ಗಮನವನ್ನೂ ಆತ್ಮಜ್ಞಾನ, ಆತ್ಮವಿಶ್ವಾಸ, ಆತ್ಮಗೌರವಗಳ ಕಡೆಗೆ ಪಸರಿಸುವಂತೆ ಮಾಡುವುದೆಂದು ದೃಢವಾಗಿ ಭಾವಿಸಲಾಗಿದೆ. ವೀರಶೈವ ಧರ್ಮತತ್ತ್ವವನ್ನು ತಿಳಿಯಲಿಕ್ಕೂ, ಆಚರಿಸಲಿಕ್ಕೂ ಎಲ್ಲರಿಗೂ ಅವಕಾಶವನ್ನು ಸಂತೋಷದಿಂದ ಕಲ್ಪಿಸಿ ಕೊಟ್ಟಿರುವುದರಿಂದಲೇ ವೀರಶೈವಾಚಾರ್ಯರನ್ನು ಜಗದಾಚಾರ್ಯರೆಂದೂ, ಜಗದ್ಗುರುಗಳೆಂದೂ ಕರೆಯಲಾಗಿದೆ. ಆಚಾರ್ಯರ ಮತ್ತು ಶರಣರ ಸಾಹಿತ್ಯವನ್ನು ಪರ್ಯಾಲೋಚಿಸಿದಾಗ ಅನಾದಿ ಕಾಲದಿಂದಲೂ ವೀರಶೈವರು ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತೆ ಇವನ್ನು ಪಾಲಿಸುತ್ತ ಸರ್ವ ಜೀವರುಗಳನ್ನು ಪ್ರೀತಿಸುವ ಉದಾತ್ತ ಭಾವನೆಯುಳ್ಳವರಾಗಿರುವರೆಂದು ಶ್ರೀ ಸ್ವಾಮಿಗಳು ತಿಳಿಸಿರುವರು. ವೀರಶೈವರ ಈ ಉದಾತ್ತ ಭಾವನೆಯನ್ನು ಅನ್ಯಧರ್ಮದವರೂ ನಿಷ್ಠೆಯಿಂದ ಪರಿಪಾಲಿಸಿದ್ದೇ ಆದರೆ ಇಂದು ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಹಿಂಸಾಚಾರಗಳು ಅಡಗಿ ಜಗತ್ತಿನಲ್ಲಿ ಶಾಂತಿ ನೆಲೆಸುವುದರಲ್ಲಿ ಯಾವ ಸಂದೇಹವೂ ಇಲ್ಲ.

"ಇಷ್ಟ ಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡು ಪ್ರಸಂಗ ಬಂದರೆ ಪ್ರಾಣವನ್ನೇ ತೊರೆಯಬಲ್ಲೆನು. ಆದರೆ ಇಷ್ಟಲಿಂಗದ ಪೂಜೆಯನ್ನು ಎಂದಿಗೂ ಬಿಡೆನು" ಎಂಬ ನಿಷ್ಠಾಭಕ್ತಿಯಿಂದ ಕೂಡಿದ ವೀರಶೈವನು ಜಗತ್ತಿನಲ್ಲಿ ಯಾರನ್ನು ತಾನೆ ನಿಂದಿಸಿಯಾನು? ಯಾವುದೇ ಪ್ರಾಣಿಯನ್ನಾಗಲಿ, ಯಾವುದೇ ಧರ್ಮವನ್ನಾಗಲಿ ದ್ವೇಷಿಸದೆ ವೈರಭಾವ, ಅಸೂಯೆಗಳನ್ನು ಸಂಪೂರ್ಣವಾಗಿ ತ್ಯಾಗಮಾಡಿ ಸರ್ವರೊಡನೆ ಪ್ರೇಮದಿಂದ ವ್ಯವಹರಿಸುವ ಉದಾತ್ತ ಮನೋಭಾವನೆಯನ್ನು ಹುಟ್ಟಿಸುವ ಜಗದಾಚಾರ್ಯರನ್ನು ಯಾರು ತಾನೆ ಗುರುವೆಂದು ಭಾವಿಸಲಾರರು? ಇಂಥವರ ದಿವ್ಯದರ್ಶನದಿಂದ ಯಾವ ಜೀವನು ತಾನೆ ಉದ್ಧಾರವಾಗಲಾರನು? ಬಾಳಿನಲ್ಲಿ ಮಾಯೆಯಿಂದ ಸಂಭವಿಸುವ ಉಪಟಳವನ್ನು ನಿಗ್ರಹಿಸಲು ಯಾರು ತಾನೆ ಮುಂದುವರಿಯಲಾರರು? ಜಗದ್ಗುರುಗಳ ದಿವ್ಯದೃಷ್ಟಿ ಮತ್ತು ಉಪದೇಶಗಳಿಂದ ಯಾರು ತಾನೆ ಪುನೀತರಾಗಲಾರರು? ಸಾಕಾರ ಮೂರ್ತಿಯಾದ ಲಿಂಗದ ನೈಷ್ಠಿಕ ಅರ್ಚನೆಯಿಂದ ನಿರಾಕಾರ ಶಿವತತ್ತ್ವದ ಕೃಪಾಪ್ರಸಾದವನ್ನು ಯಾವ ಸಾಧಕನು ತಾನೆ ಪಡೆಯಲಾರನು? ದೇಹದ ಮೇಲೆ ವ್ಯಾಮೋಹವನ್ನಿರಿಸದೆ ದೇಹದ ಸದುಪಯೋಗದಿಂದಲೇ ತನ್ನ ಜನ್ಮಸಾರ್ಥಕತೆಯನ್ನು ಗುರುಕರುಣೆಯಿಂದ ಯಾರು ತಾನೆ ಪಡೆಯಲಾರರು? ಉನ್ನತವಾದ ಸ್ಥಾನಮಾನಗಳು ಜಗತ್ತಿನಲ್ಲಿ ಧರ್ಮದಿಂದಲೇ ಮಾನವನಿಗೆ ದೊರಕಬೇಕಾಗಿದೆ. ಆ ಧರ್ಮದ ನೈಜಸ್ವರೂಪವು ನಿಗಮಾಗಮಗಳಿಂದಲೇ ಮಾನವನಿಗೆ ದೊರಕಬೇಕಾಗಿದೆ. ಆದರೆ ಅವುಗಳ ಅರ್ಥವಿವರಣೆಯು ಜಗದ್ಗುರುಗಳಿಂದಲೇ ಆಗಬೇಕಾಗಿರುವುದರಿಂದ ನಾವು ಜಗದ್ಗುರುಗಳ ಕರುಣಕಟಾಕ್ಷ ಸತ್ಪಾತ್ರರಾಗಲೇಬೇಕಾಗಿದೆ. ಅಂತಹ ಗುರುಗಳ ಕರುಣೆಯಿಂದಲೇ ನಮ್ಮ ಆತ್ಮಕಲ್ಯಾಣವೂ, ಕೈವಲ್ಯಸ್ಥಿತಿಯೂ ನಮಗೆ ಲಭಿಸಬೇಕಾಗಿವೆ.

'ವೀರಶೈವ ಪಂಚಪೀಠ ಪರಂಪರೆ' ನಮ್ಮೆಲ್ಲರ ಜ್ಞಾನನೇತ್ರವನ್ನು ತೆರೆಯಿಸಿ ಭಕ್ತಿ–ಗೌರವಗಳಿಂದ ಗುರುವನ್ನು ಆದರಿಸಿ, ಉಪಚರಿಸಿ ಅವರ ದಿವ್ಯದೃಷ್ಟಿಗೆ ನಮ್ಮೆಲ್ಲರನ್ನೂ ಸತ್ಪಾತ್ರರನ್ನಾಗಿ ಮಾಡಲು ಸಮರ್ಥವೆನಿಸಿದೆ. ಇಂತಹ ಪವಿತ್ರ ಗ್ರಂಥವು ಇನ್ನೂ ಹಿಂದೆಯೇ ಪ್ರಕಟವಾಗಿದ್ದರೆ ಈ ವೇಳೆಗೆ ಈ ಭೂಮಿಯೇ ಪುಣ್ಯಕ್ಷೇತ್ರವಾಗಿ ಪರಿಣಮಿಸುತ್ತಿತ್ತು. ಭೂಮಿಯೆಲ್ಲವೂ ಈಶಾವಾಸ್ಯ, ಅಂದರೆ ಈಶ್ವರನ ವಸತಿಗೃಹ ಎಂಬ ಅರಿವು ನಮ್ಮೆಲ್ಲರಿಗೂ ಆಗುತ್ತಿತ್ತು. ಇಷ್ಟೇ ಅಲ್ಲದೆ ಎಲ್ಲರೂ ಸತ್ಯಶುದ್ಧ ಕಾಯಕದಲ್ಲಿ ನಿರತರಾಗಿ ಕಾಯಕದ ಬಗ್ಗೆ ರೇಣುಕಾಚಾರ್ಯರು ತಿಳಿಸಿದಂತೆ 'ವೃತ್ತಿಃ ಚೈತನ್ಯ ರೂಪಿಣೀ' ಎಂಬ ದಿವ್ಯೋಪದೇಶದ ಅರಿವು ಲಭಿಸಿ ಭಾರತ ಭೂಮಿ ಸದ್ಗೃಹಸ್ಥರ ನೆಲೆವೀಡಾಗುತ್ತಿತ್ತು. ಈ ಗ್ರಂಥವನ್ನು ಓದಿದ ಮೇಲಾದರೂ ಎಲ್ಲರೂ ತಮ್ಮ ತಮ್ಮ ವೃತ್ತಿಯನ್ನು ಭಗವದ್ಭಾವನೆಯಿಂದ ಗೌರವಿಸುತ್ತ ಭಾರತದೇಶವನ್ನು ಧರ್ಮದ ನಾಡಾಗುವಂತೆ ಮಾರ್ಪಡಿಸುವರೆಂದು ನಂಬಲಾಗಿದೆ. ಮಾನವರಲ್ಲಿ ಸ್ವಾರ್ಥತೆಯ ಕಿಲುಬು ಕಳೆದು, ಮನದ ದುಗುಡವು ತೊಲಗಿ ನಿಸ್ವಾರ್ಥತೆ, ಪರಹಿತ ಚಿಂತನೆ, ಸೇವಾಮನೋಭಾವ, ತ್ಯಾಗಬುದ್ಧಿ, ಉದಾರ ದೃಷ್ಟಿ ಇಂತಹ ದಿವ್ಯ ಆದರ್ಶಗಳನ್ನು ಈ ಗ್ರಂಥವು ಎಲ್ಲರಿಗೂ ದೊರಕಿಸುವುದೆಂದು ಭಾವಿಸಲಾಗಿದೆ.

ಇವತ್ತಿಗೂ ಮಂಗಳಕಾರ್ಯಗಳನ್ನು ನೆರವೇರಿಸುವಾಗ ಪಂಚಕಲಶದ ಸ್ಥಾಪನ ಪೂರ್ವಕವಾಗಿ ಪಂಚಾಚಾರ್ಯರನ್ನು ಭಕ್ತಿ – ಗೌರವಗಳಿಂದ ಸ್ಮರಿಸಿ ಅವರ ಅನುಗ್ರಹವನ್ನು ಪಡೆಯುವ ಪದ್ಧತಿ ಎಲ್ಲೆಲ್ಲೂ ರೂಢಿಯಲ್ಲಿದೆ. ಅವರನ್ನು ಸನ್ಮಾನಿಸುವಂತೆಯೇ ಅವರ ದಿವ್ಯೋಪದೇಶವನ್ನು ಕೇಳಿ ಸದ್ಭಕ್ತರೂ, ಸದ್ಗೃಹಸ್ಥರೂ, ಸತ್ಪ್ರಜೆಗಳೂ ಆಗುವಂತೆ ಸರ್ವರೂ ಪ್ರಯತ್ನಿಸುವುದು ಅತ್ಯಾವಶ್ಯಕ. ಆದ್ದರಿಂದಲೇ ವೀರಶೈವ ಧರ್ಮವು ಕಲ್ಪವೃಕ್ಷದಂತೆ ಸರ್ವಾದರಣೀಯವೂ, ಸನ್ಮಾರ್ಗದರ್ಶಕವೂ ಆಗಿ ಶೋಭಿಸುತ್ತಲಿರುವುದು. ಶಿವನ ನಿತ್ಯಸಂಪರ್ಕದಿಂದಲೇ ಶಿವನ ನೈಜಸ್ವರೂಪವನ್ನು ಅರಿಯುವ ಅವಶ್ಯಕತೆಯಿರುವುದರಿಂದ ಶಿವನನ್ನು ಧಾರಣಮಾಡಿ ಮನಸ್ಸಿನ ಕೊಳೆಯನ್ನು ತೊಳೆದುಕೊಂಡು ನಿರ್ಮಲವಾದ ಮನದಲ್ಲಿ ಪ್ರಸನ್ನನಾಗುವ ಈಶ್ವರನ ಕೃಪೆಗೆ ಎಲ್ಲರೂ ಪಾತ್ರರಾಗಬಹುದಾಗಿದೆ. ಅಹಂಕಾರ, ವ್ಯಾಮೋಹಗಳೆರಡನ್ನೂ ಹೃದಯದಿಂದ ದೂರಮಾಡುವುದೇ ಗುರುಕೃಪೆಯ ದಿವ್ಯ ಫಲ. ಇದು ದೊರಕಿದೊಡನೆಯೇ ಶಿವನು ನಮ್ಮ ಯೋಗಕ್ಷೇಮವನ್ನು ವಹಿಸಿಕೊಳ್ಳುವನು. ಶಿವನ ಪ್ರಸಾದ ನಮಗೆ ದೊರೆತೊಡನೆಯೇ ಎಲ್ಲಾ ಬಗೆಯ ದುಃಖ ದುಮ್ಮಾನಗಳೂ ತೊಲಗುವವು. ಶಿವನ ನಿರಂತರ ಚಿಂತನದಿಂದ ಪಾಪಗಳೆಲ್ಲವನ್ನೂ ಕಳೆದುಕೊಂಡು ಜೀವನು ಶಿವನಾಗುವುದು ನಿಶ್ಚಯ. ಇದು ಗುರುಕರುಣೆಯಿಂದಲೇ ನಮಗೆ ದೊರೆಯಬಹುದಾದ್ದರಿಂದ ಇಂಥ ಸದ್ಗ್ರಂಥಗಳನ್ನು ಪದೇ ಪದೇ ನೋಡಿ, ಮನನ ಮಾಡಿ ಸದ್ಗುರುಗಳನ್ನು ಗೌರವಿಸುವುದೊಂದೇ ನಮ್ಮ ಪಾಲಿನ ಕರ್ತವ್ಯ. ಮುಂದಿನ ಕಾರ್ಯವನ್ನು ಸರ್ವವ್ಯಾಪಿಯೂ, ಸರ್ವಸಾಕ್ಷಿಯೂ ಆದ ಮಹಾದೇವನೇ ನೋಡಿಕೊಳ್ಳುವನು. ಇಂತಹ ದಿವ್ಯ ಜೀವನವನ್ನು ಈ ಸದ್ಗ್ರಂಥವು ಮಾನವರೆಲ್ಲರಿಗೂ

ದೊರಕಿಸುವುದೆಂದೂ, ಇದಕ್ಕಾಗಿ ಸಂಪೂರ್ಣ ಸಹಕಾರ, ಸೌಹಾರ್ದ, ಚಾರಿತ್ರ್ಯಶುದ್ಧಿ ಇವು ಎಲ್ಲರಿಗೂ ಬೆಳಗಲೆಂದೂ ಸಂತೋಷದಿಂದ ಹಾರೈಸಲಾಗಿದೆ.

ಶ್ರೀ ಸ್ವಾಮಿಗಳು ಘನವಿದ್ವಾಂಸರೂ, ಪೂರ್ಣಪಂಡಿತರೂ, ಶಿವಾನುಭವಿಗಳೂ, ಪ್ರವಚನಪಟುವೂ, ನಿರ್ಮಲಹೃದಯರೂ, ದಯಾಮಯರೂ ಆಗಿದ್ದು, ವೀರಶೈವ ಪಂಚಪೀಠ ಪರಂಪರೆಯನ್ನು ಸಾಕಷ್ಟು ಅನುಭವಗಳ ಆಧಾರದ ಮೇಲೆ ಚಿತ್ರಿಸಿರುವರು. ಆಚಾರ್ಯರಿಗೆ ಕೃತ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಬೇರೆ ಬೇರೆ ಹೆಸರಿದ್ದರೂ ಒಬ್ಬೊಬ್ಬ ವ್ಯಕ್ತಿಯೇ ಪ್ರತಿ ಯುಗದಲ್ಲೂ ಆಯಾ ಲಿಂಗಗಳಿಂದಲೇ ಅವತರಿಸಿ ಲೋಕಕಲ್ಯಾಣವನ್ನು ಸಾಧಿಸಿ, ಕಾರ್ಯ ಮುಗಿದೊಡನೆ ಆ ಲಿಂಗದಲ್ಲಿಯೇ ಐಕ್ಯವಾದ್ದರಿಂದ ಅವರು ಹೇಗೆ ಅವತರಿಸಬಲ್ಲರೆಂದು ಸಂಶಯಪಡಲಿಕ್ಕೆ ಯಾರಿಗೂ ಶ್ರೀಸ್ವಾಮಿಗಳು ಅವಕಾಶವನ್ನೇ ಕೊಟ್ಟಿಲ್ಲ. ಪ್ರಹ್ಲಾದನನ್ನು ರಕ್ಷಿಸಲು ಭಕ್ತೈಕಬಂಧುವಾದ ನಾರಾಯಣನು ಗೋಡೆಯಲ್ಲಿಯೇ ಪ್ರತ್ಯಕ್ಷನಾದದ್ದನ್ನು ಯಾರೂ ಸಂಶಯಪಡುವುದಿಲ್ಲ. ವಿಧಿ ನಿಯಮದಂತೆ ಸಂಭವಿಸಿದ ಹಿರಣ್ಯಕಶ್ಯಪನ ವಿಚಿತ್ರವಧೆಯ ಕ್ರಮವನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪ್ರಪಂಚದ ಕಾರ್ಯಗಳೆಲ್ಲವೂ ನಿರಾಕಾರ ಶಿವನ ಕಟ್ಟಳೆಯಂತೆಯೇ ನಿರಾತಂಕವಾಗಿ ನೆರವೇರುತ್ತಿರುವಾಗ ಪಂಚಾಚಾರ್ಯರು ಶಿವನಿಚ್ಛೆಯಂತೆ ತಮ್ಮ ಹಿಂದಿನ ಜ್ಞಾನಶಕ್ತಿ, ಪ್ರಕಾಶಗಳನ್ನು ಉಳಿಸಿಕೊಂಡು ಲಿಂಗಮುಖದಿಂದ ಬಂದು ತಮ್ಮ ಪರಿಪೂರ್ಣತೆಯನ್ನು ಇಲ್ಲಿಯ ಸಭ್ಯಮಾನ್ಯ ಜನತೆಗೆ ಸಂತೋಷದಿಂದ ನೀಡಿ, ಕಾರ್ಯ ಮುಗಿದೊಡನೆ ತಾವು ಬಂದ ದಾರಿ ಹಿಡಿದು ಹೊರಟಿರುವುದರಲ್ಲಿ ಯಾವ ಆಶ್ಚರ್ಯವೂ ಇರಲಾರದು. ಅವರು ಕೈಲಾಸದಿಂದ ಇಲ್ಲಿಗೆ ಬರುವಾಗಲೇ ಪರಿಪೂರ್ಣರೂ, ಸ್ವತಂತ್ರರೂ ಆಗಿದ್ದುದರಿಂದ ಯಾವ ಗುರುವನ್ನೂ ಇಲ್ಲಿ ಆಶ್ರಯಿಸುವ ಅವಶ್ಯಕತೆ ಅವರಿಗೆ ಒದಗಲಿಲ್ಲ. ಶಿವನ ಆಜ್ಞೆಯಂತೆ ಲೋಕ ಕಲ್ಯಾಣವನ್ನು ಸಾಧಿಸುವುದೊಂದೇ ಮಾರ್ಗ ಅವರ ಪಾಲಿಗೆ ಇಲ್ಲಿ ಉಳಿದಿತ್ತು. ಅದನ್ನು ಅವರು ಸಂತೋಷದಿಂದ ನಿರ್ವಹಿಸಿ ಶಿವನ ಕೃಪೆಗೆ ಪೂರ್ಣ ಪಾತ್ರರಾದರೆಂಬುದನ್ನು ಶ್ರೀ ಸ್ವಾಮಿಗಳು ತಮ್ಮ ಪವಿತ್ರ ಗ್ರಂಥದಲ್ಲಿ ಸಪ್ರಮಾಣವಾಗಿ ನೆಲೆಗೊಳಿಸಿರುವರು. ಶಿವನ ಇಚ್ಛೆಯಂತೆ ಇಲ್ಲಿಗೆ ಬಂದ ಶರಣರೆಲ್ಲರೂ ಸಹ ನಿರಂಜನ ಗಣಾಧೀಶ್ವರರ ಅಂಶವೇ ಆಗಿದ್ದು ತಮ್ಮ ಭಾಗದ ಸೇವೆಯನ್ನು ಇಲ್ಲಿ ಅರ್ಪಿಸಿ ಧನ್ಯರಾಗಿ ತಮ್ಮ ಸಂದೇಶವನ್ನು ಆಚಾರ್ಯರಂತೆಯೇ ಎಲ್ಲರಿಗೂ ನೀಡಿರುವರು. ಹಾಗೆ ಎಲ್ಲಾ ಆಚಾರ್ಯರ ಮತ್ತು ಶರಣರ ದಿವ್ಯಸಂದೇಶವನ್ನು ಚೆನ್ನಾಗಿ ತಿಳಿದು ಅದರಂತೆ ಆಚರಿಸುತ್ತ ಬಾಳಿನಲ್ಲಿ ಹೊಸ ಬೆಳಕನ್ನು ಪಡೆದು ವಿಶ್ವಭ್ರಾತೃತ್ವವನ್ನು ಸಂಪಾದಿಸಿ, ಪರಸ್ಪರ ಮೈತ್ರಿ, ಸೌಹಾರ್ದ, ಸಹಕಾರ ಮನೋಭಾವಗಳನ್ನು ಎಲ್ಲರೂ ಸಾಧಿಸಿಕೊಂಡು ನೆಮ್ಮದಿಯಿಂದ ಬಾಳಿದರೆ ಶ್ರೀಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳ ದಿವ್ಯದೃಷ್ಟಿ ಮತ್ತು ಸತ್‌ಸಂಕಲ್ಪ ಸಫಲವಾಗುವುದರಲ್ಲಿ ಯಾವ ಸಂದೇಹವೂ ಇರಲಾರದು. "ಸುಜನಗೆ ಮಂಗಳ, ಕುಜನಗೆ ಮಂಗಳ, ಸರ್ವರಿಗಾಗಲಿ ಮಂಗಳ" ಎಂಬ ಸೂಳ್ನುಡಿಯು ದೈವೀವಾಣಿಯಿಂದ ಈ ಮುನ್ನುಡಿಯನ್ನು ಮಂಗಲಗೊಳಿಸಲಾಗಿದೆ.

ಸರ್ವೇಭದ್ರಾಣಿ ಪಶ್ಯಂತು ಸರ್ವೇ ಸಂತು ನಿರಾಮಯಾಃ ।
ಸರ್ವೇಚ ಸುಖಿನಃ ಸಂತು ಮಾ ಕಶ್ಚಿತ್ ದುಃಖಭಾಕ್ ಭವೇತ್॥


ಮೈಸೂರು ವಿಶ್ವವಿದ್ಯಾನಿಲಯ
ಮಾನಸ ಗಂಗೋತ್ರಿ
ಮೈಸೂರು – ೬

ಲಿಂ.ಡಾ. ಟಿ.ಜಿ. ಸಿದ್ಧಪ್ಪಾರಾಧ್ಯ
ಯು.ಜಿ.ಸಿ. ಸಂಸ್ಕೃತ ಪ್ರಾಧ್ಯಾಪಕ (ನಿವೃತ್ತ)


ಶ್ರೀ ಗುರುಭ್ಯೋ ನಮಃ

## ಪರಾಮರ್ಶೆ

ಪಂಚಾನನ ತನೂದ್ಭೂತಾನ್ ಪಂಚಾಕ್ಷರಮನೂಪಮಾನ್ ।
ಪಂಚಸೂತ್ರ ಕೃತೋ ವಂದೇ ಪಂಚಾಚಾರ್ಯಾನ್ ಜಗದ್ಗುರೂನ್ ॥

ಓಂ ನಮಃ ಪಂಚಾಚಾರ್ಯೇಭ್ಯೋ । ಬ್ರಹ್ಮವಿದ್ಯಾ ಸಂಪ್ರದಾಯ ಕರ್ತೃಭ್ಯೋ
ವೀರಶೈವ ವಂಶ ಋಷಿಭ್ಯೋ । ಮಹದ್ಭ್ಯೋ ನಮಃ ಜಗದ್ಗುರೋಭ್ಯಃ ॥
ಪಂಚವಕ್ತ್ರ ಸಮುತ್ಪನ್ನಾನ್ ಪಂಚಾಚಾರ್ಯಾನ್ ಜಗದ್ಗುರೂನ್ ।
ಪಂಚಲಿಂಗೋದ್ಭವಾನ್ ಸರ್ವಾನ್ ನಮಾಮಿ ಮನಸಾ ಸದಾ ॥

ಈ ಎಲ್ಲ ಶ್ಲೋಕಗಳು ಪಂಚಮುಖವುಳ್ಳ ಶಿವನ ಅಮೃತಮಯ ಶರೀರದಿಂದ ಉದ್ಭವಿಸಿದವರು, ಪಂಚಾಕ್ಷರಮಂತ್ರ ಸೂತ್ರವನ್ನು ಹುಟ್ಟುಹಾಕಿದವರು, ಪಂಚಾಚಾರ್ಯ ಜಗದ್ಗುರುಗಳು ಎಂಬುದನ್ನು ಸಾರುತ್ತವೆ. ಅವರು ಬ್ರಹ್ಮವಿದ್ಯಾ ಸಂಪ್ರದಾಯಕ್ಕೆ ಕರ್ತೃಗಳಾಗಿರುವಂತೆ, ವೀರಶೈವ ವಂಶಕ್ಕೆ ಋಷಿಸ್ವರೂಪರಾಗಿದ್ದಾರೆ. ಅಂಥ ಮಹಂತರಾದ ಜಗದ್ಗುರುಗಳವರಿಗೆ ನಮಸ್ಕಾರವು. ಶಿವನ ಪಂಚಮುಖಗಳಿಂದ ಜನಿಸಿದ, ಪಂಚಲಿಂಗಗಳಿಂದ ಅವತರಿಸಿದ ಜಗದ್ಗುರು ಪಂಚಾಚಾರ್ಯರನ್ನು ಮನಸಾ ನಮಸ್ಕರಿಸುತ್ತೇನೆ ಎಂಬ ಸಾರವನ್ನು ಸಾರುತ್ತದೆ. ಈ ಪಂಚಾಚಾರ್ಯರೇ ಯುಗಯುಗಗಳಲ್ಲಿ ಅವತರಿಸಿ ಬಂದು ಭೂಲೋಕದಲ್ಲಿ ಧರ್ಮಗ್ಲಾನಿಯಾದಾಗ ಸಂಕಷ್ಟಗಳನ್ನು ದೂರೀಕರಿಸಿ, ವೀರಶೈವ ಧರ್ಮಸಾರವನ್ನು ಸಾರಿದರು. ಅಂತೆಯೇ ಇವರು ಭೂಲೋಕದಲ್ಲಿ ವೀರಶೈವ ಧರ್ಮ ಸಂಸ್ಥಾಪಕರಾಗಿದ್ದಾರೆ.

'ವೀರಶೈವ ಪಂಚಪೀಠ ಪರಂಪರೆ' ಎಂಬ ಈ ಗ್ರಂಥವು ಶ್ರೀ ಷ॥ ಬ್ರ॥ ಡಾ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು ಸಂಶೋಧಕ ವಿದ್ಯಾರ್ಥಿಯಾಗಿದ್ದಾಗಲೇ ರಚಿಸಲ್ಪಟ್ಟಿದೆ. ಆದುದರಿಂದ ಓರ್ವ ಸಂಶೋಧಕ ವಿದ್ಯಾರ್ಥಿಗೆ ಇರುವ ಚಿಕಿತ್ಸಕ ಬುದ್ಧಿ, ವಿಷಯ ಸಂಗ್ರಹ ಸಾಮರ್ಥ್ಯ ಇಲ್ಲಿ ಎದ್ದು ಕಾಣುತ್ತವೆ. ಜೊತೆಗೆ ಅತ್ಯಂತ ಸರಳ ನಿರೂಪಣೆಯು ಗ್ರಂಥದ ಆಕರ್ಷಣೆಯನ್ನು ಹೆಚ್ಚಿಸಿದೆ. ಶ್ರೀಗಳವರು ವೇದ, ಆಗಮ, ಉಪನಿಷತ್ತುಗಳನ್ನು ಉಲ್ಲೇಖಿಸಿ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವತಾರಗಳನ್ನು ಸಾಕ್ಷಿಸಮೇತ ಸಿದ್ಧಪಡಿಸಲು ಯತ್ನಿಸಿದ್ದಾರೆ. ಅವರು ಯುಗಯುಗಗಳಲ್ಲಿ ಅವತರಿಸಿ ಕೈಗೊಂಡ ಕಾರ್ಯವನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ವೀರಶೈವರಿಗೆ ಲಿಂಗಧಾರಣೆಯೇ ಪರಮಶ್ರೇಷ್ಠವಾದುದು. ಇಷ್ಟಲಿಂಗಧಾರಣ ಕ್ರಮವು ಐದಾರು ಸಾವಿರ ವರ್ಷಗಳ ಒಂದು ಶ್ರೇಷ್ಠ ಪರಂಪರೆ ಎಂಬುದನ್ನು ಸಿದ್ಧಪಡಿಸಲು ಶ್ರೀಗಳವರು ಪ್ರಯತ್ನಿಸಿದ್ದಾರೆ.

ವೇದಶಾಸ್ತ್ರ ಪುರಾಣೇಷು ಕಾಮಿಕಾದ್ಯಾಗಮೇಷು ಚ।
ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್॥

ಎಂದು ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅಗಸ್ತ್ಯ ಮಹರ್ಷಿಗೆ ಬೋಧಿಸಿದುದು ಇಷ್ಟಲಿಂಗಧಾರಣದ ಶ್ರೇಷ್ಠತೆಯನ್ನು ಸಾರುತ್ತದೆ. ಈ ಸಿದ್ಧಾಂತವನ್ನು ಕಾರ್ಯರೂಪದಲ್ಲಿ ತಂದು, ಇಲ್ಲಿಯವರೆಗೂ ತಪ್ಪದೆ ನಡೆಯಿಸಿಕೊಂಡು ಬಂದವರು ಶ್ರೀ ಜಗದ್ಗುರು ಪಂಚಾಚಾರ್ಯ ಪರಂಪರೆಯವರು. ಅಂದರೆ ಉಪಾಚಾರ್ಯರು, ಪಟ್ಟಾಧ್ಯಕ್ಷರು ಹಾಗೂ ಮಹೇಶ್ವರರು. ಪ್ರತಿಯೊಂದು ಹಳ್ಳಿ – ಪಟ್ಟಣಗಳಲ್ಲಿಯೂ ಮಠ – ಮಾನ್ಯಗಳಿವೆ. ಆ ಮಠಗಳ ಮಠಸ್ಥರು ಅರ್ಥಾತ್ ಗಣಂಗಳು ಗರ್ಭಸ್ಥ ಶಿಶುವಿಗೆ ಲಿಂಗಧಾರಣೆ ಮಾಡುವುದನ್ನು ಮೊದಲ್ಗೊಂಡು ಅಂತ್ಯಸಂಸ್ಕಾರದವರೆಗೆ ಎಲ್ಲ ಸಂಸ್ಕಾರಗಳನ್ನು ಕ್ರಮವತ್ತಾಗಿ ಇಂದಿಗೂ ನಡೆಸಿಕೊಂಡು ಬರುತ್ತಿರುವುದು ಪರಂಪರೆಯ ಉಳಿವಿಗೆ ಬಹುಮುಖ್ಯ ಕಾರಣವಾಗಿದೆ. ಈ ಅಂಶವನ್ನು ಈ ಗ್ರಂಥದಲ್ಲಿ ಪರಂಪರಾಗತ ಪಂಚಾಚಾರ್ಯರ ಚರಿತ್ರೆಯ ಮೂಲಕ ಸಾಬೀತುಪಡಿಸಲಾಗಿದೆ.

ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರೀ।
ಇತರೇಷಾಂ ತು ಶೈವಾನಾಂ ಮುಕ್ತಿರ್ಜನ್ಮತ್ರಯೇಣ॥

ಎಂಬ ಮಾತು ಒಂದೇ ಜನ್ಮದಲ್ಲಿ ವೀರಶೈವರಿಗೆ ಮುಕ್ತಿಯಾದರೆ, ಇತರ ಶೈವರಿಗೆ ಮುಕ್ತಿ ದೊರಕಲು ಮೂರು ಜನ್ಮಗಳನ್ನೇ ಎತ್ತಬೇಕಾಗುತ್ತದೆ. ಈ ಕಾರಣದಿಂದಾಗಿ ಶ್ರೀ ಜಗದ್ಗುರು ಪಂಚಾಚಾರ್ಯರು ಯುಗಯುಗಗಳಲ್ಲಿ ಅವತರಿಸಿ ಬಂದು, ಲಿಂಗಧಾರಣೆಯ ಶ್ರೇಷ್ಠತೆಯನ್ನು ಸಾರುತ್ತಾ, ತತ್ತ್ವವನ್ನು ಉಳಿಸಿ ಬೆಳೆಸಿಕೊಂಡು ಬಂದಿದ್ದಾರೆ. ಈ ಸಿದ್ಧಾಂತವನ್ನು ಜಗನ್ಮಾನ್ಯಗೊಳಿಸಿದ ಶ್ರೇಯಸ್ಸು ಈ ಧರ್ಮ ಸಂಸ್ಥಾಪಕರಿಗೆ ಹಾಗೂ ಈ ಪರಂಪರೆಯಲ್ಲಿ ಬಂದ ಗುರುಗಳಿಗೆ ಸಲ್ಲುತ್ತದೆ.

ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಶ್ರೀಮತ್ ಕಾಶೀ ಜ್ಞಾನಸಿಂಹಾಸನದ ಜಗದ್ಗುರುಗಳಾಗಿ ಈಗ ಜಗದ್ವಂದ್ಯರಾಗಿದ್ದಾರೆ. ಅವರ ವಿದ್ವತ್ತು, ತತ್ತ್ವನಿರೂಪಣೆಯ ಶೈಲಿ, ಶಾಂತಸ್ವಭಾವ, ಎಲ್ಲರನ್ನೂ ಅವರವರ ಸ್ಥಾನಮಾನಗಳಿಗನುಸರಿಸಿ ಗುರುತಿಸುವ, ಗೌರವಿಸುವ ಗುಣ ಶ್ರೇಷ್ಠತೆ ಅನುಕರಣೀಯವೆನಿಸಿವೆ. ಅವರ ಆಶೀರ್ವಚನವನ್ನು ಆಲಿಸಿದವರು ಅದಕ್ಕೆ ಮಾರುಹೋಗುತ್ತಾರೆ. ಅಷ್ಟೊಂದು ಸುಂದರ, ಸರಳ ಶೈಲಿಯಲ್ಲಿ ಅವರು ಆಶೀರ್ವಚನಗಳನ್ನು ನೀಡಿದುದನ್ನು ನಾವೂ ಕೇಳಿ ಆನಂದಿಸಿದ್ದೇವೆ. ಗದಗ–ಬೆಟಗೆರೆ ನಗರದ ಮಹಾಜನತೆ ಅವರ ಶಿವಪೂಜಾ ನಿಷ್ಠೆ ಹಾಗೂ ತತ್ತ್ವ ನಿರೂಪಣೆಗೆ ಮಾರುಹೋಗಿದ್ದಾರೆ. ಅಂತೆಯೇ ಕಳೆದ ಮೂರು ವರ್ಷಗಳಿಂದ ವರ್ಷವರ್ಷವೂ ಆ ಕಾರ್ಯಕ್ರಮಗಳನ್ನು ಗದಗ–ಬೆಟಗೇರಿ ನಗರದಲ್ಲಿ ನಡೆಸುತ್ತಲಿದ್ದಾರೆ. ಜಗದ್ಗುರುಗಳವರ ಈ ಗ್ರಂಥವು ಈಗ ರಾಣೇಬೆನ್ನೂರಿನ ಪ್ರೊ ಅ.ಸಿ. ಹಿರೇಮಠ ಅವರಿಂದ ಪರಿಷ್ಕೃತವಾಗಿದೆ. ವರ್ತಮಾನ ಜಗದ್ಗುರುಗಳವರ ಚರಿತ್ರೆಗಳನ್ನು ಈ ಪರಂಪರೆ ಗ್ರಂಥದಲ್ಲಿ ತುಂಬ ಅರ್ಥಪೂರ್ಣವಾಗಿ, ಅಷ್ಟೇ ಆಕರ್ಷಕ ಶೈಲಿಯಲ್ಲಿ ಅ.ಸಿ. ಹಿರೇಮಠರು ನಿರೂಪಿಸಿದ್ದಾರೆ. ಅಂಥ ಉತ್ಕೃಷ್ಟ ಗ್ರಂಥವು ಜಮಖಂಡಿ ನಗರದಲ್ಲಿ ಜರುಗುತ್ತಿರುವ ಶ್ರೀ ಜಗದ್ಗುರು ಪಂಚಾಚಾರ್ಯ ಯುಗಮಾನೋತ್ಸವದ ಸುಸಂದರ್ಭದಲ್ಲಿ ಬಿಡುಗಡೆಗೊಳ್ಳುತ್ತಿರುವುದು ಸಂತೋಷದಾಯಕವೆನಿಸಿದೆ.

ಶ್ರೀ ವೀರೇಶ್ವರ ಪುಣ್ಯಾಶ್ರಮ 'ಸಂಗೀತ ಸಾಹಿತ್ಯ ಚಕ್ರವರ್ತಿ'
ಗದಗ, ಮಾರ್ಚ್ ೨೯, ೨೦೦೧ ಡಾ. ಪಂಡಿತ ಪುಟ್ಟರಾಜ ಕವಿಗವಾಯಿಗಳವರು

---

ವಿ.ಸೂ.ಪೂಜ್ಯ ಡಾ. ಪುಟ್ಟರಾಜ ಕವಿಗವಾಯಿಗಳವರು ನಮ್ಮ ಕೋರಿಕೆಯ ಮೇರೆಗೆ ಈ ಕಿರುನುಡಿ ಒಡವೆಯನ್ನು ಉಡುಗೊರೆಯಾಗಿ ನೀಡಿ, ಈ ಗ್ರಂಥದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಇದರಿಂದ ಪರಿಷ್ಕೃತ ಆವೃತ್ತಿಗೆ ಮತ್ತಷ್ಟು ಮೆರುಗು ಬಂದಿದೆ.

–ಸಂಪಾದಕ

## ಸಂಪಾದಕೀಯ

'ವೀರಶೈವ ಪಂಚಪೀಠ ಪರಂಪರೆ' ಕನ್ನಡದಲ್ಲಿ ಶ್ರೀಜಗದ್ಗುರು ಪಂಚಪೀಠಾಧೀಶ್ವರರ ಚರಿತ್ರೆಯ ಅಧ್ಯಯನದಲ್ಲಿ ಒಂದು ನೂತನ ಅಧ್ಯಾಯವನ್ನೇ ಪ್ರಾರಂಭಿಸಿದಂತಾಗಿದೆ. ಈ ಕೃತಿ ಮೊದಲು ೧೯೮೮ರಲ್ಲಿ ಪ್ರಕಟವಾಯಿತು. ಇದನ್ನು ಬರೆದವರು ಶ್ರೀ ಷ। ಬ್ರ। ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಅಮರೇಶ್ವರಮಠ, ಗುಳೇದಗುಡ್ಡ ಅವರು. ಆಗ ಅವರು ವಾರಾಣಸಿಯ ಡಾ। ಸಂಪೂರ್ಣಾನಂದ ವಿಶ್ವವಿದ್ಯಾಲಯದ ವೇದಾಂತ ವಿಭಾಗದಲ್ಲಿ ಸಂಶೋಧಕ ವಿದ್ಯಾರ್ಥಿಯಾಗಿದ್ದರು. ಒಮ್ಮೆ ಅವರು ತಮ್ಮ ಶ್ರೀಮಠದಲ್ಲಿ ರಜಾಕಾಲದಲ್ಲಿ ವಾಸ್ತವ್ಯ ಮಾಡಿದಾಗ, ಅವರನ್ನು ಕಂಡು ಪಂಚಪೀಠಾಧೀಶ್ವರರ ಪರಂಪರೆಯನ್ನು ಪರಿಚಯಿಸುವ ಗ್ರಂಥದ ಅವಶ್ಯಕತೆ ಇರುವುದನ್ನು ಕಳಕಳಿಯಿಂದ ಅರಿಕೆ ಮಾಡಿಕೊಂಡೆ. ನನ್ನ ವಿಚಾರವನ್ನು ಗಂಭೀರವಾಗಿ ಪರಿಗಣಿಸಿದ ಶ್ರೀಗಳವರು ಆ ದಿಸೆಯಲ್ಲಿ ಕಾರ್ಯ ಪ್ರವೃತ್ತರಾಗಿ ಈ ಕೃತಿಯನ್ನು ಅತ್ಯಲ್ಪ ಅವಧಿಯಲ್ಲಿ ರಚಿಸಿಕೊಟ್ಟರು.

ಹೊನ್ನಾಳಿ ಹಿರೇಕಲ್ಮಠದ ಶ್ರೀ ಷ। ಬ್ರ। ಒಡೆಯರ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ೧೯೮೮ರಲ್ಲಿ 'ಚನ್ನಚೇತನ ಪ್ರಕಾಶನ' ಎಂಬ ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸಿದರು. ಚೊಚ್ಚಲು ಕೃತಿಯಾಗಿ ಒಂದು ಉತ್ಕೃಷ್ಟ ಗ್ರಂಥವನ್ನು ಪ್ರಕಟಿಸುವುದು ಶ್ರೀಗಳವರ ಉದ್ದೇಶವಾಗಿತ್ತು. ಹೀಗೆ ಕಾಕತಾಳೀಯ ಎಂಬಂತೆ ಅಮರೇಶ್ವರಮಠದ ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ 'ವೀರಶೈವ ಪಂಚಪೀಠ ಪರಂಪರೆ' ಕೃತಿಯು ಹೊನ್ನಾಳಿಯ ಶ್ರೀ ಒಡೆಯರ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳ ಸಂಕಲ್ಪದಂತೆ ಪ್ರಥಮ ಕೃತಿಯಾಗಿ ಪ್ರಕಟವಾಯಿತು. ಇಂತಹ ಒಂದು ಸಮೀಕೃತ ಕೃತಿ ಸರಳ ಕನ್ನಡದಲ್ಲಿ ಪ್ರಕಟವಾದುದು ಜನತೆಯು ಹುಬ್ಬೇರಿಸಿ ನೋಡುವಂತೆ ಮಾಡಿತು.

ಒಂದೆರಡು ವರ್ಷಗಳಲ್ಲಿಯೇ ಮೊದಲ ಮುದ್ರಣದ ಮೂರು ಸಾವಿರ ಪ್ರತಿಗಳು ಕನ್ನಡಿಗರ ಮನೆ – ಮನಗಳಲ್ಲಿ ವಿರಾಜಮಾನವಾದವು. ಕಳೆದ ನಾಲ್ಕಾರು ವರ್ಷಗಳಿಂದ ಈ ಕೃತಿಗೆ ಬೇಡಿಕೆ ಇದ್ದೇ ಇದೆ. ಅದನ್ನು ಗಮನಿಸಿದ ಗ್ರಂಥಕರ್ತರು ಮರುಮುದ್ರಣ ಕುರಿತು ಆಲೋಚಿಸತೊಡಗಿದರು. ಅವರು ಈ ಕೃತಿ ಪ್ರಕಟವಾದ ಅನತಿ ಕಾಲದಲ್ಲಿಯೇ ಅಂದರೆ

೧೯೮೯ರ ನವಂಬರ್‌ನಲ್ಲಿ ಶ್ರೀಮತ್ ಕಾಶೀ ಜ್ಞಾನಸಿಂಹಾಸನಾರೋಹಣಗೈದು ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳೆನಿಸಿದರು. ಹೀಗಾಗಿ ಅವರಿಗೆ ಬಿಡುವಿಲ್ಲದ ಕಾರ್ಯಕ್ರಮಗಳು ಬೆಂಬತ್ತಿದವು. ಇತ್ತ ಗಮನ ಹರಿಸಲು ಆಗಲೇ ಇಲ್ಲ.

ಸುದೈವ ಎಂಬಂತೆ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದ ಹಾಗೂ ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ ವಿದ್ಯಾರ್ಥಿಯಾಗಿದ್ದ ಶ್ರೀ ಮರುಳಸಿದ್ಧ ಶಿವಾಚಾರ್ಯರು ದಿನಾಂಕ ೫-೧೧-೧೯೯೫ರಂದು ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರರಾಗಿ ಅಧಿಕಾರ ಸ್ವೀಕರಿಸಿದರು. ಅವರು ವೀರಶೈವ ಪಂಚಪೀಠ ಪರಂಪರೆಯಂತಹ ಉತ್ತಮ ಕೃತಿಯನ್ನು ನಾಡವರಿಗೆ ನೀಡಲು ಮುಂದಾದರು. ಉಭಯ ಜಗದ್ಗುರುಗಳವರು ಪರಸ್ಪರ ಸಮಾಲೋಚಿಸಿ ಈ ಕೃತಿಯ ಮರುಪ್ರಕಟಣೆಗೆ ಮುಂದಾದರು. ಕಳೆದ ೧೦-೧೨ ವರ್ಷಗಳಲ್ಲಿ ಪಂಚಪೀಠಗಳು ಕೆಲವು ನೂತನ ಜಗದ್ಗುರುಗಳವರನ್ನು ಪಡೆದು ಮುನ್ನಡೆಯುತ್ತಲಿವೆ. ಅನೇಕ ಪ್ರಗತಿಪರ ಕಾರ್ಯಗಳನ್ನು, ಲೋಕೋಪಕಾರಿ ಕೆಲಸಗಳನ್ನು ಇಂದು ಪಂಚಪೀಠಗಳು ಕಾಲಗತಿಗೆ ಅನುಸರಿಸಿ ಹಮ್ಮಿಕೊಂಡಿವೆ. ಹೀಗೆ ಹಿಂದಿನ ಹಾಗೂ ಇಂದಿನ ಜಗದ್ಗುರುಗಳ ಚರಿತ್ರೆಗಳನ್ನು ಒಳಗೊಂಡಂತೆ ಒಂದು ಪರಿಷ್ಕೃತ ಆವೃತ್ತಿ ಹೊರತರಲು ನಿರ್ಧರಿಸಿದರು. ಆ ಹೊಣೆಯನ್ನು ನನಗೆ ವಹಿಸಿಕೊಟ್ಟರು. ಇದೀಗ ಆ ಹೊಣೆಹೊತ್ತ ನಾನು ಅಳಿಲು ಸೇವೆ ಮಾಡಲು ಮುಂದಾಗಿದ್ದೇನೆ.

ಮೂಲಕೃತಿಯನ್ನು ವಿಕೃತಗೊಳಿಸದೆ, ಶೇಷ ವಿಷಯಗಳನ್ನು ಸಂಗ್ರಹಿಸಿ, ಮೂಲದಲ್ಲಿ ಅಳವಡಿಸಿ, ವರ್ತಮಾನ ಜಗದ್ಗುರುಗಳವರ ಕಿರುಚರಿತ್ರೆಗಳನ್ನು ಸೇರಿಸಿ, ಈ ಪರಿಷ್ಕೃತ ಆವೃತ್ತಿ ಹೊರತರುವ ಪ್ರಯತ್ನವನ್ನು ವಿನೀತವಾಗಿ ಮಾಡಿದ್ದೇನೆ. ಇದು ಕಷ್ಟನಿಷ್ಠುರದ ಕಾರ್ಯ ಎಂಬುದನ್ನು ನಾನು ಬಲ್ಲೆ. ಆದರೂ ನಿಷ್ಠೆಯಿಂದ ಸತ್ಯಸಂಗತಿಗಳನ್ನು, ಘಟನೆಗಳನ್ನು ಸಂಗ್ರಹಿಸಿ, ಅಭಿಮಾನಿ ಓದುಗ ಬಳಗಕ್ಕೆ ನೀಡಲು ಕೈಲಾದಷ್ಟು ಶ್ರಮಿಸಿದ್ದೇನೆ. ಅದರಲ್ಲೂ ತಪ್ಪು - ಒಪ್ಪುಗಳಿದ್ದರೆ ಒಪ್ಪಿಕೊಂಡು ಮುಂದಿನ ಪ್ರಕಟಣೆಯಲ್ಲಿ ಸೇರಿಸುವ ಇಚ್ಛೆ ನನಗಿದೆ. ಸಹೃದಯ ಓದುಗರು, ವಿಮರ್ಶಕರು, ಸೂಕ್ತ ಸಲಹೆ - ಸೂಚನೆಗಳನ್ನು ನೀಡಿದಲ್ಲಿ ಹೃದಯಾರೆ ಸ್ವಾಗತಿಸುವೆನು.

ಈ ಕೃತಿ ಪ್ರಕಟವಾಗುವ ಈ ಸಂದರ್ಭದಲ್ಲಿ ಪಂಚಪೀಠಗಳ ಒಟ್ಟಾರೆ ಘನತೆ - ಗೌರವ, ಸಾಮಾಜಿಕ ಕಳಕಳಿ, ಧರ್ಮ ಜಾಗೃತಿಯ ಚಿಂತನೆ ಮುಂತಾದ ವಿಷಯಗಳನ್ನು ಕುರಿತಂತೆ ನಾಲ್ಕು ಮಾತು ಹೇಳಿದರೆ ತಪ್ಪಾಗಲಾರದು ಎಂದು ಭಾವಿಸಿದ್ದೇನೆ. ಪಂಚಪೀಠಾಚಾರ್ಯರು ಕೈಗೆತ್ತಿಕೊಳ್ಳುತ್ತಿರುವ ಲೋಕಕಲ್ಯಾಣ ಕಾರ್ಯಗಳನ್ನು ವೈಭವೀಕರಿಸುವ ಗೊಡವೆಗೆ ಹೋಗುವುದಿಲ್ಲ. ಆದರೆ ಶ್ರೀ ಜಗದ್ಗುರು ಪಂಚಪೀಠಾಚಾರ್ಯರು ಸಾಮೂಹಿಕವಾಗಿ ಹಾಗೂ ವೈಯಕ್ತಿಕವಾಗಿ ತಮ್ಮತಮ್ಮ ಇತಿ - ಮಿತಿಗಳಲ್ಲಿ ಅನೇಕ ಲೋಕೋಪಕಾರಿ ಕಾರ್ಯಗಳನ್ನು ಎಸಗಿದುದನ್ನು ಲೋಕ ಗಮನಿಸಬೇಕಾಗಿದೆ. ಈ ಹಿಂದೆ ಮಹಾರಾಷ್ಟ್ರದ ಲಾತೂರು (೩೦-೯-೧೯೯೩) ಹಾಗೂ ಇತ್ತೀಚೆಗೆ ಗುಜರಾತ್‌ನ ಕಚ್‌ನಲ್ಲಿ (೨೬-೧-೨೦೦೧) ಸಂಭವಿಸಿದ ಭೂಕಂಪದನಾಹುತಗಳು ಲೋಕವನ್ನೇ ಕಂಪಿಸುವಂತೆ ಮಾಡಿವೆ. ಅವುಗಳಿಗೆ ಸ್ಪಂದಿಸಿದ ಪಂಚಪೀಠಾಧೀಶ್ವರರು ಅಡ್ಡಪಲ್ಲಕ್ಕಿ ಮಹೋತ್ಸವಗಳನ್ನು ರದ್ದುಪಡಿಸಿ ಪಾದಚಾರಿಗಳಾಗಿ ಲಕ್ಷಾಂತರ ರೂಪಾಯಿಗಳನ್ನು ಸಂಗ್ರಹಿಸಿ, ಭೂಕಂಪ ಪರಿಹಾರ ನಿಧಿಗೆ ಆಶೀರ್ವದಿಸಿದ್ದಾರೆ. ಕಾರ್ಗಿಲ್ ಯುದ್ಧದಿಂದ ಸಂತ್ರಸ್ತರಾದವರ ಪರಿಹಾರ ನಿಧಿಗೂ ನಮ್ಮ ಪಂಚಪೀಠಾಚಾರ್ಯರು ಧನಸಹಾಯ ಮಾಡಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿಯೂ ಸಾಕಷ್ಟು ವಿದ್ಯಾಸಂಸ್ಥೆಗಳನ್ನು, ವಿದ್ಯಾರ್ಥಿ ವಸತಿಗೃಹ ಹಾಗೂ ಪ್ರಸಾದ ನಿಲಯಗಳನ್ನು ತೆರೆಯುವುದರ ಮುಖಾಂತರ ಪೀಠಾಚಾರ್ಯರು ಶಿಕ್ಷಣ ಕ್ಷೇತ್ರಕ್ಕೆ ಸಾಕಷ್ಟು ಕೊಡುಗೆ ನೀಡಿದ್ದಾರೆ. ಸಾಹಿತ್ಯ-ಸಂಗೀತ, ಕಲೆ-ಸಂಸ್ಕೃತಿಗಳ ಪ್ರವರ್ಧಮಾನಕ್ಕೂ ಮನ್ನಣೆ ನೀಡಿದ್ದಾರೆ. ಈ ದಿಸೆಯಲ್ಲಿ ಪಂಚಪೀಠ ಪರಂಪರೆಯಲ್ಲಿ ಬರುವ ಸ್ಥಿರ-ಚರ ಪಟ್ಟಾಧಿಕಾರಿಗಳ ಸೇವೆಯೂ ಸಹ ಅಮೋಘವಾದುದು ಮತ್ತು ಅಪೂರ್ವವಾದುದು.

ಪಂಚಪೀಠಗಳ ಏಕೈಕ ಗುರಿ: ಧಾರ್ಮಿಕ ಹಾಗೂ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಸಮಾಜದ ಮಹಲು ನಿಲ್ಲಬೇಕು, ಸನಾತನ ಧರ್ಮ ಬೆಳೆಯಬೇಕು. ಆಧುನಿಕತೆಯ ಸೋಗಿನಲ್ಲಿ, ವೈಚಾರಿಕತೆಯ ಮುಖವಾಡದಲ್ಲಿ ಧರ್ಮದ ಮೂಲಬೇರುಗಳು ಮುರುಟಿ ಹೋಗಬಾರದು ಎಂಬುದು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಮನೋಗತವಾಗಿದೆ. ಹಾಗೆಂದ ಮಾತ್ರಕ್ಕೆ ವೈಚಾರಿಕತೆ ಅಥವಾ ಆಧುನಿಕತೆಯನ್ನು ತುಚ್ಛೀಕರಿಸುವ ಇಚ್ಛೆ ಇವರಿಗೆ ಇಲ್ಲ. ಅದೇ ಕಾಲಕ್ಕೆ ಮನಸೋ ಇಚ್ಛೆ ನಡೆದು ಪರಾಕ್ ಹೇಳಿಸಿಕೊಳ್ಳುವ ಗೀಳು ಇವರಿಗೆ ಇಲ್ಲ. ವರ್ತಮಾನ ಜಗದ್ಗುರುಗಳು ಸಮಾಜದ ಪುಣ್ಯೋದಯವೆಂಬಂತೆ ಪರಸ್ಪರ ಸಹಮತದೊಂದಿಗೆ ಸಮಗ್ರದೇಶದ ಎಲ್ಲ ಮತೀಯರ, ಸರ್ವಧರ್ಮೀಯರ ಹಿತಾಸಕ್ತಿಯನ್ನು ಸ್ವಾಭಾವಿಕವಾಗಿ ಗಮನಿಸುತ್ತಾರೆ. ಅನವಶ್ಯಕ ಟೀಕೆ - ಟಿಪ್ಪಣೆಗಳಿಗೆ ಅವಕಾಶ ನೀಡಿ ಅನೈಕ್ಯತೆಯನ್ನು ಹುಟ್ಟಿಸುವ ಕೆಟ್ಟ ಚಾಳಿ ಸರ್ವಥಾ ಒಳ್ಳೆಯದಲ್ಲ. ಯಾವುದಕ್ಕೂ ಅತಿಯಾಗಿ ಅಂಟಿಕೊಳ್ಳದೆ ಹಿತ-ಮಿತವಾದ ಹಾದಿಯಲ್ಲಿ ಸಮಾಜದ ಗುರು-ಹಿರಿಯರು, ವಿಚಾರವಂತರು ಸಾಗುವುದು ಎಂದಿಗಿಂತಲೂ ಇಂದು ಅತ್ಯವಶ್ಯಕವಿದೆ. ಅದರಲ್ಲಿಯೇ ಸಮಾಜದ ಒಳಿತು ಅಡಗಿದೆ.

ಈ ಕೃತಿಯ ಮೂಲ ಉದ್ದೇಶ ಸಮಗ್ರವಾಗಿ, ಆದರೆ ಸಂಕ್ಷಿಪ್ತವಾಗಿ, ಪಂಚಪೀಠಗಳ ಪರಂಪರೆಯನ್ನು ಪರಿಚಯಿಸುವುದಾಗಿದೆ. ಇನ್ನೂ ಹೆಚ್ಚಿನ ಸಂಶೋಧನೆ ಮತ್ತು ಅಧ್ಯಯನ ಅತ್ಯಗತ್ಯ ಎಂಬುದನ್ನು ವಿದ್ವಾಂಸರು ಗಮನಿಸಬೇಕು. ಸಂಸ್ಕೃತ ಮೊದಲ್ಗೊಂಡು ಇನ್ನುಳಿದ ಭಾಷೆಗಳಲ್ಲಿರುವ ಗ್ರಂಥಗಳ ಅಧ್ಯಯನ, ವಿಮರ್ಶೆ, ಸಂಕಲನ, ಸಂಪಾದನೆ, ಭಾಷಾಂತರ ಮುಂತಾದ ಕೆಲಸ ಕಾರ್ಯಗಳು ಇಂದಿನ ಅಗತ್ಯಗಳಾಗಿವೆ. ಅದಕ್ಕಾಗಿ ಸರ್ವರೂ ಶ್ರಮಿಸೋಣ. ಆದುದರಿಂದ ಅನಗತ್ಯ ಚರ್ಚೆ-ಚರ್ವಿತ-ಚರ್ವಣ, ಪರಸ್ಪರ ದೋಷಾರೋಪಣೆ, ಇದ್ದುದನ್ನು ತಿರುಚುವ ಕುತ್ಸಿತ ಭಾವನೆ ಬಿಡಬೇಕಾದುದು ಸಮಾಜದ ಒಳಿತಿನ ದೃಷ್ಟಿಯಿಂದ ಇಂದಿನ ಅಗತ್ಯವೂ, ಅನಿವಾರ್ಯತೆಯೂ ಆಗಿದೆ ಎಂಬುದನ್ನು ಕಳಕಳಿಯಿಂದ ನಿವೇದಿಸಿಕೊಳ್ಳುತ್ತೇನೆ.

ಈ ಕೈಂಕರ್ಯವನ್ನು ಕೈಗೊಳ್ಳಲು ಹುರಿದುಂಬಿಸಿ ಹರಸಿದ ಪರಮಪೂಜ್ಯರಾದ ಶ್ರೀ ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು, ಪ್ರಕಾಶನದ ಹೊಣೆಹೊತ್ತ ಪರಮಪೂಜ್ಯ ಶ್ರೀ ೧೦೦೮ ಉಜ್ಜಯಿನಿ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಶಿರಸಾಷ್ಟಾಂಗ ಪ್ರಣಾಮಗಳೊಂದಿಗೆ ಸ್ಮರಿಸಿಕೊಳ್ಳುವೆ. ಶ್ರೀಮದ್ರಂಭಾಪುರಿ, ಶ್ರೀ ಹಿಮವತ್ಕೇದಾರ ಹಾಗೂ ಶ್ರೀಮತ್ ಶ್ರೀಶೈಲ ಜಗದ್ಗುರುಗಳವರು ನನ್ನ ಭಕ್ತಿಯ ಬಿನ್ನಹವನ್ನು ಮನ್ನಿಸಿ ಸಮಯಕ್ಕೆ

ಮಾಹಿತಿಯನ್ನು ಒದಗಿಸಿ, ಆಶೀರ್ವದಿಸಿದ್ದಾರೆ. ಅಲ್ಲದೆ ಬಾಗಿಲುಕೋಟೆ ಜಿಲ್ಲೆಯ ಜಮಖಂಡಿ ನಗರದಲ್ಲಿ ದಿನಾಂಕ ೩೦, ೩೧, ಮಾರ್ಚ್ ಹಾಗೂ ೧ ಏಪ್ರಿಲ್ ೨೦೦೧ ರಂದು ವೈಭವಪೂರ್ಣವಾಗಿ ಜರುಗುತ್ತಿರುವ ಶ್ರೀ ಜಗದ್ಗುರು ಪಂಚಾಚಾರ್ಯ ಯುಗಮಾನೋತ್ಸವ ಸಂದರ್ಭದಲ್ಲಿ ಶ್ರೀ ಜಗದ್ಗುರುಗಳವರು ತಮ್ಮ ಪ್ರಸಾದ ಹಸ್ತದಿಂದ ಈ ಗ್ರಂಥ ಬಿಡುಗಡೆ ಮಾಡಲಿರುವುದು ಶುಭೋದಯವೆನಿಸಿದೆ. ಆ ಎಲ್ಲಾ ಪರಮ ಪೂಜ್ಯರ ಅಡಿದಾವರೆಗಳಲ್ಲಿ ಕೃತಜ್ಞತಾಪೂರ್ವಕ ಶಿರಸಾಷ್ಟಾಂಗ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಅಂಧರಿಗೆ ಕಣ್ಣಾದ, ಕಣ್ಣುಗಳಿಗೆ ಜ್ಯೋತಿಯಾದ ಜನ್ಮಾಂಧ ಕವಿ, ಸಾಹಿತಿ, ಸಂಗೀತ ಸಾಮ್ರಾಟ ಕನಕ–ಪುರಂದರ ಪ್ರಶಸ್ತಿಭೂಷಿತ ಡಾ। ಪುಟ್ಟರಾಜ ಕವಿ ಗವಾಯಿಗಳು ಈ ಆವೃತ್ತಿಗೆ ಮುನ್ನುಡಿ ಬರೆದುದು ಗೋಪುರಕ್ಕೆ ಹೊನ್ನ ಕಳಶವಿಟ್ಟಂತಾಗಿದೆ. ಆ ಪೂಜ್ಯರಿಗೆ ನನ್ನ ಭಕ್ತಿಪೂರ್ವಕ ಪ್ರಣಾಮಗಳು.

ಹೊನ್ನಾಳಿಯ 'ಚನ್ನಚೇತನ ಪ್ರಕಾಶನ'ದ ಒಡೆಯರ ಶ್ರೀ ಷ। ಬ್ರ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು ಈ ಕೃತಿಯ ಮರುಮುದ್ರಣಕ್ಕೆ ಅನುಮತಿ ನೀಡಿದುದನ್ನು ಭಕ್ತಿಪೂರ್ವಕವಾಗಿ ಸ್ಮರಿಸುತ್ತೇನೆ.

ನನಗೆ ವಹಿಸಿದ ಈ ಕಾರ್ಯವನ್ನು ನನ್ನ ಬುದ್ಧಿಗೆ ತೋಚಿದಷ್ಟು ಸಮಂಜಸವಾಗಿ ಮಾಡಲು ಯತ್ನಿಸಿದ್ದೇನೆ. ಹೆಚ್ಚಿನ ಸಂಶೋಧನೆ ಅಥವಾ ವಿಭಿನ್ನ ಆಕಾರಗಳತ್ತ ಗಮನ ಹರಿಸಿಲ್ಲ ಎಂಬುದನ್ನು ವಿನಮ್ರವಾಗಿ ಒಪ್ಪಿಕೊಳ್ಳುತ್ತೇನೆ. ಈ ಪರಿಷ್ಕೃತ ಆವೃತ್ತಿಗೆ ಪೋಷಕವಾದ ಗ್ರಂಥಗಳ ಲೇಖಕರು ಹಾಗೂ ಪ್ರಕಾಶಕರನ್ನು ಹೃದಯಾರೆ ಕೃತಜ್ಞತಾಪೂರ್ವಕ ಸ್ಮರಿಸುತ್ತೇನೆ. ನನ್ನ ಕಾರ್ಯಭಾರವನ್ನು ಹಗುರಗೊಳಿಸುವಲ್ಲಿ ನೆರವಾದ ಹರಪನಹಳ್ಳಿಯ ಶ್ರೀ ಉಜ್ಜಯಿನಿ ಜಗದ್ಗುರು ಮರುಳಾರಾಧ್ಯ ಪದವಿಪೂರ್ವ ಮಹಾವಿದ್ಯಾಲಯದ ಕನ್ನಡ ಉಪನ್ಯಾಸಕರಾದ ಶ್ರೀ ಎಂ.ಪಿ.ಎಂ. ಶಾಂತವೀರಯ್ಯ ಅವರನ್ನು ನೆನೆಯದೆ ಇರಲಾರೆ. ಕುಮಾರಪಟ್ಟಣಂನ ಆಶಾ ಗ್ರಾಫಿಕ್ಸ್‌ನ ಶ್ರೀಮತಿ ಆಶಾ ಪಿ. ರಾವ್ ಹಾಗೂ ಶ್ರೀ ಪಿ.ಕೆ. ಪ್ರಕಾಶರಾವ್ ಮತ್ತು ಸಿಬ್ಬಂದಿಯವರು ಸಮಯೋಚಿತ, ಸುಂದರ ಅಕ್ಷರ ಜೋಡಣೆ ಹಾಗೂ ಮುದ್ರಣ ಕಾರ್ಯದಲ್ಲಿ ಶ್ರದ್ಧೆ ವಹಿಸಿದ್ದು ಅವರೆಲ್ಲರಿಗೂ ಹಾರ್ದಿಕ ಅಭಿನಂದನೆಗಳು.

ಸಹೃದಯ ಓದುಗರು, ಧರ್ಮಾಭಿಮಾನಿಗಳು ಸನಾತನ ವೀರಶೈವ ಧರ್ಮದ ಪರಂಪರೆಯ ದರ್ಶನ ಮಾಡಿಸುವ ಈ ಪವಿತ್ರ ಗ್ರಂಥವನ್ನು ಆಮೂಲಾಗ್ರವಾಗಿ ಓದಿ ಆನಂದಿಸಬೇಕೆಂದು ಕಳಕಳಿಯಿಂದ ಕೇಳಿಕೊಳ್ಳುತ್ತೇನೆ.

ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು ಸಮಸ್ತರಿಗೂ ಸನ್ಮಂಗಲವನ್ನುಂಟುಮಾಡಲಿ ಎಂದು ಹಾರೈಸುವ

ಶ್ರೀ ಶಾಲಿವಾಹನ ಶಕೆ ೧೯೨೮ — ಅ.ಸಿ. ಹಿರೇಮಠ
ವ್ಯಯನಾಮ ಸಂವತ್ಸರ — ಅಧ್ಯಕ್ಷರು, ಹಾವೇರಿ ಜಿಲ್ಲಾ
ಮಾಘ ಬಹುಳ ೨, — ಕನ್ನಡ ಸಾಹಿತ್ಯ ಪರಿಷತ್ತು, ರಾಣೇಬೆನ್ನೂರು

ಪರಂಪರೆಯ ಪುಟಗಳೊಳು...........

## ಪೀಠಿಕೆ

ದರ್ಶನ ಶಾಸ್ತ್ರಗಳ ತವರುಮನೆಯಾದ ನಮ್ಮೀ ಭಾರತ ದೇಶದಲ್ಲಿ "ನಿಗಮ" ಮತ್ತು "ಆಗಮ" ಭೇದದಿಂದ ಎರಡು ಶಾಸ್ತ್ರಗಳು ಅತ್ಯಂತ ಪ್ರಸಿದ್ಧವಾಗಿವೆ. ಇವುಗಳಲ್ಲಿ ಶಿವನ ನಿಃಶ್ವಾಸದಿಂದ ನಿಃಶೃತಗಳಾದ ಶಾಸ್ತ್ರಗಳನ್ನು ನಿಗಮಗಳೆಂತಲೂ ಮತ್ತು ಶಿವನ ವಾಗ್ವ್ಯವಹಾರ ರೂಪಗಳಾದ ಶಾಸ್ತ್ರಗಳನ್ನು ಆಗಮಗಳೆಂತಲೂ ಕರೆಯುತ್ತಾರೆ. ಅಂತೆಯೇ "ನಿಶ್ಚಯೇನ ತತ್ತ್ವಂ ಗಮಯತೀತಿ ನಿಗಮಃ" ಮತ್ತು "ಆಪ್ತವಚನಾದಾವಿರ್ಭೂತಮರ್ಥ ವಿಶೇಷ ಸಂವೇದನಮಾಗಮಃ"ಎಂಬುದಾಗಿ ನಿಗಮಾಗಮಗಳ ವ್ಯುತ್ಪತ್ತಿಗಳು ಪ್ರಸಿದ್ಧವಾಗಿವೆ. ನಿಗಮ(ವೇದ)ಗಳಲ್ಲಿ ಪರಸ್ಪರ ವಿರುದ್ಧಾರ್ಥ ಪ್ರತಿಪಾದಕಗಳಾದ ಮಂತ್ರಗಳಿರುವುದರಿಂದ ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಮತ್ತು ಉಪಪತ್ತಿಗಳೆಂಬ ಶ್ರುತಿ ಷಡ್ಲಿಂಗಗಳ (ಆರು ಪ್ರಮಾಣಗಳ) ಸಹಾಯವಿಲ್ಲದೇ ಅವುಗಳ ಅರ್ಥವನ್ನು ನಿರ್ಣಯಿಸುವುದು ಸಾಮಾನ್ಯ ಜನರಿಗೆ ಸಾಧ್ಯವಾಗುವುದಿಲ್ಲವೆಂಬ ಭಾವನೆಯಿಂದ, ಭಗವಂತನು ಸರ್ವಜನರ ಉಪಯೋಗಕ್ಕಾಗಿ ಶ್ರೀಪಾರ್ವತಿಯನ್ನು ಉದ್ದೇಶಿಸಿ ಉಪದೇಶಿಸಿದ ಶಾಸ್ತ್ರಗಳೇ ಆಗಮಶಾಸ್ತ್ರಗಳು ಎಂದು ಪ್ರತೀತಿ ಇದೆ.

ಆಗತಂ ಶಿವವಕ್ತ್ರಾತ್ತು ಗತಂ ಚ ಗಿರಿಜಾಮುಖೇ ।
ಮತಂ ಶ್ರೀವಾಸುದೇವೇನ ಆಗಮಸ್ತೇನ ಕೀರ್ತಿತಃ ॥

(ಭಾಸ್ಕರೀ ದ್ವಿ. ಭಾಗ. ಪು. ೮೫)

ಎನ್ನುವ ವಚನ ಪ್ರಮಾಣದಂತೆ ಪರಶಿವನ ವದನಾರವಿಂದದಿಂದ ಹೊರಹೊಮ್ಮಿ ಶ್ರೀಪಾರ್ವತಿಯ ಬುದ್ಧಿಯನ್ನು ಪ್ರವೇಶಿಸುವಾಗ ಅಲ್ಲಿಯೇ ಸಾಕ್ಷಿಯಾಗಿರುವ ಶ್ರೀವಾಸುದೇವನಿಂದ ಯಾವ ಶಾಸ್ತ್ರವು ಸಮ್ಮತಿಯನ್ನು ಪಡೆಯಿತೋ ಅದುವೇ ಆಗಮ ಶಾಸ್ತ್ರವೆಂದು ತಾತ್ಪರ್ಯವು. ಇದು ಆಗಮ ಶಬ್ದದ ರೂಢಾರ್ಥವು. ಇನ್ನು ಯೌಗಿಕಾರ್ಥವನ್ನು ವಿಚಾರಿಸುವುದಾದರೆ "ಆ ಸಮಂತಾರ್ಥಂ ಗಮಯತೀತಿ ಆಗಮಃ" ಎನ್ನುವ ವ್ಯುತ್ಪತ್ತಿಯ ಪ್ರಕಾರ ಸಂಪೂರ್ಣ ತತ್ತ್ವವನ್ನು ಬೋಧಿಸುವ ಶಾಸ್ತ್ರವೇ ಆಗಮ ಶಾಸ್ತ್ರವು.

"ಆಗಚ್ಛಂತಿ ಬುದ್ಧಿಮಾರೋಹಂತಿ ಯಸ್ಮಾದ್ ಅಭ್ಯುದಯ ನಿಃಶ್ರೇಯಸೋಪಾಯಾಃ ಸ ಆಗಮಃ" (ಯೋ. ಸೂ. ೧.೨೫ ತತ್ತ್ವ ವೈಶಾರದಿ) ಅಂದರೆ ಇಹಲೋಕದ ಏಳ್ಗೆ ಮತ್ತು ಪಾರಲೌಕಿಕ ಮುಕ್ತಿ ಇವೆರಡನ್ನು ಪಡೆಯುವ ಉಪಾಯಗಳು ಯಾವ ಶಾಸ್ತ್ರದಿಂದ ಜನಸಾಮಾನ್ಯರಿಗೆ ಸರಳವಾಗಿ ತಿಳಿಯುವವೋ ಅವೇ ಆಗಮ ಶಾಸ್ತ್ರಗಳೆಂಬುದಾಗಿ ಶ್ರೀ ವಾಚಸ್ಪತಿ ಮಿಶ್ರರು ಆಗಮಗಳ ಮಹತಿಯನ್ನು ಕೊಂಡಾಡಿದ್ದಾರೆ.

ಆಗಮಗಳಿಗೆ 'ತಂತ್ರ'ವೆಂಬ ಪರ್ಯಾಯ ನಾಮವೂ ಇದೆ. "ತನ್ಯತೇ ವಿಸ್ತಾರ್ಯತೇ ಜ್ಞಾನಮನೇನ" ಅಂದರೆ ಯಾವುದರ ಅಧ್ಯಯನದಿಂದ ಎಲ್ಲ ವಿಧದ ಜ್ಞಾನ ಪ್ರಾಪ್ತವಾಗುವುದೋ ಅದೇ ತಂತ್ರವು. ಇದೇ ಅರ್ಥವನ್ನೇ ಕಾಮಿಕಾಗಮದ–

ತನೋತಿ ವಿಪುಲಾನರ್ಥಾನ್ ತಂತ್ರಮಂತ್ರ ಸಮನ್ವಿತಾನ್ ।
ತ್ರಾಣಂ ಚ ಕುರುತೇ ಯಸ್ಮಾತ್ ತಂತ್ರಮಿತ್ಯಭಿಧೀಯತೇ ॥

ಈ ಶ್ಲೋಕವು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ.

ಆಗಮ (ತಂತ್ರ)ಗಳ ಭೇದ :

ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।
ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಂ ॥

(ಸಿ.ಶಿ. ೫–೯)

ಎನ್ನುವ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ, ಆಗಮಗಳು ಶೈವ, ಪಾಶುಪತ, ಸೋಮ ಮತ್ತು ಲಾಕುಲಾದಿ ಭೇದದಿಂದ ಅನಂತವಾಗಿದೆ. ಇವುಗಳಲ್ಲಿ ಶೈವಾಗಮಗಳು ವಾಮ, ದಕ್ಷಿಣ, ಮಿಶ್ರ ಮತ್ತು ಸಿದ್ಧಾಂತ ಎಂಬ ಹೆಸರಿನಿಂದ ನಾಲ್ಕು ಪ್ರಕಾರಗಳಾಗಿರುತ್ತವೆ. ಇಲ್ಲಿ ಶಕ್ತಿಯನ್ನೇ ಪ್ರಧಾನ ತತ್ತ್ವವನ್ನಾಗಿ ಬೋಧಿಸುವವು ವಾಮಾಗಮಗಳು. ಭೈರವ ತತ್ತ್ವವನ್ನೇ ಪ್ರಧಾನವನ್ನಾಗಿ ಬೋಧಿಸುವವು ದಕ್ಷಿಣಾಗಮಗಳು. ಸಪ್ತಮಾತೃಕೆಯರನ್ನು ಪ್ರಧಾನ ತತ್ತ್ವವನ್ನಾಗಿ ಬೋಧಿಸುವವುಗಳೇ ಮಿಶ್ರಾಗಮಗಳು ಮತ್ತು ವೇದಸಮ್ಮತಗಳಾದ ತತ್ತ್ವಗಳನ್ನು ಬೋಧಿಸುವ ಆಗಮಗಳೇ ಸಿದ್ಧಾಂತಾಗಮಗಳು.

ಇವುಗಳಲ್ಲದೇ ಸೌರ, ಗಾಣಪತ್ಯ ಮುಂತಾದ ಆಗಮಗಳೂ ಇವೆ. ಒಟ್ಟಿನಲ್ಲಿ ಪಂಚರಾತ್ರಾಗಮಗಳು ೧೦೮, ಶಾಕ್ತಾಗಮಗಳು ೬೪ – ಉಪತಂತ್ರಗಳು ೩೨೭, ಶೈವತಂತ್ರಗಳು ೨೮ – ಉಪತಂತ್ರಗಳು ೧೨೭, ವೈಷ್ಣವ ತಂತ್ರಗಳು ೭೫ – ಉಪತಂತ್ರಗಳು ೨೦೫ .... ಹೀಗೆ ವಿಪುಲವಾದ ತಂತ್ರಸಾಹಿತ್ಯವಿದೆ. (ವಿಶೇಷ ಜಿಜ್ಞಾಸೆಯುಳ್ಳವರು ರಾಮದಾಸಗೌಡರಿಂದ ವಿರಚಿತ "ಹಿಂದುತ್ವ" ಎಂಬ ಹಿಂದೀ ಪುಸ್ತಕದ ತಂತ್ರಖಂಡವನ್ನವಲೋಕಿಸಬಹುದು.)

ಶೈವಾಗಮಗಳು (ಸಿದ್ಧಾಂತಾಗಮಗಳು) :

ಶ್ರೀ ಶಿವನಿಂದ ಉಪದೇಶಿಸಲ್ಪಟ್ಟ ಕಾಮಿಕಾದಿ ವಾತುಲಾಂತಗಳಾದ ೨೮ ಆಗಮಗಳಿಗೆ ಶೈವಾಗಮಗಳೆಂದು ಹೆಸರು. ಇವುಗಳನ್ನು "ಸಿದ್ಧಾಂತಾಗಮ"ಗಳೆಂತಲೂ ಕರೆಯುತ್ತಾರೆ. "ಆಪ್ತೋಕ್ತಿರತ್ರ ಸಿದ್ಧಾಂತಃ ಶಿವ ಏವಾಪ್ತಿಮಾನ್ ಯತಃ" ಎನ್ನುವ ಶ್ರೀಕಂಠ ಸೂರಿಯ ಶ್ಲೋಕದ ವ್ಯಾಖ್ಯಾನವನ್ನು ಬರೆಯುವಾಗ ಶ್ರೀ ಅಘೋರ ಶಿವಾಚಾರ್ಯರು – ಸಿದ್ಧಾಂತ ಶಬ್ದಃ ಪಂಕಜಾದಿ ಶಬ್ದವದ್ಯೋಗರೂಢ್ಯಾ ಶಿವ ಪ್ರಣೀತೇಷು ಕಾಮಿಕಾದಿಷು ದಶಾಷ್ಟಾದಶತಂತ್ರೇಷು ಪ್ರಸಿದ್ಧಃ" (ರತ್ನತ್ರಯ – ಪುಟ ೫) ಎಂಬುದಾಗಿ ಬರೆದಿದ್ದಾರೆ. ಇದರ ತಾತ್ಪರ್ಯವೇನೆಂದರೆ – ಯಥಾರ್ಥವಕ್ತೃವಾದ ಆಪ್ತಪುರುಷನಿಂದ ಹೇಳಲ್ಪಟ್ಟ ವಚನಗಳನ್ನು ಸಿದ್ಧಾಂತವೆಂದು ಕರೆಯುವರು. ಶಿವನು ಸಾಂಸಾರಿಕ ರಾಗ – ದ್ವೇಷಗಳಿಲ್ಲದವನಾಗಿ ಜಗತ್ತಿನ ಸಮಸ್ತ ಮಾನವರ ಕಲ್ಯಾಣಕ್ಕಾಗಿ ಆಗಮಗಳನ್ನು ಉಪದೇಶಿಸಿರುವುದರಿಂದ ಅವನನ್ನು "ಆಪ್ತಪುರುಷ"ನೆಂತಲೂ, ಅವನಿಂದ

ಉಪದೇಶಿಸಲ್ಪಟ್ಟ ಶಾಸ್ತ್ರಗಳನ್ನು "ಸಿದ್ಧಾಂತ"ವೆಂತಲೂ ಕರೆಯುತ್ತಾರೆ.

"ಸಮೌ ಸಿದ್ಧಾಂತ ರಾದ್ಧಾಂತೌ" (ಅಮರಕೋಶ ೧-೫-೪) ಎಂಬ ಶ್ರೀ ಅಮರಸಿಂಹನ ವಚನಾನುಸಾರವಾಗಿ ಅಂತಿಮವಾದ ನಿರ್ಣಯಕ್ಕೆ ಸಿದ್ಧಾಂತ ಇಲ್ಲವೇ ರಾದ್ಧಾಂತಗಳೆಂಬ ಶಬ್ದಗಳನ್ನು ಬಳಸುವುದಾಗಿ ಕಂಡುಬರುತ್ತದೆ. ಹೀಗಿರುವಾಗ ಸಿದ್ಧಾಂತ ಶಬ್ದಕ್ಕೆ ಶಿವಾಗಮಗಳೆಂಬುದಾಗಿ ಹೇಗೆ ಅರ್ಥೈಸುವುದು? ಎಂಬ ಪ್ರಶ್ನೆ ಬಂದಾಗ, ಇದಕ್ಕೆ ಶ್ರೀ ಅಘೋರ ಶಿವಾಚಾರ್ಯರು ಹೀಗೆ ನಿರ್ಣಯವನ್ನು ಕೊಡುತ್ತಾರೆ. ಶಬ್ದಗಳಿಗೆ ಯೌಗಿಕಾರ್ಥವೆಂತಲೂ, ರೂಢಾರ್ಥವೆಂತಲೂ ಎರಡು ಪ್ರಕಾರದ ಅರ್ಥಗಳು ಹೊರಡುತ್ತವೆ. ಶಬ್ದದ ವ್ಯುತ್ಪತ್ತಿ ಲಭ್ಯವಾದ ಅರ್ಥವು ಯೌಗಿಕಾರ್ಥವು. ಉದಾ : "ಪಂಕಜ" ಎನ್ನುವ ಶಬ್ದದ ವ್ಯುತ್ಪತ್ತಿ ಲಭ್ಯವಾದ ಅರ್ಥವು ಪಂಕ = ಕೆಸರಿನಲ್ಲಿ, ಜಾತಂ = ಜನಿಸಿದ್ದು, ಅರ್ಥಾತ್ ಕೆಸರಿನಲ್ಲಿ ಹುಟ್ಟಿದ್ದು ಎಂದಾಗುವುದು. ಕೆಸರಿನಲ್ಲಿ ಅನೇಕ ಕ್ರಿಮಿಕೀಟಗಳು ಜನಿಸುವಂತೆ ಕಮಲವೂ ಜನಿಸುತ್ತದೆ. ಪಂಕಜ ಎಂಬ ಶಬ್ದಕ್ಕೆ ಲೋಕದಲ್ಲಿ ಕಮಲವೆಂತಲೇ ರೂಢಿಯಲ್ಲಿದೆ. ಲೋಕದ ರೂಢಿಯಲ್ಲಿರುವ ಅರ್ಥವನ್ನು ರೂಢಾರ್ಥವೆನ್ನುವರು. ಹೀಗೆ "ಪಂಕಜ" ಎಂಬ ಶಬ್ದಕ್ಕೆ ಯೌಗಿಕವಾಗಿ ಕೆಸರಿನಲ್ಲಿ ಜನಿಸಿದ್ದು ಎಂಬ ಅರ್ಥಕ್ಕನುಸಾರವಾಗಿ ಕಮಲದ ಜೊತೆಗೆ ಕ್ರಿಮಿಕೀಟಗಳೆಂಬ ಅರ್ಥ ಹೊರಡುತ್ತಿದ್ದರೂ, ಲೋಕದ ರೂಢಿಯಲ್ಲಿ ಪಂಕಜ ಶಬ್ದದಿಂದ ಕಮಲವೆಂಬ ಅರ್ಥವನ್ನೇ ಸ್ವೀಕರಿಸುವಂತೆ "ಸಿದ್ಧಾಂತ" ಎಂಬ ಶಬ್ದಕ್ಕೆ "ಸಿದ್ಧೋಂತೋ ನಿಶ್ಚಯೋ ಯಸ್ಮಿನ್ ಸಃ ಸಿದ್ಧಾಂತಃ" ಎನ್ನುವ ವ್ಯುತ್ಪತ್ತಿಯ ಪ್ರಕಾರ, ಕೊನೆಯದಾದ ನಿರ್ಣಯವೆನ್ನುವ ಯೌಗಿಕಾರ್ಥವಾಗುತ್ತಿದ್ದರೂ, ಶಿವನ ಮುಖಾರವಿಂದದಿಂದ ಬಂದ ನಿರ್ಣಯವೇ ಕೊನೆಯದಾದ ನಿರ್ಣಯವೆಂಬುದಾಗಿ ಲೋಕದಲ್ಲಿ ರೂಢಿ ಇರುವುದು. ಹೀಗೆ ಈ ಯೋಗ ಮತ್ತು ರೂಢಿ ಶಕ್ತಿಗಳ ಬಲದಿಂದ ಸಿದ್ಧಾಂತವೆಂಬ ಶಬ್ದಕ್ಕೆ ಶಿವಾಗಮಗಳೆಂತಲೇ ಅರ್ಥವಾಗುವುದು. ಅಂತೆಯೇ ಶಿವೋಕ್ತಗಳಾದ ೨೮ ಆಗಮಗಳನ್ನು ಸಿದ್ಧಾಂತಾಗಮಗಳೆಂತಲೂ ಕರೆಯುತ್ತಾರೆ. ಈ ಆಗಮಗಳ ಹೆಸರುಗಳ ಪ್ರಶ್ನೆ ಉದ್ಭವಿಸಿದಾಗ ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರ ಉಪೋದ್ಘಾತ ಪ್ರಕರಣದಲ್ಲಿ

೧) ಕಾಮಿಕಾಗಮ ೨) ಯೋಗಜಾಗಮ ೩) ಚಿಂತ್ಯಾಗಮ
೪) ಕಾರಣಾಗಮ ೫) ಅಜಿತಾಗಮ ೬) ದೀಪ್ತಾಗಮ
೭) ಸೂಕ್ಷ್ಮಾಗಮ ೮) ಸಹಸ್ರಾಗಮ ೯) ಅಂಶುಮಾನಾಗಮ
೧೦) ಸುಪ್ರಭೇದಾಗಮ ೧೧) ವಿಜಯಾಗಮ ೧೨) ನಿಃಶ್ವಾಸಾಗಮ
೧೩) ಸ್ವಾಯಂಭುವಾಗಮ ೧೪) ಅನಲಾಗಮ ೧೫) ವೀರಾಗಮ
೧೬) ರೌರವಾಗಮ ೧೭) ಮಕುಟಾಗಮ ೧೮) ವಿಮಲಾಗಮ
೧೯) ಚಂದ್ರಜ್ಞಾನಾಗಮ ೨೦) ಬಿಂಬಾಗಮ ೨೧) ಪ್ರೋದ್ಗೀತಾಗಮ
೨೨) ಲಲಿತಾಗಮ ೨೩) ಸಿದ್ಧಾಗಮ ೨೪) ಸಂತಾನಾಗಮ
೨೫) ಶರ್ವೋಕ್ತಾಗಮ ೨೬) ಪಾರಮೇಶ್ವರಾಗಮ ೨೭) ಕಿರಣಾಗಮ
೨೮) ವಾತುಲಾಗಮ - ಎಂಬುದಾಗಿ ಆಗಮಗಳ ಹೆಸರುಗಳನ್ನು ಪ್ರತಿಪಾದಿಸಿದ್ದಾರೆ.

ಇವುಗಳಲ್ಲಿ ಕ್ರಮವಾಗಿ ಮೊದಲಿನ ೧೦ ಆಗಮಗಳು ಶಿವನಿಂದ, ಉಳಿದ ೧೮ ಆಗಮಗಳು ಶ್ರೀ ರುದ್ರನಿಂದ ಉಪದೇಶಿಸಲ್ಪಟ್ಟಿವೆ. ಈ ಎಲ್ಲ ಆಗಮಗಳೂ ಅಪಾರವಾದ ಜ್ಞಾನಸಂಪತ್ತಿನಿಂದ ಕೂಡಿದವುಗಳಾಗಿವೆ.

ಆಗಮಗಳ ಕಾಲ :

ಆಗಮ ಸಂಸ್ಕೃತಿಯು ಹರಪ್ಪಾ - ಮೊಹೆಂಜೊದಾರೋ ಕಾಲದಲ್ಲಿ ದೊರೆತ ಭೂಗತ ಅವಶೇಷಗಳಲ್ಲಿ ಕಂಡುಬರುವುದರಿಂದ ಇವುಗಳು ಇಂದಿಗೆ ಸುಮಾರು ೫ ಸಾವಿರ ವರ್ಷಗಳಿಗಿಂತಲೂ ಪೂರ್ವದವುಗಳೆಂದು ಅನೇಕ ಇತಿಹಾಸತಜ್ಞರ ಅಭಿಪ್ರಾಯವಾಗಿದೆ. ಇಷ್ಟು ಪ್ರಾಚೀನವಾದ ನಮ್ಮ ಆಗಮ ಸಾಹಿತ್ಯವು ಅದೆಷ್ಟೋ ನಷ್ಟವಾಗಿ ಸದ್ಯಃ ಅಲ್ಪ ಪ್ರಮಾಣದಲ್ಲಿ ದೊರೆಯುತ್ತಿರುವುದು ಭಾರತೀಯರ ದುರಾದೃಷ್ಟವೆನ್ನಬೇಕಾಗಿದೆ.

ಆಗಮಗಳ ವಿಷಯ (ವಸ್ತು) :

ಆಗಮಗಳಲ್ಲಿ ಕ್ರಿಯಾಪಾದ, ಚರ್ಯಾಪಾದ, ಯೋಗಪಾದ ಮತ್ತು ಜ್ಞಾನ (ವಿದ್ಯಾ) ಪಾದಗಳೆಂದು ನಾಲ್ಕು ಭಾಗಗಳಿರುತ್ತವೆ. ಕ್ರಿಯಾಪಾದದಲ್ಲಿ ದೇವಾಲಯಗಳ ಸ್ಥಾಪನೆ, ವಿಗ್ರಹಗಳ ನಿರ್ಮಾಣ ಹಾಗೂ ಅವುಗಳ ಪ್ರತಿಷ್ಠಾಪನೆಯ ವಿಷಯಗಳು ಪ್ರತಿಪಾದಿಸಲ್ಪಟ್ಟಿವೆ. ಚರ್ಯಾಪಾದದಲ್ಲಿ ಪ್ರತಿಷ್ಠಿತ ಮೂರ್ತಿಗಳ ಪೂಜಾ, ಉತ್ಸವ ಹಾಗೂ ಹವನಾದಿ ವಿಷಯಗಳು ನಿರೂಪಿಸಲ್ಪಟ್ಟಿವೆ. ಯೋಗಪಾದದಲ್ಲಿ ಅಷ್ಟಾಂಗಯೋಗ ಸಾಧನೆಯೂ ಮತ್ತು ಜ್ಞಾನಪಾದದಲ್ಲಿ ದಾರ್ಶನಿಕ ವಿಷಯಗಳಾದ ಪತಿ, ಪಶು ಹಾಗೂ ಪಾಶಗಳ ಸ್ವರೂಪದ ಜೊತೆಗೆ ಜಗದುತ್ಪತ್ತಿಯಲ್ಲಿ ಬರುವ ೩೬ ತತ್ತ್ವಗಳ ಸ್ವರೂಪವೂ ವಿಶೇಷವಾಗಿ ವರ್ಣಿಸಲ್ಪಟ್ಟಿವೆ.

ವೀರಶೈವ ಧರ್ಮದರ್ಶನಗಳ ಮೂಲಸ್ರೋತ :

ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವ ಮತಂ ಪರಮ್ ॥
(ಸಿ.ಶಿ. ೫-೧೪)

ಎನ್ನುವ ಶ್ರೀ ಜಗದ್ಗುರು ರೇಣುಕ ಭಗವತ್ಪಾದರ ಉಪದೇಶದಂತೆ ಪೂರ್ವದಲ್ಲಿ "ಸಿದ್ಧಾಂತ" ಶಬ್ದದಿಂದ ಪ್ರತಿಪಾದಿಸಲ್ಪಟ್ಟ ೨೮ ಶೈವಾಗಮಗಳ ಉತ್ತರ ಭಾಗದಲ್ಲಿ ಅಂದರೆ ಈ ಆಗಮಗಳ ಕ್ರಿಯಾ, ಚರ್ಯಾ, ಯೋಗ ಹಾಗೂ ಜ್ಞಾನ ಪಾದಗಳ ಉತ್ತರ ಭಾಗದಲ್ಲಿ ವೀರಶೈವ ಧರ್ಮದ ತತ್ತ್ವತ್ರಯಗಳಾದ ಅಷ್ಟಾವರಣ, ಪಂಚಾಚಾರ ಹಾಗೂ ಷಟ್‌ಸ್ಥಲಗಳು ನಿರೂಪಿಸಲ್ಪಟ್ಟಿವೆ. ವೀರಶೈವ ಧರ್ಮದ ಈ ಅಷ್ಟಾವರಣಗಳಲ್ಲಿ ಬರುವ ಇಷ್ಟಲಿಂಗ, ಭಸ್ಮ ಮತ್ತು ರುದ್ರಾಕ್ಷ ಧಾರಣಾದಿಗಳು ವೇದಗಳಲ್ಲಿಯೂ (ತತ್ರ ತತ್ರ ಪ್ರತಿಪಾದಿತವಾಗಿರುವುದರಿಂದ), ಸಿದ್ಧಾಂತಾಗಮೋಕ್ತಗಳಾದ ಈ ತತ್ತ್ವಗಳು ಕೇವಲ ಆಗಮಸಮ್ಮತಗಳಷ್ಟೇ ಅಲ್ಲ, ವೇದ ಸಮ್ಮತಗಳೆಂತಲೂ ತಿಳಿಯಬೇಕು. ಮುಂದೆ ಆಯಾ ವಿಷಯಗಳನ್ನು ನಿರೂಪಿಸುವಾಗ ಆ ವೇದಮಂತ್ರಗಳನ್ನು ಕೂಲಂಕಷವಾಗಿ ವಿಚಾರಿಸುತ್ತೇವೆ.

ಹೀಗೆ ವೀರಶೈವ ಧರ್ಮಕ್ಕೆ ಆಗಮಗಳೇ ಮೂಲಗಳಾಗಿದ್ದರೂ ಆಗಮ ಸಮ್ಮತವಾದ ವೇದಭಾಗವನ್ನು ವೀರಶೈವರು ಗ್ರಹಿಸುವುದರಿಂದ ವೀರಶೈವರ ಧರ್ಮವನ್ನು ತಾಂತ್ರಿಕ ವೈದಿಕ ಮತವೆಂತಲೂ ಕರೆಯುತ್ತಾರೆ.

ವೀರಶೈವಂ ವೈಷ್ಣವಂ ಚ ಶಾಕ್ತಂ ಸೈರಂ ವಿನಾಯಕಮ್ ।
ಕಾಪಾಲಮಿತಿ ವಿಜ್ಞೇಯಂ ದರ್ಶನಾನಿ ಷಡೇವ ಹಿ ॥
(ಪಾರಮೇಶ್ವರಾಗಮ ೧/೨೨-೨೩)

ಈ ಪಾರಮೇಶ್ವರಾಗಮದ ಉಕ್ತಿಯಲ್ಲಿ ಆಗಮಶಾಸ್ತ್ರ ಸಮ್ಮತಗಳಾದ ಷಡ್‌ದರ್ಶನಗಳು ನಿರೂಪಿತವಾಗಿವೆ. ಇವುಗಳಲ್ಲಿ ವೀರಶೈವವೂ ಪರಿಗಣಿಸಲ್ಪಟ್ಟಿರುವುದರಿಂದ, ವೀರಶೈವರಿಗೆ ಆಗಮ ಸಾಹಿತ್ಯವೇ ಮೂಲ ಸಾಹಿತ್ಯವೆಂಬುದು ತಿಳಿದುಬರುತ್ತದೆ. ಇಷ್ಟೇ ಅಲ್ಲದೆ

ನ ವೀರಶೈವಸದೃಶಂ ಮತಮಸ್ತಿ ಜಗತತ್ರಯೇ ।
ಸರ್ವಭೋಗಪ್ರದಂ ಪುಣ್ಯಂ ಶಿವಸಾಯುಜ್ಯದಾಯಕಮ್ ॥
(ಪಾ. ಆಗಮ ೧-೪೨)

ಎಂಬುದಾಗಿ ಅದೇ ಪಾರಮೇಶ್ವರಾಗಮದಲ್ಲಿಯೇ ಪೂರ್ವೋಕ್ತಗಳಾದ ಷಡ್‌ದರ್ಶನಗಳಲ್ಲಿ ವೀರಶೈವ ದರ್ಶನವು ತನ್ನ ಸಮನ್ವಯಾತ್ಮಕ ಉದಾತ್ತ ಭಾವನೆಯಿಂದ ಸರ್ವೋತ್ಕೃಷ್ಟವಾಗಿದೆ ಎಂದು ಪ್ರತಿಪಾದಿಸಲ್ಪಟ್ಟಿದೆ. ಆದ್ದರಿಂದ ಈ ಧರ್ಮದ ಉತ್ಕೃಷ್ಟ ಆಚಾರಗಳನ್ನು ಆಚರಣೆಯಲ್ಲಿ ತಂದು ಈ ಧರ್ಮದ ಹಿರಿಮೆ - ಗರಿಮೆಗಳನ್ನು ಕಾಪಾಡಿಕೊಳ್ಳುವುದು ಪ್ರತಿಯೊಬ್ಬ ವೀರಶೈವನ ಆದ್ಯ ಕರ್ತವ್ಯವಾಗಿದೆ.

ದಾರ್ಶನಿಕ ದೃಷ್ಟಿಯಿಂದ (ವೀರಶೈವ) ಶಬ್ದಾರ್ಥ ನಿರೂಪಣೆ :

ವೀರಶೈವವು ಕೇವಲ ಸಾಂಪ್ರದಾಯಿಕ ತತ್ತ್ವಗಳನ್ನು ನಿರೂಪಿಸುವ ಧರ್ಮ ಮಾತ್ರವಲ್ಲ, ಅದೊಂದು ಸರ್ವಗ್ರಾಹ್ಯವಾದ ದರ್ಶನವೂ ಆಗಿದೆ. ಅಂತೆಯೇ ವೀರಶೈವ ಶಬ್ದವನ್ನು ದಾರ್ಶನಿಕವಾಗಿಯೂ, ಸಾಂಪ್ರದಾಯಿಕವಾಗಿಯೂ ನಿರೂಪಿಸಬೇಕಾದ್ದರಿಂದ ಮೊದಲು ದಾರ್ಶನಿಕ ಪಕ್ಷವನ್ನೇ ವಿಚಾರಿಸೋಣ.

ವೀ - ಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯ ಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥

ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ।
ತಸ್ಮಾದೇತೇ ಮಹಾಭಾಗಾ ವೀರಶೈವಾ ಇತಿ ಸ್ಮೃತಾಃ ॥

ವೇದಾಂತಜನ್ಯಂ ಯದ್‌ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ವಿದ್ಯಾಯಾಂ ರಮತೇ ಯಃ ಸ ವೀರ ಇತ್ಯಭಿಧೀಯತೇ ॥
(ಸಿ.ಶಿ.೫/೧೫-೧೭)

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಮಹಾಮಹಿಮನಾದ ಶ್ರೀ ಅಗಸ್ತ್ಯ ಮಹರ್ಷಿಗಳನ್ನುದ್ದೇಶಿಸಿ ಮೇಲೆ ಹೇಳಿದ ಪ್ರಕಾರವಾಗಿ ವೀರಶೈವ ಶಬ್ದದ ದಾರ್ಶನಿಕ ಪಕ್ಷವನ್ನು ಉಪದೇಶಿಸಿದ್ದಾರೆ. ಅದು ಹೇಗೆಂದರೆ ವೀರಶೈವ ಶಬ್ದದಲ್ಲಿ ಬರುವ "ವೀ" ಶಬ್ದಕ್ಕೆ "ವೀ ಗತಿ - ವ್ಯಾಪ್ತಿ - ಪ್ರಜನನಕಾಂತ್ಯಸನ ಖಾದನೇಷು" (ಅದಾದಿ ೧೧೩೩) ಎಂಬುದಾಗಿ ಪಾಣಿನಿಯ ಧಾತುಪಾಠದಲ್ಲಿ ವೀ ಧಾತುವಿಗೆ ಅನೇಕ ಅರ್ಥಗಳಿರುವಂತೆ, ಗತಿ ಅರ್ಥಾತ್ ಗಮನವೆಂಬ ಅರ್ಥವೂ ಇದೆ. "ಯೇ ಗತ್ಯರ್ಥಕಾಸ್ತೇ ಜ್ಞಾನಾರ್ಥಕಾಃ" ಎನ್ನುವ ನಿಯಮಾನುಸಾರವಾಗಿ ಗಮನಾರ್ಥವನ್ನು ಬೋಧಿಸುವ ಎಲ್ಲ ಧಾತುಗಳೂ ಜ್ಞಾನಾರ್ಥವನ್ನು ಬೋಧಿಸುವವುಗಳಾದ್ದರಿಂದ ಇಲ್ಲಿ "ವೀ" ಧಾತುವಿನ ಅರ್ಥವು "ವಿದ್ಯಾ" ಇಲ್ಲವೇ "ಜ್ಞಾನ" ಎಂದಾಗುವುದು. ಅದರಂತೆ ವೀರಶೈವದಲ್ಲಿಯ "ರ"ದ ಅರ್ಥವು ರಮಣ ಅರ್ಥಾತ್ ಆನಂದಪಡು ಎಂದಾಗುವುದು. ಹೀಗೆ 'ವೀ' ಶಬ್ದದಿಂದ ತಿಳಿಸಲ್ಪಡುವ ಶಿವ-ಜೀವರ ಇಲ್ಲವೇ ಅಂಗ-ಲಿಂಗಗಳ ಏಕತ್ವವನ್ನು ಬೋಧಿಸುವ ವಿದ್ಯೆಯಲ್ಲಿ ಯಾವ ಶಿವಭಕ್ತನು ವಿಶೇಷವಾಗಿ ರಮಣ (ಆನಂದ)ವನ್ನು ಹೊಂದುವನೋ ಅವನೇ ವೀರಶೈವನು.

ಶ್ರೀ ಎಸ್. ಎನ್. ದಾಸಗುಪ್ತರ ಆಕ್ಷೇಪ ಮತ್ತು ಪರಿಹಾರ :

ಶ್ರೀ ಎಸ್. ಎನ್. ದಾಸಗುಪ್ತರು ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿ ಹೇಳಲ್ಪಟ್ಟ ವೀರಶೈವ ಶಬ್ದದ ದಾರ್ಶನಿಕ ನಿರ್ವಚನದ ಮೇಲೆ ಈ ರೀತಿಯಾಗಿ ಆಕ್ಷೇಪವನ್ನು ಮಾಡಿದ್ದಾರೆ.

"The Siddantha Shikhamani gives a fanciful interpretation of word, "Vira" as being composed of 'vi' meaning knowledge of identity with brahman and 'Ra' as meaning someone who takes pleasure in such knowledge. But such an etymology, accepting it to be correct, would give the form "Vira" and not "Veera". No explanation is given as how 'Vi' standing for 'Vidya', would lengthen its vowel into 'Vee'. I, therefore, find it difficult to accept this etymological interpretation as justifying the application of the word "Veera" to Veera Saiva. Moreover, most systems to Vedantic thought could be called Veera in such an interpretation, for most types of Vedanta would feel enjoyment and bless in true knowledge of identity. The word 'Vira' would thus not be a distinctive mark by which we could distinguish Vira-Saivas from the adherents of other religions. Most of the Agamic Saivas also would believe in the ultimate identity of individuals with Brahman or Siva."

(A History of Indian Philosophy, Vol. V, pp. 44-45)

ಇವರ ಈ ಆಕ್ಷೇಪದ ತಾತ್ಪರ್ಯವೇನೆಂದರೆ ಸಿದ್ಧಾಂತ ಶಿಖಾಮಣಿಯಲ್ಲಿ ಪ್ರತಿಪಾದಿಸಲ್ಪಟ್ಟ "ವೀರ" ಶಬ್ದದ ವ್ಯುತ್ಪತ್ತಿಯು ಬಹಳ ವಿಚಿತ್ರವಾಗಿದೆ. ಶಿವ-ಜೀವರ ಏಕತ್ವವನ್ನು ಬೋಧಿಸುವ ವಿದ್ಯೆಯಲ್ಲಿ ರಮಣ ಮಾಡುವವನಿಗೆ ವೀರನೆನ್ನುವುದಾದರೆ, ಈ ಶಬ್ದವು "ವಿರ" ಆಗುವುದೇ ವಿನಹ ಆ ಹ್ರಸ್ವ "ವೀ" ದೀರ್ಘ ಹೇಗಾಯಿತು?

ಇನ್ನು ಎರಡನೇ ಪ್ರಶ್ನೆ ಏನೆಂದರೆ ಅದ್ವೈತ ವೇದಾಂತಿಗಳು ಹಾಗೂ ಅದ್ವೈತವನ್ನು ಅಂಗೀಕರಿಸುವ ಕೆಲ ಶೈವ ಸಂಪ್ರದಾಯದ ಸಾಧಕರು ಶಿವ-ಜೀವರ ಏಕತ್ವವನ್ನು ಬೋಧಿಸುವ ತತ್ತ್ವಜ್ಞಾನರೂಪವಾದ ವಿದ್ಯೆಯಲ್ಲಿ ರಮಣವನ್ನು ಮಾಡುವುದರಿಂದ ವೀರ ವಿಶೇಷಣವು ಅವರಿಗೂ ಸಹ ಬರುವುದರಿಂದ ಅವರಿಂದ ವೀರಶೈವರನ್ನು ಬೇರ್ಪಡಿಸುವ ಬಗೆ ಹೇಗೆ? "ವ್ಯಾವೃತ್ತಿರ್ವ್ಯವಹಾರೋ ವಾ ಲಕ್ಷಣಸ್ಯ ಪ್ರಯೋಜನಮ್" ಎನ್ನುವ ನಿಯಮದ ಪ್ರಕಾರ, ಇಲ್ಲಿ ಈ ವೀರ ವಿಶೇಷದಿಂದ ವೀರಶೈವರನ್ನು ಇತರ ಶೈವ ಸಂಪ್ರದಾಯದವರಿಂದ ಬೇರ್ಪಡಿಸುವುದು

ಅಸಂಭವವಾಗಿ ತೋರುತ್ತಿದೆ.

ಶ್ರೀ ಎಸ್. ಎನ್. ದಾಸಗುಪ್ತರ ಈ ಎರಡೂ ಆಕ್ಷೇಪಗಳು ಅವಿಚಾರಿತ ರಮಣೀಯಗಳಾಗಿರುತ್ತವೆ. ಸಿದ್ಧಾಂತ ಶಿಖಾಮಣಿಯಲ್ಲಿ –

ವೀ – ಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।
ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥
(ಸಿ.ಶಿ. ೫–೧೫, ಪುಟ–೫೭, ವಾರದ ಪ್ರಕಾಶನ)

ಎಂಬುದಾಗಿ ವಿದ್ಯಾಬೋಧಕವಾದ ಧಾತುವು "ವೀ" ಎಂಬುದಾಗಿಯೂ ಪ್ರತಿಪಾದಿಸಲ್ಪಟ್ಟಿದೆ. ಇದೂ ಅಲ್ಲದೆ ಪಾಣಿನಿಯ ಧಾತುಪಾಠದಲ್ಲಿಯೂ "ವೀ ಗತಿ ವ್ಯಾಪ್ತಿ ಪ್ರಜನನ ಕಾಂತ್ಯಸನ ಖಾದನೇಷು" (ಅದಾದಿ ೧೧೩೩) ಎಂದು ಗತಿ ಎಂಬರ್ಥವುಳ್ಳ ಧಾತುವು "ವೀ" ಎಂಬುದಾಗಿಯೇ ನಿರೂಪಿಸಲ್ಪಟ್ಟಿರುವುದರಿಂದ ವಿದ್ಯಾಬೋಧಕವಾದ ಹ್ರಸ್ವ "ವಿ" ಎನ್ನುವಲ್ಲಿ ದೀರ್ಘ ಹೇಗಾಯಿತು? ಎನ್ನುವ ಪ್ರಶ್ನೆಗೆ ಅವಕಾಶವೇ ಇರುವುದಿಲ್ಲ. ಆದ್ದರಿಂದ ಶ್ರೀ ದಾಸಗುಪ್ತರ ಮೊದಲನೇ ಆಕ್ಷೇಪವು ನಿರಾಧಾರವಾದದ್ದು. ಇವರಿಗೆ ವಿದ್ಯಾ ಅಥವಾ ಜ್ಞಾನ ಎಂಬ ಅರ್ಥವನ್ನು ಕೊಡುವ "ವೀ" ಎಂಬ ಕ್ರಿಯಾಪದವು ಸಂಸ್ಕೃತ ವ್ಯಾಕರಣ ಶಾಸ್ತ್ರದಲ್ಲಿ ಇದೆಯೆಂಬ ತಿಳುವಳಿಕೆ ಇಲ್ಲದೆ "ವಿದ್ಯಾ" ಶಬ್ದದೊಳಗಿನ
ಹ್ರಸ್ವ "ವಿ" ಹೇಗೆ ದೀರ್ಘವಾಯಿತು ಎಂಬುದಾಗಿ ಭ್ರಾಂತಿಗೊಳಗಾಗಿದ್ದಾರೆ. ಕಾರಣ, ಸಂಸ್ಕೃತ ವಿದ್ವಾಂಸರಾದ ವಾಚಕರು ಈ ಆಕ್ಷೇಪ ಮತ್ತು ಅದರ ಬಗ್ಗೆ ನಾವು ಬರೆದ ಪರಿಹಾರೋಪಾಯವನ್ನು ಸಾವಧಾನದಿಂದ ಓದಿ ತಿಳಿದುಕೊಳ್ಳಬೇಕು.

ಇನ್ನು ಅವರ ಎರಡನೇ ಆಕ್ಷೇಪವೆಂದರೆ, ಈ ಶಿವ–ಜೀವರ ಏಕತ್ವವನ್ನು ಬೋಧಿಸುವ ವಿದ್ಯೆಯಲ್ಲಿ ಅದ್ವೈತವನ್ನೊಪ್ಪುವ ಕೆಲ ಶೈವ ಸಂಪ್ರದಾಯದವರೂ ರಮಣವನ್ನು ಮಾಡುವುದರಿಂದ ಅವರನ್ನು ಸಹ "ವೀರಶೈವ"ರೆನ್ನಬೇಕಾಗುವುದು. ಹೀಗೆ ಈ ಲಕ್ಷಣವು ವೀರಶೈವರಲ್ಲದವರಲ್ಲಿ ಅತಿವ್ಯಾಪ್ತವಾಗಿರುವುದರಿಂದ ಇದು ನಿರ್ದಿಷ್ಟ ಲಕ್ಷಣವಾಗಲಾರದು. ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಅಸಂಭವಗಳೆಂಬ ದೋಷತ್ರಯ ಶೂನ್ಯವಾದದ್ದೇ ನಿರ್ದಿಷ್ಟ ಲಕ್ಷಣವು. ಆದ್ದರಿಂದ ಶಿವ–ಜೀವರ ಏಕತ್ವವನ್ನು ಒಪ್ಪುವ ಇತರ ಶೈವ (ಕಾಶ್ಮೀರ ಶೈವ) ಸಂಪ್ರದಾಯದಲ್ಲಿ ವೀರಶೈವ ಲಕ್ಷಣವು ಅತಿವ್ಯಾಪ್ತವಾದ್ದರಿಂದ ಇದು ವೀರಶೈವರ ಅಸಾಧಾರಣವಾದ ಲಕ್ಷಣವೆಂತಾಗುವುದು?

ಶ್ರೀ ದಾಸಗುಪ್ತರ ಈ ಎರಡನೇ ಆಕ್ಷೇಪವು ಆಪಾತತಃ ರಮಣೀಯವಾಗಿ ತೋರಿದರೂ ವಿಚಾರದಿಂದ ನಿರಾಕರಣೀಯವಾಗಿದೆ. ಇಲ್ಲಿ ಎಲ್ಲರೂ ತಿಳಿದುಕೊಳ್ಳಬೇಕಾದ ಒಂದು ರಹಸ್ಯವಿದೆ. ಅದೇನೆಂದರೆ – "ಅಥಾತೋ ಬ್ರಹ್ಮಜಿಜ್ಞಾಸಾ" (ಬ್ರಹ್ಮಸೂತ್ರ ೧–೧–೧) ಎನ್ನುವ ಶ್ರೀ ಬ್ರಹ್ಮಸೂತ್ರಕ್ಕೆ ವೀರಶೈವರ ಸಿದ್ಧಾಂತಾನುಸಾರವಾಗಿ ಶ್ರೀಕರ ಭಾಷ್ಯವನ್ನು ಬರೆಯುವಾಗ ಶ್ರೀಪತಿ ಪಂಡಿತಾರಾಧ್ಯರು –

"ಕಲ್ಯಾಣ–ಕೈವಲ್ಯ–ವಿಭೂತಿತ್ರಯ ಪ್ರದಾಯಕಷ್ಟಾವರಣ–ಪಂಚಾಚಾರ–ಸದ್ಗುರು–ಕರುಣಾಕಟಾಕ್ಷ– ಲಬ್ಧಶಕ್ತಿಪಾತಾದ್ಯವಚ್ಛಿನ್ನ ಪರಶಿವಸ್ಯೇಷ್ಟ ಲಿಂಗಧಾರಣಾತ್ಮಕ ಪಾಶುಪತ ದೀಕ್ಷಾನಂತರ್ಯಮಿತ್ಯಥ ಶಬ್ದಾರ್ಥೋ ನಿರ್ಣೀಯತೇ." (ಶ್ರೀಕರಭಾಷ್ಯ ೧–೧–೧)
ಎಂಬುದಾಗಿ 'ಅಥ' ಶಬ್ದದ ಅರ್ಥವನ್ನು ವಿವರಿಸಿದ್ದಾರೆ. ತಾತ್ಪರ್ಯವೇನೆಂದರೆ: "ಅಥಾತೋ ಬ್ರಹ್ಮಜಿಜ್ಞಾಸಾ" ಈ ಬ್ರಹ್ಮಸೂತ್ರದಲ್ಲಿ ಮೂರು ಪದಗಳಿರುತ್ತವೆ. ಅಥ = ಅನಂತರ, ಅತಃ = ಆದ್ದರಿಂದ, ಬ್ರಹ್ಮಜಿಜ್ಞಾಸಾ = ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು. ಸ್ವರ್ಗಾದಿ ಫಲಗಳು ಅನಿತ್ಯಗಳಾಗಿರುವುದರಿಂದ ನಿತ್ಯಸುಖಾಪೇಕ್ಷೆಯುಳ್ಳ ಸಾಧಕನು ಅನಂತರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂಬುದಾಗಿ ಈ ಸೂತ್ರದ ಸಂಪೂರ್ಣಾರ್ಥವಾಗುತ್ತದೆ.

ಇಲ್ಲಿ 'ಅನಂತರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು' ಎಂದು ಶ್ರೀ ವ್ಯಾಸಮಹರ್ಷಿಗಳು ಹೇಳಿರುವುದರಿಂದ ಯಾವುದರ ನಂತರ? ಎನ್ನುವ ಪ್ರಶ್ನೆಯು ಉದ್ಭವಿಸುತ್ತದೆ. ಈ ಪ್ರಶ್ನೆಗೆ ಉತ್ತರರೂಪವಾಗಿ ಶ್ರೀ ಶ್ರೀಪತಿ ಪಂಡಿತಾರಾಧ್ಯರು ಮೇಲೆ ಉದಾಹರಿಸಿದ ಅವರ ಭಾಷ್ಯದ ಅಂಶದಲ್ಲಿ ಸದ್ಗುರುಗಳ ಕೃಪೆಯಿಂದ ದೀಕ್ಷಾಸಂಸ್ಕಾರ ಪುರಸ್ಸರವಾಗಿ ಇಷ್ಟಲಿಂಗವನ್ನು ಧರಿಸಿದ ಅನಂತರ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು ಎಂಬುದಾಗಿ ಹೇಳಿದ್ದಾರೆ. ಯಾವ ಪ್ರಕಾರ ವೇದಾಂತ ಶಾಸ್ತ್ರದಲ್ಲಿ ವಿವೇಕ, ವೈರಾಗ್ಯ, ಶಮದಮಾದಿ ಷಟ್‌ಸಂಪತ್ತಿ ಮತ್ತು ಮುಮುಕ್ಷುತ್ವಗಳೆಂಬ ಸಾಧನ ಚತುಷ್ಟಯಗಳ ಪ್ರಾಪ್ತಿಯ ನಂತರ ಬ್ರಹ್ಮಜಿಜ್ಞಾಸೆಯನ್ನು ಮಾಡುವುದಾಗಿ ಹೇಳುತ್ತಾರೋ, ಅದರಂತೆಯೇ ವೀರಶೈವ ಸಿದ್ಧಾಂತದಲ್ಲಿ ವೇಧಾ, ಮಂತ್ರ ಮತ್ತು ಕ್ರಿಯಾದೀಕ್ಷೆಗಳ ಮುಖಾಂತರ ತನ್ನಲ್ಲಿಯ ಆಣವ–ಮಾಯೀಯ ಹಾಗೂ ಕಾರ್ಮಿಕಗಳೆಂಬ ಮಲತ್ರಯಗಳ ನಿವೃತ್ತಿ ಮಾಡಿಕೊಂಡು, ತನ್ನ ಶರೀರದ ಮೇಲೆ ಶಾಸ್ತ್ರಸಮ್ಮತ ಪದ್ಧತಿಯಂತೆ ಇಷ್ಟಲಿಂಗವನ್ನು ಸದಾ ಧರಿಸಿಕೊಂಡು, ಅಷ್ಟಾವರಣಗಳಲ್ಲಿ ನಿಷ್ಠೆಯುಳ್ಳವನಾಗಿ, ಪಂಚಾಚಾರಗಳನ್ನು ಯಾವನು ಪರಿಪಾಲಿಸುವನೋ ಅವನೇ ಬ್ರಹ್ಮಜಿಜ್ಞಾಸೆಗೆ ಅಧಿಕಾರಿ ಎಂಬುದಾಗಿ ವಿವರಿಸಲಾಗಿದೆ.

ಇದರ ನಿಷ್ಕರ್ಷವೇನೆಂದರೆ–ಸದ್ಗುರುಗಳಿಂದ ದೀಕ್ಷೆಯನ್ನು ಹೊಂದಿ, ಶರೀರದ ಮೇಲೆ ಸದಾ ಇಷ್ಟಲಿಂಗವನ್ನು ಧರಿಸಿಕೊಂಡು, ಶಿವ–ಜೀವರ ಏಕತ್ವವನ್ನು ಬೋಧಿಸುವ ವಿದ್ಯೆಯಲ್ಲಿ ಸದಾ ರಮಣವನ್ನು ಮಾಡುವ ಶಿವಭಕ್ತನೇ ವೀರಶೈವನು. ಶಿವ–ಜೀವರ ಏಕತ್ವ ಬೋಧಕ ವಿದ್ಯೆಯಲ್ಲಿ ರಮಣ ಮಾಡುವ ವೇದಾಂತಿಗಳಾಗಲೀ, ಕಾಶ್ಮೀರಶೈವ ಸಂಪ್ರದಾಯದವರಾಗಲೀ ಕೊರಳಲ್ಲಿ, ಇಷ್ಟಲಿಂಗವನ್ನು ಧರಿಸದಿರುವುದರಿಂದ, ಅವರಲ್ಲಿ ವೀರಶೈವ ಲಕ್ಷಣವು ಅತಿವ್ಯಾಪ್ತವಾಗಲಾರದು. ಒಂದು ವೇಳೆ ಅವರು ಕೂಡ ಇಷ್ಟಲಿಂಗವನ್ನು ಧರಿಸಿದ್ದಾದರೆ ಅವರನ್ನೂ ವೀರಶೈವರೆನ್ನುವುದರಲ್ಲಿ ಯಾವ ಅಭ್ಯಂತರವೂ ಇರುವುದಿಲ್ಲ.

ಹೀಗೆ "ವೀರಶೈವ" ಶಬ್ದವನ್ನು "ಪಂಕಜ" ಶಬ್ದದಂತೆ ಯೋಗರೂಢವೆಂದು ತಿಳಿಯಬೇಕು. ಪಂಕಜ ಎನ್ನುವ ಶಬ್ದದ ಯೋಗಶಕ್ತಿಯಿಂದ ಕೆಸರಲ್ಲಿ ಹುಟ್ಟುವ ಇತರ ಹುಳುಗಳು ಎನ್ನುವ ಅರ್ಥ ಹೊರಡುತ್ತಿದ್ದರೂ; ರೂಢಿಶಕ್ತಿಯ ಬಲದಿಂದ ಹೇಗೆ ಕಮಲವೆನ್ನುವವೋ ಅದರಂತೆ "ವಿದ್ಯಾಯಾಂ ರಮತೇ ಇತಿ ವೀರ" ಎನ್ನುವ ವ್ಯುತ್ಪತ್ತಿ ಬಲದಿಂದ ಈ ವಿಶೇಷಣವು ಇತರ ಶೈವರಲ್ಲಿ ಕಂಡುಬಂದರೂ ಇಷ್ಟಲಿಂಗಧಾರಿಗಳಲ್ಲಿಯೇ ಇದು ರೂಢವಾಗಿದೆ. ಆದ್ದರಿಂದ ಶ್ರೀ ದಾಸಗುಪ್ತರ ಆಕ್ಷೇಪಗಳು ಅವಿಚಾರಿತ ರಮಣೀಯಗಳೆಂದೇ ತಿಳಿಯಬೇಕು.

ವೀರತ್ವಮಸ್ಯ ನ ಧನೇನ ನ ವಾ ಬಲೇನ
ನೋ ಕಾರ್ಯತಶ್ಚ ವಿಹಿತಂ ದೃಢಶಂಭುಭಕ್ತ್ಯಾ ।
ವೀರಸ್ತುರೀಯ ಇತಿ ಶಂಕರಭಾಷಣೇನ
ಶ್ರೀವೀರಶೈವ ಮತಗಾನ್ನ ಪರೋಽಸ್ತಿ ಕಶ್ಚಿತ್ ॥

(ವೀ. ಧರ್ಮ ಶಿರೋ. ೧–೧೬)

ಈ ರೀತಿಯಾಗಿ ಶ್ರೀ ಷಡಕ್ಷರ ಮಂತ್ರಿಯು ವೀರಶೈವಧರ್ಮ ಶಿರೋಮಣಿ ಎಂಬ ಗ್ರಂಥದಲ್ಲಿ ಪ್ರತಿಪಾದಿಸಿದ್ದಾರೆ.

ಇನ್ನು ಶ್ರೀ ನೀಲಕಂಠ ಶಿವಾಚಾರ್ಯರು –

ವಿಶಬ್ದೋ ವಾ ವಿಕಲ್ಪಾರ್ಥೋ ರ ಶಬ್ದೋ ರಹಿತಾರ್ಥಕಃ ।
ವಿಕಲ್ಪರಹಿತಂ ಶೈವಂ ವೀರಶೈವಂ ಪ್ರಚಕ್ಷತೇ ॥

(ಕ್ರಿಯಾನುಸಾರ ಭಾಗ ೧. ಪುಟ–೧೧)

ಎಂಬುದಾಗಿ 'ವಿ' ಎಂದರೆ ವಿಕಲ್ಪ, 'ರ' ಎಂದರೆ ರಹಿತ – ಹೀಗೆ ವಿಕಲ್ಪರಹಿತನಾದ ಶೈವನೇ ವೀರಶೈವನೆಂದು, ವೀರಶೈವದ ಅರ್ಥವನ್ನು ನಿರೂಪಿಸಿದ್ದಾರೆ.

ತಾತ್ಪರ್ಯ : ಪೂರ್ವದಲ್ಲಿ ಹೇಳಿದ ಪ್ರಕಾರ ವೀರಶೈವ ಧರ್ಮದಲ್ಲಿ ದೀಕ್ಷೆಯನ್ನು ಹೊಂದಿ ಇಷ್ಟಲಿಂಗಧಾರಿಯಾದ ಬಳಿಕ ಪ್ರಮಾದದಿಂದ ಆ ಇಷ್ಟಲಿಂಗವು ತನ್ನ ಶರೀರದಿಂದ ಅಗಲಿದರೆ ಪ್ರಾಣವನ್ನೇ ತ್ಯಾಗ ಮಾಡಬೇಕೆಂಬ ನಿಯಮವಿದ್ದರೂ, ತನ್ನ ಪ್ರಾಣದ ಮೇಲಿನ ಮಮತೆಯಿಂದ ಪ್ರಾಣವನ್ನು ತ್ಯಜಿಸಬೇಕೋ, ಬೇಡವೋ ಎನ್ನುವ ವಿಕಲ್ಪವು ಮನಸ್ಸಿನಲ್ಲಿ ಬರುವ ಸಂಭವವಿರುತ್ತದೆ. ಆದರೆ ಆ ವಿಕಲ್ಪ ಬಾರದಿರುವ ನಿಷ್ಠಾವಂತ ಶಿವಭಕ್ತನೇ ವೀರಶೈವನು.

ಯುದ್ಧಭೂಮಿಯಲ್ಲಿ ಯುದ್ಧ ಮಾಡುವ ನಿಷ್ಠೆಯುಳ್ಳ ಸೈನಿಕನು ತನ್ನ ಒಡೆಯನ ವಿಜಯಕ್ಕಾಗಿ ಹೋರಾಡಿ ಸಾಯುವ ಪ್ರಸಂಗ ಬಂದಾಗ ಸಾಯಬೇಕೋ? ಅಥವಾ ಪ್ರಾಣವನ್ನು ಉಳಿಸಿಕೊಂಡು ಪಲಾಯನ ಮಾಡಬೇಕೋ? ಎನ್ನುವ ಯಾವುದೇ ವಿಕಲ್ಪವನ್ನೂ ಮಾಡದೆ ಏಕನಿಷ್ಠೆಯಿಂದ ಯುದ್ಧದಲ್ಲಿ ವೀರಮರಣವನ್ನಪ್ಪಿಕೊಳ್ಳುವಂತೆ, ಇಷ್ಟಲಿಂಗದಲ್ಲಿ ನಿಷ್ಠೆಯುಳ್ಳ ಈ ಭಕ್ತನಾದರೋ ದಿನವೂ ಆ ಲಿಂಗವನ್ನು ಪೂಜಿಸುತ್ತಿದ್ದು, ಅಕಸ್ಮಾತ್ ಆ ಲಿಂಗಕ್ಕಾಗಿ ಪ್ರಾಣತ್ಯಾಗ ಮಾಡುವ ಪ್ರಸಂಗ ಬಂದಾಗ ವಿಕಲ್ಪವನ್ನು ಮನಸ್ಸಿನಲ್ಲಿ ತಾರದೇ, ಪ್ರಾಣತ್ಯಾಗ ಮಾಡಲು ಸಿದ್ಧನಾಗುತ್ತಾನೆ. ಇಂಥವನನ್ನು ವೀರಶೈವನೆನ್ನುತ್ತಾರೆ.

ಧಾರ್ಮಿಕ ದೃಷ್ಟಿಯಿಂದ ವೀರಶೈವ ಶಬ್ದಾರ್ಥ ನಿರೂಪಣೆ :

ಇಷ್ಟಲಿಂಗ ವಿಯೋಗೇ ವಾ ವ್ರತಾನಾಂ ವಾ ಪರಿಚ್ಯುತೌ ।
ತೃಣವತ್ ಪ್ರಾಣಸಂತ್ಯಾಗ ಇತಿ ವೀರವ್ರತಂ ಮತಮ್ ॥
ಭಕ್ತ್ಯುತ್ಸಾಹ ವಿಶೇಷೋಪಿ ವೀರತ್ವಮಿತಿ ಕಥ್ಯತೇ ।
ವೀರವ್ರತ ಸಮಾಯೋಗಾದ್ ವೀರಶೈವಂ ಪ್ರಕೀರ್ತಿತಮ್ ॥

(ಚಂದ್ರಜ್ಞಾನಾಗಮ, ಕ್ರಿ.ಪಾ. ೧೦/೩೩–೩೪)

ಚಂದ್ರಜ್ಞಾನಾಗಮದ ಈ ಶ್ಲೋಕಗಳಲ್ಲಿ ಶ್ರೀ ಗುರುಪ್ರದತ್ತವಾದ ಇಷ್ಟಲಿಂಗವು ಶರೀರದಿಂದ ಅಗಲಿದರೆ ನನ್ನ ಪ್ರಾಣವನ್ನು ತೃಣದಂತೆ ತ್ಯಾಗ ಮಾಡುವೆನೆಂಬ "ವೀರವ್ರತ"ವನ್ನು ಪರಿಪಾಲಿಸುವ ಶಿವಭಕ್ತನೇ ವೀರಶೈವನೆಂಬುದಾಗಿ 'ವೀರಶೈವ' ಶಬ್ದದ ಧಾರ್ಮಿಕಾರ್ಥವು ಪ್ರತಿಪಾದಿಸಲ್ಪಟ್ಟಿದೆ.

ಇಲ್ಲಿ ತಿಳಿದುಕೊಳ್ಳಬೇಕಾದ ಸಂಪ್ರದಾಯದ ರಹಸ್ಯವೇನೆಂದರೆ ವೀರಶೈವ ಧರ್ಮದ ಗುರುಗಳಾದ, ಷಟ್‌ಸ್ಥಲ ಬ್ರಹ್ಮೋಪದೇಶವನ್ನು ಪಡೆದ ಪಟ್ಟಾಧಿಕಾರಿಗಳು ತಮ್ಮ ತಮ್ಮ ಶಾಖಾನುವರ್ತಿಗಳಾದ ಶಿಷ್ಯರಿಗೆ ಕ್ರಿಯಾದೀಕ್ಷೆಯನ್ನು ಮಾಡಿ ಪಂಚಾಕ್ಷರ ಮಂತ್ರೋಪದೇಶ ಪುರಸ್ಸರವಾಗಿ ಇಷ್ಟಲಿಂಗವನ್ನು ದಯಪಾಲಿಸುತ್ತಾರೆ. ಆಗ ದೀಕ್ಷೆಯನ್ನು ಪಡೆದ ವ್ಯಕ್ತಿಗೆ –

ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ।
ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥

(ಸಿ.ಶಿ.೬–೨೫)

ಅಂದರೆ ಈ ಇಷ್ಟಲಿಂಗವನ್ನು ಪ್ರಾಣದಷ್ಟು ಪ್ರೀತಿಯಿಂದ ಧರಿಸು. ಇದನ್ನು ಎಲ್ಲಿಯೂ, ಎಂದೂ ಅಗಲಿರಬೇಡ ಎಂಬುದಾಗಿ ಉಪದೇಶಿಸುತ್ತಾರೆ. ಶ್ರೀ ಗುರುಗಳ ಈ ಆದೇಶವನ್ನು ತಪ್ಪದೆ ಪರಿಪಾಲಿಸುತ್ತಿರುವಾಗ ಅಕಸ್ಮಾತ್ ಇಷ್ಟಲಿಂಗವು ಶರೀರದಿಂದ ಅಗಲಿದರೆ ತನ್ನ ಪ್ರಾಣವನ್ನೇ ತ್ಯಾಗ ಮಾಡುವೆನೆಂಬ "ವೀರವ್ರತ"ವನ್ನು ಪರಿಪಾಲಿಸುವ ಶಿವಭಕ್ತನೇ ವೀರಶೈವನೆಂದು ತಾತ್ಪರ್ಯವು.

ಹೀಗೆ ವೀರಶೈವ ಶಬ್ದದಲ್ಲಿಯ "ವೀರ" ಎಂಬ ವಿಶೇಷಣವು ಭಕ್ತಿಯ ಉತ್ಕರ್ಷವನ್ನು ತಿಳಿಸುವುದೇ ವಿನಹ, ಧನ ಇಲ್ಲವೇ ಶರೀರದ ಬಲಪ್ರಯುಕ್ತವಾದ ಅಹಂಕಾರವನ್ನು ವ್ಯಕ್ತಮಾಡುವಂತಹುದಲ್ಲ. ಇದೇ ಅಭಿಪ್ರಾಯವನ್ನೇ –

ಯೋ ಹಸ್ತಪೀಠೇ ನಿಜಮಿಷ್ಟಲಿಂಗಂ
ವಿನ್ಯಸ್ಯ ತಲ್ಲೀನ ಮನಃಪ್ರಚಾರಃ ।
ಬಾಹ್ಯಕ್ರಿಯಾಸಂಕುಲ ನಿಃಸ್ಪೃಹಾತ್ಮಾ
ಸಂಪೂಜಯತ್ಯಂಗ ಸ ವೀರಶೈವಃ ॥

ಅಂದರೆ, ಕರಪೀಠದಲ್ಲಿ ಇಷ್ಟಲಿಂಗವನ್ನು ಇರಿಸಿಕೊಂಡು, ಆ ಇಷ್ಟಲಿಂಗದಲ್ಲಿಯೇ ಮನಸ್ಸನ್ನು ಸ್ಥಿರಗೊಳಿಸಿ, ಬಾಹ್ಯ ಕ್ರಿಯೆಗಳಲ್ಲಿ ನಿಃಸ್ಪೃಹನಾಗಿ, ಅದನ್ನು ನಿಷ್ಠೆಯಿಂದ ಪೂಜಿಸುವವನೇ ವೀರಶೈವನೆಂಬುದಾಗಿ ನಿರೂಪಿಸಲ್ಪಟ್ಟಿರುತ್ತದೆ. ಇಲ್ಲಿ ಬಾಹ್ಯ ಉಪಚಾರಗಳಲ್ಲಿ ಹೆಚ್ಚಿನ ವೇಳೆಯನ್ನು ಕಳೆಯದೆ, ಇಷ್ಟಲಿಂಗದಲ್ಲಿ ದೃಷ್ಟಿಯೋಗ (ಶಿವಯೋಗ)ವನ್ನು ಸಾಧಿಸುವುದರ ಬಗ್ಗೆ ಹೆಚ್ಚಿನ ಮಹತ್ವವು ಸೂಚಿಸಲ್ಪಟ್ಟಿದೆ. ಇದರಿಂದ ಕರಪೀಠದಲ್ಲಿ ಇಷ್ಟಲಿಂಗವನ್ನು ಅರ್ಚಿಸುವ ಈ ವೀರಶೈವ ಧರ್ಮವು ಪುರಾಣಕರ್ತೃವಾದ ಶ್ರೀ ವ್ಯಾಸಮಹರ್ಷಿಗಿಂತ ಪೂರ್ವದಲ್ಲಿಯೇ ಅತ್ಯಂತ ಪ್ರಚಾರದಲ್ಲಿ ಇತ್ತೆಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. ಅಂತೆಯೇ ಶ್ರೀವ್ಯಾಸಮಹರ್ಷಿಯು ಶ್ರೀ ಕೇದಾರ ಪೀಠದ ದ್ವಾಪರಯುಗದ ಆಚಾರ್ಯರಾದ ಶ್ರೀ ೧೦೦೮ ಜಗದ್ಗುರು ಘಂಟಾಕರ್ಣ ಶಿವಾಚಾರ್ಯ ಭಗವತ್ಪಾದರಿಂದ ವೀರಶೈವ ತತ್ತ್ವಗಳನ್ನು ತಿಳಿದುಕೊಂಡು ಅವರ ಶಿಷ್ಯನಾಗಿದ್ದನೆಂಬ ಬಗ್ಗೆ ಇಂದಿಗೂ ಕಾಶೀ ಕ್ಷೇತ್ರದ ವ್ಯಾಸಕಾಶಿಯಲ್ಲಿ ಶ್ರೀ ವ್ಯಾಸರ ಮಂದಿರದಲ್ಲಿ ಸ್ಥಾಪಿತವಾಗಿರುವ ಶ್ರೀ ಘಂಟಾಕರ್ಣ ಶಿವಾಚಾರ್ಯರ ಅತಿ ಪ್ರಾಚೀನ ಶಿಲಾಮೂರ್ತಿಯೇ ಪ್ರತ್ಯಕ್ಷ ಪ್ರಮಾಣವಾಗಿ ಕಂಗೊಳಿಸುತ್ತಲಿದೆ. ಎಡಹಸ್ತದಲ್ಲಿ ಇಷ್ಟಲಿಂಗವನ್ನು ಪೂಜಿಸುತ್ತಿರುವ ಈ ಮೂರ್ತಿಯು ಇಂದಿಗೂ ವ್ಯಾಸಕಾಶಿಯಲ್ಲಿದೆ. ಜಿಜ್ಞಾಸುಗಳೂ, ಸಂಶೋಧಕರೂ ಪರಾಮರ್ಶಿಸಬಹುದು.

ಅದೇ ಪ್ರಕಾರ ವಾತುಲ ಶುದ್ಧಾಖ್ಯ ತಂತ್ರದಲ್ಲಿ –

ವಿಶಿಷ್ಟ ಈರ್ಯತೇ ಯಸ್ಮಾದ್ ವೀರ ಇತ್ಯಭಿಧೀಯತೇ ।
ಶಿವೇನ ಸಹ ಸಂಬಂಧಂ ಶೈವಮಿತ್ಯಾದೃತಂ ಬುಧೈಃ ॥

ಉಭಯೋಃ ಸಂಪುಟೀಭಾವಾದ್ ವೀರಶೈವಮಿತಿ ಸ್ಮೃತಂ ।
ಶಿವಾಯಾರ್ಪಿತಜೀವತ್ವಾದ್ ವೀರತಂತ್ರ ಸಮುದ್ಭವಾತ್ ॥
ವೀರಶೈವ ಸಮಾಯೋಗಾದ್ ವೀರಶೈವಮಿತಿ ಸ್ಮೃತಮ್ ।
( ೧೦ / ೨೭-೨೯)

"ವಿಶಿಷ್ಟ ಈರ್ಯತ ಇತಿ ವೀರಃ ಶಿವೇನ ಸಹ ಸಂಬಂಧಂ ಶೈವಂ" - ಹೀಗೆ "ವೀರ" ಮತ್ತು "ಶೈವ" ಶಬ್ದಗಳ ಪೃಥಕ್ ಪೃಥಕ್ ವ್ಯುತ್ಪತ್ತಿಗಳನ್ನು ಪ್ರತಿಪಾದಿಸಿ, ಕೊನೆಗೆ ಅವೆರಡನ್ನೂ ಕೂಡಿಸಿದಾಗ 'ವೀರಶೈವ' ಶಬ್ದವು ಉತ್ಪನ್ನವಾಗುತ್ತದೆ ಎಂಬುದಾಗಿ ವೀರಶೈವ ಶಬ್ದದ ಪರಿಭಾಷೆಯು ಹೇಳುತ್ತದೆ.

ತಾತ್ಪರ್ಯ : ಇಷ್ಟಲಿಂಗವನ್ನು ಸದಾ ಧರಿಸಿಕೊಂಡು ಅಷ್ಟಾವರಣಗಳಲ್ಲಿ ನಿಷ್ಠೆಯುಳ್ಳವನಾಗಿ, ಪಂಚಾಚಾರಗಳನ್ನು ಪರಿಪಾಲಿಸುತ್ತ, ಜಗತ್ತಿನಲ್ಲಿರುವ ಉಳಿದ ಜನರಿಗಿಂತಲೂ ಈತನು ವಿಶಿಷ್ಟ (ವಿಲಕ್ಷಣ)ನಾಗಿ ತೋರುತ್ತಿರುವುದರಿಂದಲೂ, ಶಿವನಿಗಾಗಿ ತನ್ನ ಆತ್ಮಾರ್ಪಣೆಯನ್ನು ಮಾಡುವ ವೀರವ್ರತ ಪರಿಪಾಲಕನಾಗಿರುವುದರಿಂದಲೂ, ಅದರಂತೆ ವೀರಶೈವ ತಂತ್ರೋಕ್ತ ಮಾರ್ಗದಲ್ಲಿ ಮುನ್ನಡೆಯುವುದರಿಂದಲೂ ಈತನನ್ನು ವೀರಶೈವನೆನ್ನುತ್ತಾರೆ.

ಇನ್ನು ಶ್ರೀ ನೀಲಕಂಠ ಶಿವಾಚಾರ್ಯರು ಕ್ರಿಯಾಸಾರದಲ್ಲಿ
೧ ವಿರೋಧಾರ್ಥೋ ವಿ ಶಬ್ದಃ ಸ್ಯಾದ್ ರ ಶಬ್ದೋ ರಹಿತಾರ್ಥಕಃ ।
ವಿರೋಧರಹಿತಂ ಶೈವಂ ವೀರಶೈವಂ ವಿದುರ್ಬುಧಾಃ ॥
(ಭಾಗ-೧, ಪು-೧೧)

ವಿರೋಧ ರಹಿತನಾದ ಶೈವನೇ ವೀರಶೈವನೆಂಬುದಾಗಿ ವೀರಶೈವ ಲಕ್ಷಣವನ್ನು ಪ್ರತಿಪಾದಿಸಿದ್ದಾರೆ. ಅಂದರೆ ಯಾವುದೇ ಭಾರತೀಯ ಧರ್ಮದರ್ಶನಗಳನ್ನು ವಿರೋಧ ಭಾವನೆಯಿಂದ ಖಂಡಿಸದೆ, ಅವೆಲ್ಲವುಗಳನ್ನೂ ಸಮನ್ವಯ ದೃಷ್ಟಿಯಿಂದ ನೋಡುವುದೇ ವೀರಶೈವರ ಮತ್ತು ವೀರಶೈವ ಧರ್ಮದ ಉದ್ದೇಶವಾಗಿದೆ.

ವೀರಶೈವ ಧರ್ಮದ ಸಂಸ್ಥಾಪಕಾಚಾರ್ಯರಾದ ಶ್ರೀ ೧೦೦೮ ಜಗದ್ಗುರು ರೇಣುಕ ಭಗವತ್ಪಾದರು ಶ್ರೀ ಅಗಸ್ತ್ಯ ಮಹರ್ಷಿಗೆ -

ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।
ಏತಾನಿ ಮಾನಭೂತಾನಿ ನ ಹಂತವ್ಯಾನಿ ಯುಕ್ತಿಭಿಃ ॥
(ಸಿ.ಶಿ. ೫-೪)

ಹೇ ಅಗಸ್ತ್ಯನೇ! ಸಾಂಖ್ಯ, ಯೋಗ, ಪಾಂಚರಾತ್ರ ಮುಂತಾದ ವೇದಸಮ್ಮತಗಳಾದ ಅನೇಕ ದರ್ಶನಗಳಿವೆ. ಅವೆಲ್ಲವುಗಳೂ ತಮ್ಮ ತಮ್ಮ ಪರಿಧಿಯಲ್ಲಿ ಪ್ರಾಮಾಣಿಕವಾಗಿರುವುದರಿಂದ ಅವುಗಳನ್ನು ಯುಕ್ತಿಯಿಂದ ಖಂಡಿಸಬಾರದೆಂಬುದಾಗಿ ವೀರಶೈವರ ಈ ವಿರೋಧರಹಿತವಾದ ಸಮನ್ವಯ ಸಿದ್ಧಾಂತವನ್ನು ಆದಿಯಲ್ಲಿಯೇ ಉಪದೇಶಿಸಿದ್ದಾರೆ. ಅದನ್ನೇ ಆಧಾರವಾಗಿ ಹಿಡಿದುಕೊಂಡು ಶ್ರೀ ನೀಲಕಂಠ ಶಿವಾಚಾರ್ಯರು ಮೂಲಾಚಾರ್ಯರ ಅಭಿಪ್ರಾಯವನ್ನೇ ತಮ್ಮ ಮಾತಿನಲ್ಲಿ ತಿಳಿಯಪಡಿಸಿದ್ದಾರೆ.

ಇದೇ ಪ್ರಕಾರ ಜನ್ಮತಃ ಬ್ರಾಹ್ಮಣರಾಗಿದ್ದರೂ ವೀರಶೈವ ಧರ್ಮದಲ್ಲಿ ದೀಕ್ಷೆಯನ್ನು ಪಡೆದು ಈ ಧರ್ಮದ ತತ್ತ್ವಗಳನ್ನು ಬಹಳಷ್ಟು ಪ್ರಚಾರ ಮಾಡಿದ ಶ್ರೀ ಬಸವಣ್ಣನವರಾದರೂ -

ಕಳಬೇಡ, ಕೊಲಬೇಡ; ಹುಸಿಯ ನುಡಿಯಲು ಬೇಡ;
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ;
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ;
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ !

ಎಂಬ ತಮ್ಮ ಈ ವಚನದಲ್ಲಿ ಸಪ್ತಸೂತ್ರಗಳನ್ನು ಪ್ರತಿಪಾದಿಸಿ ಇವುಗಳಲ್ಲಿ ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ - ಎಂಬ ನಾಲ್ಕು ಸೂತ್ರಗಳಿಂದ ವೀರಶೈವನಾದವನು ವಿರೋಧರಹಿತವಾದ ಜೀವನವನ್ನು ಸಾಧಿಸಬೇಕಾದರೆ ಹೇಗೆ ವರ್ತಿಸಬೇಕು ಎನ್ನುವುದನ್ನು ಬಹು ಮಾರ್ಮಿಕವಾಗಿ ಪ್ರತಿಪಾದಿಸಿ, ಈ ವಿರೋಧರಾಹಿತ್ಯವು ಅಂತರಂಗದ ಶುದ್ಧಿಗೆ ಕಾರಣವೆಂಬುದಾಗಿ ನಿರ್ಣಯಿಸಿದ್ದಾರೆ.

ಹೀಗೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದಾಚಾರ್ಯರನ್ನು ಮೊದಲ್ಗೊಂಡು ಶ್ರೀಬಸವಣ್ಣನವರ ಪರ್ಯಂತ ವೀರಶೈವ ಆಚಾರ್ಯರ ಮತ್ತು ಶರಣರ ಸಾಹಿತ್ಯವನ್ನು ಪರ್ಯಾಲೋಚಿಸಿದಾಗ, ಅನಾದಿ ಕಾಲದಿಂದಲೂ ವೀರಶೈವರು ಸ್ವಧರ್ಮ ನಿಷ್ಠೆ ಮತ್ತು ಪರಧರ್ಮ ಸಹಿಷ್ಣುತೆಯನ್ನು ಪರಿಪಾಲಿಸುತ್ತ ಸಕಲ ಪ್ರಾಣಿಗಳನ್ನೂ ಪ್ರೀತಿಸುವ ಉದಾತ್ತವಾದ ಮನೋಭಾವನೆಯುಳ್ಳವರಾಗಿದ್ದಾರೆಂದು ತಿಳಿದುಬರುತ್ತದೆ. ವೀರಶೈವರ ಈ ಉದಾತ್ತ ಭಾವನೆಯನ್ನು ಅನ್ಯ ಧರ್ಮದವರೂ ನಿಷ್ಠೆಯಿಂದ ಪರಿಪಾಲಿಸಿದ್ದೇ ಆದರೆ ಇಂದು ಧರ್ಮದ ಹೆಸರಿನಿಂದ ನಡೆಯುತ್ತಿರುವ ಹಿಂಸಾಚಾರಗಳು ಅಡಗಿ ಜಗತ್ತಿನಲ್ಲಿ ಚಿರಶಾಂತಿ ನೆಲೆಸುವುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ತೆರನಾಗಿ ವೀರಶೈವ ಪದದ ಧಾರ್ಮಿಕ ಅರ್ಥದ ನಿರ್ವಚನಗಳನ್ನು ಪರ್ಯಾಲೋಚಿಸಿದಾಗ ಹೊರಡುವ ತಾತ್ಪರ್ಯವೇನೆಂದರೆ - ಶ್ರೀ ಸದ್ಗುರುಗಳಿಂದ ದೀಕ್ಷಾ ಸಂಸ್ಕಾರವನ್ನು ಹೊಂದಿ ಅವರ ಅನುಗ್ರಹದಿಂದ ಪ್ರಾಪ್ತವಾದ ಇಷ್ಟಲಿಂಗವನ್ನು ಸದಾ ದೇಹದ ಮೇಲೆ ಧರಿಸಿಕೊಂಡು, ಪ್ರಸಂಗಬಂದರೆ ಪ್ರಾಣವನ್ನೇ ತ್ಯಾಗಮಾಡಬಲ್ಲೆನು; ಆದರೆ ಇಷ್ಟಲಿಂಗ ಪೂಜೆಯನ್ನು ಎಂದಿಗೂ ಬಿಡುವುದಿಲ್ಲವೆಂಬ ನಿಷ್ಠಾಭಕ್ತಿಯಿಂದ ಕೂಡಿದವನಾಗಿ, ಯಾವುದೇ ಧರ್ಮದವರನ್ನಾಗಲಿ, ಯಾವುದೇ ಪ್ರಾಣಿಯನ್ನಾಗಲಿ, ದ್ವೇಷಿಸದೇ ವೈರಭಾವನೆಯನ್ನು ಸಂಪೂರ್ಣ ತ್ಯಾಗಮಾಡಿ, ಸರ್ವರೊಡನೆ ಪ್ರೇಮದಿಂದ ವ್ಯವಹರಿಸುವ ಉದಾತ್ತವಾದ ಮನೋಭಾವನೆಯುಳ್ಳವನೇ ವೀರಶೈವನು.

ವೀರಶೈವದ ಪ್ರಭೇದ :

ವೀತರಾಗಾದಿ ದೋಷತ್ವಾದಾತ್ಮ ತತ್ತ್ವ ವಿಚಾರಣಾತ್ ।
ವಿಕಲ್ಪಾಕಲ್ಪ ಶೂನ್ಯತ್ವಾದ್ವೀರಶೈವಮಿತಿ ಸ್ಮೃತಮ್ ॥

ಸಾಮಾನ್ಯಂ ಪ್ರಥಮಂ ಪ್ರೋಕ್ತಂ ವಿಶೇಷಂ ಚ ದ್ವಿತೀಯಕಮ್ ।
ನಿರಾಭಾರಂ ತೃತೀಯಂ ಸ್ಯಾತ್ ಕ್ರಮಾಲ್ಲಕ್ಷಣಮುಚ್ಯತೇ ॥
(ಸೂಕ್ಷ್ಮಾಗಮ, ಕ್ರಿಯಾಪಾದ ೭/೨೯–೩೦)

ಸೂಕ್ಷ್ಮಾಗಮದ ಈ ವಚನದಲ್ಲಿ ವೀತರಾಗಿಗಳು, ದೋಷರಹಿತರು, ಆತ್ಮತತ್ತ್ವ ವಿಚಾರಿಗಳು ಮತ್ತು ವಿಕಲ್ಪಶೂನ್ಯರು ಮುಂತಾದ ಲಕ್ಷಣಗಳಿಂದ ಕೂಡಿರುವವರು ವೀರಶೈವರು. ಈ ವೀರಶೈವವು ಸಾಮಾನ್ಯ, ವಿಶೇಷ ಹಾಗೂ ನಿರಾಭಾರ ಎಂದು ಮೂರು ವಿಧಗಳಿಂದ ಪ್ರತಿಪಾದಿಸಲ್ಪಟ್ಟಿದೆ. ಈ ಮೂರು ಭೇದಗಳು ವೀರಶೈವನ ಕ್ರಮಿಕ ವಿಕಾಸವನ್ನು ಸೂಚಿಸುವವುಗಳಾಗಿವೆ. ಇವುಗಳಲ್ಲಿ "ಸಾಮಾನ್ಯ ನಿಯಮಾನ್ ಯಃ ಪರಿಪಾಲಯತಿ ಸ ಸಾಮಾನ್ಯ ವೀರಶೈವಃ" – ಎಂಬೀ ಆಗಮೋಕ್ತಿಯಂತೆ, ಗುರುದೀಕ್ಷೆಯನ್ನು ಪಡೆದ ನಂತರ ಇಷ್ಟಲಿಂಗದ ಪೂಜೆ ಮತ್ತು ಗುರು – ಜಂಗಮರ ಸೇವೆ ಮುಂತಾದ ವೀರಶೈವ ಧರ್ಮದ ಸಾಮಾನ್ಯ ನಿಯಮಗಳನ್ನು ಪರಿಪಾಲಿಸುವವನೇ ಸಾಮಾನ್ಯ ವೀರಶೈವನು.

"ವಿಶಿಷ್ಟ ಧರ್ಮಾನುಷ್ಠಾನಾದ್ವಿಶೇಷ ಇತಿ ಕಥ್ಯತೇ" ಎನ್ನುವ ಆಗಮೋಕ್ತಿಗನುಸಾರವಾಗಿ, ಪೂರ್ವದಲ್ಲಿ ಹೇಳಿದ ವೀರಶೈವರ ಸಾಮಾನ್ಯ ನಿಯಮಗಳನ್ನು ಪರಿಪಾಲಿಸುತ್ತಾ ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯ ಎಂಬ ಮುಕ್ತಿಯ ಸೋಪಾನಗಳಂತಿರುವ ಷಟ್‌ಸ್ಥಲದ ತತ್ತ್ವಗಳನ್ನು ಗುರುಮುಖದಿಂದ ವಿಶೇಷವಾಗಿ ತಿಳಿದುಕೊಂಡು ಅವುಗಳನ್ನು ತನ್ನ ನಿತ್ಯ ಜೀವನದಲ್ಲಿ ಅಳವಡಿಸಿಕೊಂಡವನೇ ವಿಶೇಷ ವೀರಶೈವನು.

"ನಿವೃತ್ತ ಕರ್ಮಭಾರತ್ವಾನ್ನಿರಾಭಾರ ಇತಿ ಸ್ಮೃತಃ" ಎಂಬ ಆಗಮೋಕ್ತಿಯಂತೆ, ಮೇಲೆ ಹೇಳಿದ ವಿಶೇಷ ವೀರಶೈವನೇ ತನ್ನ ಎಲ್ಲ ಕರ್ತವ್ಯಗಳನ್ನು ಪೂರ್ಣಮಾಡಿ ಕೃತಕೃತ್ಯನೆನಿಸಿಕೊಂಡು ಜೀವನ್ಮುಕ್ತನಂತೆ ನಿಃಸ್ಪೃಹವಾದ ವೃತ್ತಿಯಿಂದ ಜೀವನವನ್ನು ಕಳೆಯುತ್ತಿರುವವನಾಗಿ ನಿರಾಭಾರ ವೀರಶೈವನೆನಿಸುವನು. ಹೀಗೆ ವೀರಶೈವರ ಈ ಮೂರು ಭೇದಗಳು ಒಬ್ಬನೇ ಆದ ವ್ಯಕ್ತಿಯ ಕ್ರಮಿಕವಾದ ಆಧ್ಯಾತ್ಮಿಕ ವಿಕಾಸದ ಪ್ರತೀಕಗಳಾಗಿ ತೋರುತ್ತವೆ.

ವೀರಶೈವರ ದಾರ್ಶನಿಕ ಸಿದ್ಧಾಂತ :

ಪರಮ ಪಾವನವಾದ ವೀರಶೈವರ ದಾರ್ಶನಿಕ ಸಿದ್ಧಾಂತವು ವಿಶೇಷಾದ್ವೈತ, ಶಿವಾದ್ವೈತ ಮತ್ತು ಶಕ್ತಿವಿಶಿಷ್ಟಾದ್ವೈತ ಮುಂತಾದ ಸಾರ್ಥಕ ಹೆಸರುಗಳಿಂದ ಕರೆಯಲ್ಪಡುತ್ತದೆ. ಈ ಹೆಸರುಗಳ ವ್ಯುತ್ಪತ್ತಿಯನ್ನವಲೋಕಿಸಿದಾಗ ಈ ಸಿದ್ಧಾಂತದ ದಾರ್ಶನಿಕ ತತ್ತ್ವಗಳ ಪರಿಜ್ಞಾನವಾಗುವುದು. ಆದ್ದರಿಂದ ಈಗ ಇವುಗಳ ವ್ಯುತ್ಪತ್ತಿಯನ್ನವಲೋಕಿಸೋಣ.

೧. ವಿಶೇಷಾದ್ವೈತ :

"ವಿಶ್ವ ಶೇಷಶ್ಚ ವಿಶೇಷೌ = ಈಶ ಜೀವೌ; ತಯೋರದ್ವೈತಂ ವಿಶೇಷಾದ್ವೈತಮ್" ಇದು ವಿಶೇಷಾದ್ವೈತ ಶಬ್ದದ ವ್ಯುತ್ಪತ್ತಿಯು.

ತಾತ್ಪರ್ಯ : "ವಿಶ್ಚಕ್ಷುಷಿ ವ್ಯೋಮ್ನಿ ವಾತೇ ಪರಮಾತ್ಮನಿ ಪಕ್ಷಿಣಿ" (ಏಕಾಕ್ಷರ ಕೋಶ, ಪುಟ – ೧೮) ಎಂಬ ಈ ಏಕಾಕ್ಷರ ಕೋಶದಲ್ಲಿ 'ವಿಃ' ಎನ್ನುವ ಅಕ್ಷರಕ್ಕೆ ಕಣ್ಣು, ಆಕಾಶ, ವಾಯು, ಪಕ್ಷಿ ಮತ್ತು ಪರಮಾತ್ಮ ಎನ್ನುವ ಐದು ಅರ್ಥಗಳು ನಿರೂಪಿಸಲ್ಪಟ್ಟಿವೆ. ಆದ್ದರಿಂದ "ವಾತಿ ಉತ್ಪಾದಯತಿ ಜಗದಿತಿ ವಿಃ" ಎಂಬ ವ್ಯುತ್ಪತ್ತಿಯ ಮೇರೆಗೆ ಜಗತ್ತನ್ನು ಸೃಷ್ಟಿಸುವ ಪರಮಾತ್ಮನಿಗೆ "ವಿಃ" ಎಂದು ಕರೆಯಲಾಗುತ್ತದೆ.

ಅಮರಕೋಶದಲ್ಲಿ 'ವಿ' ಎಂಬ ಶಬ್ದಕ್ಕೆ ಪಕ್ಷಿ ಎಂದೇ ಅರ್ಥವನ್ನು ಹೇಳಲಾಗಿದೆ. ಹಾಗಾದರೂ "ದ್ವಾ ಸುಪರ್ಣಾ ಸಯುಜಾ ಸಖಾಯಾ" (ಮುಂಡಕ ೩–೧–೧) ಈ ಉಪನಿಷದ್ವಚನದಲ್ಲಿ ಜೀವಾತ್ಮ–ಪರಮಾತ್ಮರಿಬ್ಬರನ್ನೂ ಪಕ್ಷಿ ಶಬ್ದದಿಂದ ಪ್ರತಿಪಾದಿಸಿರುವುದರಿಂದ, ಪ್ರಕೃತವಾದ 'ವಿ' ಶಬ್ದದ ಅರ್ಥವನ್ನು ಪರಮಾತ್ಮನೆಂತಲೇ ಗ್ರಹಿಸಬೇಕು. ಅದರಂತೆ 'ಶೇಷ' ಎಂದರೆ ಆ ಪರಮಾತ್ಮನ ಅಂಶವಾದ ಜೀವಾತ್ಮನು – ಎಂಬುದಾಗಿ ಗ್ರಹಿಸಬೇಕು. ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಂಗಾಃ" (ಬೃಹದಾರಣ್ಯಕ ೨–೧–೨೦) ಎಂಬ ಶ್ರುತಿವಚನದಲ್ಲಿ ಅಗ್ನಿಕಣದ ದೃಷ್ಟಾಂತದಿಂದ ಜೀವಾತ್ಮನು ಪರಮಾತ್ಮನ ಅಂಶವೆಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ.

ಹೀಗೆ ಅಂಶಾಶಿರೂಪರಾದ ಜೀವ–ಪರಮಾತ್ಮರಿಗೆ "ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಸ್ತಂಗಚ್ಛಂತಿ" (ಮುಂಡಕ ೩–೨–೮) ಎನ್ನುವ ಶ್ರುತಿಯು ಅಭೇದವನ್ನು ಬೋಧಿಸುತ್ತದೆ. ತಾತ್ಪರ್ಯ : ಸಮುದ್ರವನ್ನು ಕೂಡುವ ಪೂರ್ವದಲ್ಲಿ ನದಿಯು ಸಮುದ್ರಕ್ಕಿಂತ ಬೇರೆಯಾಗಿ ತೋರಿದರೂ, ಅದರಲ್ಲಿ ಕೂಡಿದಾಗ ಹೇಗೆ ತನ್ನ ನಾಮ–ರೂಪಗಳನ್ನು ಕಳೆದುಕೊಂಡು ಅಭಿನ್ನವಾಗುತ್ತದೋ, ಅದರಂತೆ ಸಂಸಾರ ದಿಶೆಯಲ್ಲಿ ಪರಮಾತ್ಮನಿಗಿಂತ ಭಿನ್ನವಾಗಿ ತೋರುವ ಅಂಶನಾದ ಜೀವಾತ್ಮನು ಮುಕ್ತಿಯ ದಿಶೆಯಲ್ಲಿ ಅಭಿನ್ನನಾಗುತ್ತಾನೆ. ಈ ಪ್ರಕಾರವಾಗಿ ವಿಶಬ್ದ ವಾಚ್ಯನಾದ ಪರಮಾತ್ಮನಿಗೂ, ಶೇಷಶಬ್ದ ವಾಚ್ಯನಾದ ಜೀವಾತ್ಮನಿಗೂ ಮುಕ್ತಿಯ ಸ್ಥಿತಿಯಲ್ಲಿ ಅದ್ವೈತವನ್ನು ಬೋಧಿಸುವ ಈ ವೀರಶೈವ ದರ್ಶನವನ್ನು ವಿಶೇಷಾದ್ವೈತವೆಂದು ಕರೆಯಲಾಗಿದೆ ಅಂತೆಯೇ –

ವಿ ಶಬ್ದೇನೋಚ್ಯತೇ ಶಂಭುರ್ಹಂಸಹಂಸೇತಿ ಮಂತ್ರತಃ ।
ಶೇಷಶಬ್ದೇನ ಶಾರೀರೋ ಯಥಾಗ್ನೇರಿತಿ ಮಂತ್ರತಃ ॥
ಅದ್ವೈತೇನ ಭವೇದ್ಯೋಗೋ ಯಥಾನದ್ಯ ಇತಿ ಶ್ರುತೇಃ ।
(ಶ್ರೀಕರಭಾಷ್ಯ, ಮಂಗಲಾಚರಣ–
೧೬)

ಎಂಬುದಾಗಿ ಭಾಷ್ಯಕಾರರಾದ ಶ್ರೀಪತಿ ಪಂಡಿತಾರಾಧ್ಯರು "ವಿಶೇಷಾದ್ವೈತ" ಪದದ ರಹಸ್ಯಾರ್ಥವನ್ನು ಸಂಕ್ಷೇಪವಾಗಿ ಪ್ರತಿಪಾದಿಸಿದ್ದಾರೆ.

೨. ಶಿವಾದ್ವೈತ :

"ಶಿವಶ್ಚ ಶಿವಶ್ಚ ಶಿವೌ ತಯೋರದ್ವೈತಂ ಶಿವಾದ್ವೈತಮ್" ಇದು ಶಿವಾದ್ವೈತ ಪದದ ವ್ಯುತ್ಪತ್ತಿಯು. ಇಲ್ಲಿ ಮೊದಲನೇ ಶಿವ ಶಬ್ದದ ಅರ್ಥವು ಪರಮಾತ್ಮನೆಂತಲೂ, ಎರಡನೇ ಶಿವ ಶಬ್ದದ ಅರ್ಥವು ಪರಮಾತ್ಮನ ಅಂಶನಾದ ಜೀವಾತ್ಮನೆಂತಲೂ ಗ್ರಹಿಸಬೇಕು. ಸಂಸಾರ ದಿಶೆಯಲ್ಲಿ ಉಪಾಸ್ಯ–ಉಪಾಸಕ ರೂಪವಾಗಿ ಇಬ್ಬರಲ್ಲಿ ಭೇದ ತೋರಿದರೂ, ಮುಕ್ತಾವಸ್ಥೆಯಲ್ಲಿ ಇವರೀರ್ವರ ಅದ್ವೈತವನ್ನು ಪ್ರತಿಪಾದಿಸುವ ವೀರಶೈವ ಸಿದ್ಧಾಂತವನ್ನು "ಶಿವಾದ್ವೈತ" ಸಿದ್ಧಾಂತವೆಂದು ಕರೆಯುತ್ತಾರೆ.

೩. ಶಕ್ತಿವಿಶಿಷ್ಟಾದ್ವೈತ :

"ಶಕ್ತಿಶ್ಚ ಶಕ್ತಿಶ್ಚ = ಶಕ್ತೀ; ತಾಭ್ಯಾಂ ವಿಶಿಷ್ಟೌ ಯೌ ಜೀವೇಶೌ, ತಯೋರದ್ವೈತಂ ತಂ

= ಶಕ್ತಿ ವಿಶಿಷ್ಟಾದ್ವೈತಮ್" ಇದು ಈ ಪದದ ವ್ಯುತ್ಪತ್ತಿಯು. ಶಕ್ತಿಯು ಸ್ಥೂಲ, ಸೂಕ್ಷ್ಮ ಭೇದದಿಂದ ಎರಡು ವಿಧವಾಗಿದೆ. ಇದರಲ್ಲಿ ಸೂಕ್ಷ್ಮ ಶಕ್ತಿಯು ಈಶ್ವರನನ್ನೂ ಸ್ಥೂಲ ಶಕ್ತಿಯು ಜೀವನನ್ನೂ ಆಶ್ರಯಿಸಿರುತ್ತವೆ. ಸೂಕ್ಷ್ಮಶಕ್ತಿಯ ಕಾರಣದಿಂದಲೇ ಶಿವನು ಸರ್ವಜ್ಞನೂ, ಸರ್ವಕರ್ತನೂ ಆಗಿರುತ್ತಾನೆ. ಸ್ಥೂಲಶಕ್ತಿಯ ಕಾರಣದಿಂದ ಜೀವಾತ್ಮನು ಅಲ್ಪಜ್ಞನೂ, ಅಲ್ಪಕರ್ತನೂ ಆಗಿರುತ್ತಾನೆ. ಅದರಂತೆ ಈ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವಾದಿ ಧರ್ಮಗಳ ಭೇದದಿಂದಲೇ ಜೀವೇಶ್ವರರಲ್ಲಿ ಭೇದ ಉಂಟಾಗಿರುತ್ತದೆ.

ಶಿವನ ಅಂಶವಾದ ಈ ಜೀವನು ಪುನಃ ಶಿವನಲ್ಲಿ ಸಮರಸನಾಗದೆ ಕೃತಕೃತ್ಯನಾಗಲಾರನು. ಜೀವಾತ್ಮನು ಶಿವನಲ್ಲಿ ಸಮರಸವಾಗುವ ಮಾರ್ಗವನ್ನು ಉಪದೇಶಿಸುವ ವೀರಶೈವ ದಾರ್ಶನಿಕ ಸಿದ್ಧಾಂತವನ್ನು "ಶಕ್ತಿ ವಿಶಿಷ್ಟಾದ್ವೈತ"ವೆಂದು ಕರೆದಿದ್ದಾರೆ.

ಆಣವಾದಿ ಮಲತ್ರಯಗಳಿಂದ ಆವೃತನಾಗಿ ಅಲ್ಪಜ್ಞತ್ವಾದಿ ಸಂಕುಚಿತ ಶಕ್ತಿಯಿಂದ ಕೂಡಿದ ಜೀವಾತ್ಮನಿಗೆ ಸದ್ಗುರುಗಳು ಯಾವಾಗ ದೀಕ್ಷೆಯನ್ನು ಮಾಡುವರೋ ಆವಾಗ ಅವನಲ್ಲಿಯ ಆಣವಾದಿ ಮಲತ್ರಯಗಳು ತೊಲಗಿ, ಅವನಲ್ಲಿಯ ಅಲ್ಪಜ್ಞತ್ವಾದಿ ಶಕ್ತಿಗಳೇ ಭಕ್ತಿರೂಪದಲ್ಲಿ ಪರಿವರ್ತನೆಗೊಳ್ಳುತ್ತವೆ. ಅವನ ಸಾಧನೆಯು ಬೆಳೆದಂತೆಲ್ಲ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸಗಳೆಂಬ ಭಕ್ತಿಗಳು ಸಾಧಕನಿಗೆ ಸಿದ್ಧಿಸುತ್ತವೆ.

ಈ ಭಕ್ತಿಗಳ ಸಹಾಯದಿಂದಲೇ ಇವನು ಭಕ್ತ, ಮಹೇಶ, ಪ್ರಸಾದ, ಪ್ರಾಣಲಿಂಗಿ, ಶರಣ – ಮತ್ತು ಐಕ್ಯಗಳೆಂಬ ಸ್ಥಲಗಳನ್ನು ಹೊಂದಿ ಕೊನೆಯದಾದ ಐಕ್ಯಸ್ಥಲದಲ್ಲಿ ಸಮರಸರೂಪವಾದ ಭಕ್ತಿಯ ಪ್ರಭಾವದಿಂದ ತನ್ನ ಸಂಕುಚಿತ ಶಕ್ತಿಗಳನ್ನೆಲ್ಲ ವಿಕಾಸಗೊಳಿಸಿಕೊಂಡು, ಆ ವಿಕಸಿತ ಶಕ್ತಿಯುಕ್ತನಾದ ಪರಶಿವನೊಂದಿಗೆ ಸಮರಸವಾಗುವುದೇ ಮುಕ್ತಿಯು. ಈ ಮಾರ್ಗವನ್ನು ಉಪದೇಶಿಸುವ ವೀರಶೈವ ಸಿದ್ಧಾಂತವನ್ನು "ಶಕ್ತಿ ವಿಶಿಷ್ಟಾದ್ವೈತ" ವೆಂದು ಕರೆಯುತ್ತಾರೆ.

## ವೀರಶೈವ ಧರ್ಮ ಸಂಸ್ಥಾಪಕರಾರು?

೧. ಶಿವ–ರುದ್ರರು ಮತಸಂಸ್ಥಾಪಕರಲ್ಲ :

ವೀರಶೈವ ಧರ್ಮದ ಮೂಲಗ್ರಂಥಗಳಾದ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳಲ್ಲಿ ಶಿವನು ಪಾರ್ವತಿಗೆ ಮತ್ತು ರುದ್ರನು ಬೃಹಸ್ಪತಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸಿರುವುದರಿಂದ, ಶಿವ–ರುದ್ರರನ್ನೇ ವೀರಶೈವ ಮತಸ್ಥಾಪಕರೆಂದು ಏಕೆ ಕರೆಯಬಾರದೆಂಬ ಪ್ರಶ್ನೆಯು ವಿಚಾರಶೀಲರ ಮನಸ್ಸಿನಲ್ಲಿ ಮೂಡಬಹುದು. ಆದರೆ ಅವರು ಉಪದೇಶಿಸಿದ್ದು ದೇವಲೋಕದಲ್ಲಿಯೇ ವಿನಹ ಭೂಲೋಕದಲ್ಲಲ್ಲ. ಆ ಉಪದೇಶವನ್ನೇ –

ಮದದ್ವೈತಪರಂ ಶಾಸ್ತ್ರ ವೇದವೇದಾಂತ ಸಮ್ಮತಂ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಂ ॥
ಮಮ ಪ್ರತಾಪಮತುಲಂ ಮದ್ಭಕ್ತಾಂಶ್ಚ ವಿಶೇಷತಃ ।
ಪ್ರಕಾಶಯ ಮಹೀಭಾಗೇ ವೇದಮಾರ್ಗಾನುಸಾರತಃ ॥

(ಸಿ.ಶಿ.೩/೭೦–೭೧)

"ಹೇ ರೇಣುಕನೇ ! ನನ್ನಿಂದ ಉಪದೇಶಿಸಲ್ಪಟ್ಟ ಶಿವಾದ್ವೈತ ಸಿದ್ಧಾಂತವು ಸರ್ವಸಮ್ಮತವಾಗಿದೆ. ಕಾರಣ ಈ ಸಿದ್ಧಾಂತವನ್ನೇ ಸರ್ವಮಾನವರ ಹಿತಕ್ಕಾಗಿ ಭೂಲೋಕದಲ್ಲಿ ಸಂಸ್ಥಾಪಿಸಿ, ಶಿವನಿಗಿಂತಲೂ ಶಿವಭಕ್ತರು ಅಧಿಕರೆಂಬುದನ್ನು ಜಗತ್ತಿಗೆ ತೋರಿಸಿಕೊಡು" ಎನ್ನುವ ಶಿವನ ಆದೇಶದಂತೆ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಈ ವೀರಶೈವ ಸಿದ್ಧಾಂತವನ್ನು ಭೂಲೋಕದಲ್ಲಿ ಪ್ರಪ್ರಥಮವಾಗಿ ಉಪದೇಶಿಸಿರುವುದರಿಂದ, ಈ ಪಂಚಾಚಾರ್ಯರೇ ವೀರಶೈವ ಮತ ಸಂಸ್ಥಾಪಕರೆಂಬುದನ್ನು ಎಲ್ಲರೂ ಒಪ್ಪಿಕೊಳ್ಳಲೇಬೇಕಾಗುತ್ತದೆ.

ಪಂಚಾಚಾರ್ಯರ ಈ ಪಂಚಪೀಠಗಳಿಗೆ ವೀರಮಹೇಶ್ವರ (ಜಂಗಮ) ವಂಶೋತ್ಪನ್ನರಾದ ಸುಶಿಕ್ಷಿತ ಬ್ರಹ್ಮಚಾರಿ ವಟುಗಳನ್ನೇ ಪೀಠಾಚಾರ್ಯರನ್ನಾಗಿ ಪಟ್ಟಾಭಿಷೇಕ ಮಾಡುತ್ತಾರೆ. ಈ ಪಂಚಾಚಾರ್ಯರೇ ವೀರಶೈವ ಧರ್ಮದ ಜಗದ್ಗುರುಗಳೆಂದು ಕರೆಯಲ್ಪಡುತ್ತಾರೆ. ಉಳಿದ ಮಠಾಧಿಪತಿಗಳು (ಪಟ್ಟಾಧಿಕಾರಿಗಳು) ಇವರ ಶಾಖಾಮಠಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಇವರ ಶಿಷ್ಯರಾಗಿರುತ್ತಾರೆ. ಇವರು ಶಿವಾಚಾರ್ಯರೆಂದು ಕರೆಯಲ್ಪಡುತ್ತಾರೆ.

ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗೋದ್ಭವ ಸಮೀಕ್ಷೆ

ಯದಾ ಯದಾ ಹಿ ಧರ್ಮಸ್ಯ ಹಾನಿರ್ಭವತಿ ಭೂತಲೇ ।
ತದಾ ತದಾವತಾರೋಽಯಂ ಗಣೇಶಾನಾಂ ಮಹೀತಲೇ ॥

(ಸ್ಕಂದ ಪುರಾಣ)

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥

(ಗೀತಾ)

ಮುಂತಾದ ಪ್ರಮಾಣ ವಚನಾನುಸಾರವಾಗಿ ಭೂಲೋಕದಲ್ಲಿ ಧರ್ಮದ ಅವನತಿಯಾದಾಗ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪರಿಪಾಲಿಸಿ ಧರ್ಮದ ತತ್ತ್ವಗಳನ್ನು ಉಪದೇಶಿಸುವುದಕ್ಕಾಗಿ ಪರಮಾತ್ಮನಾಗಲೀ ಅಥವಾ ಅವನ ಗಣರಾಗಲೀ ಅವತರಿಸಿ ಬರುತ್ತಾರೆಂಬುದು ಸಿದ್ಧವಾಗುತ್ತದೆ.

"ತೃ–ತರಣ ಪೋಷಣಯೋಃ" ಎಂಬ ಧಾತುವಿಗೆ "ಅವ" ಉಪಸರ್ಗ ಸಂಬಂಧವಾದಾಗ "ಅವತಾರ" ಎಂಬ ಶಬ್ದವು ಸಿದ್ಧವಾಗುತ್ತದೆ. "ಇಳಿದು ಬರು" ಎಂಬುದು ಇದರ ಸಾಮಾನ್ಯವಾದ ಅರ್ಥ. ನಿರ್ಗುಣ, ನಿರಾಕಾರನಾದ ಪರಮಾತ್ಮನಾಗಲೀ, ಪರಮಾತ್ಮನ ಗಣರಾಗಲೀ ಲೋಕ ಕಲ್ಯಾಣಾರ್ಥವಾಗಿ ಲೋಕ ವಿಲಕ್ಷಣಗಳಾದ ದಿವ್ಯದೇಹಗಳನ್ನು ಧರಿಸಿಕೊಂಡು ಬರುವುದನ್ನೇ ಅವತಾರವೆನ್ನುತ್ತಾರೆ.

"ತೃ–ತರಣ ಪೋಷಣಯೋಃ" ಎಂಬ ಧಾತುವಿನಿಂದ 'ಸಾಕ್ಷಾತ್ ಇಳಿ' ಅಥವಾ 'ಇಳಿದು ಬರು' ಎಂಬ ಅರ್ಥವು ಹೊರಡದ್ದರಿಂದ 'ಅವ' ಎಂಬ ಉಪಸರ್ಗವನ್ನು ಹಚ್ಚಿ

ಅವತಾರ ಎಂಬ ಶಬ್ದವನ್ನು ಮಾಡಲಾಗಿದೆ. ಉಪಸರ್ಗಗಳಿಂದ ಮೂಲಧಾತುವಿನ ಅರ್ಥಗಳು ಬದಲಾಗುತ್ತವೆ ಎಂಬುದು "ಉಪಸರ್ಗೇಣ ಧಾತ್ವರ್ಥೋ ಬಲಾದನ್ಯತ್ರನೀಯತೇ" ಎಂಬ ಸಂಸ್ಕೃತವ್ಯಾಕರಣದ ನಿಯಮದಿಂದ ಸಿದ್ಧವಾಗುತ್ತದೆ.

ಸಾಮಾನ್ಯವಾಗಿ ತನ್ನ ಸಾಧನೆ ಮತ್ತು ಗುರು – ಈಶ್ವರರ ಅನುಗ್ರಹದಿಂದ ಉನ್ನತ ಸ್ಥಾನವನ್ನು ತಲುಪಿದವನು ಕೆಳಗಿಳಿದು ಬರಲು ಅಪೇಕ್ಷಿಸುವುದಿಲ್ಲ ಎಂಬ ಮಾತು ಸತ್ಯವಾದದ್ದು. ಆದರೆ ಲೋಕವಿಲಕ್ಷಣವಾದ ಚಾರಿತ್ರ್ಯವುಳ್ಳವರು ಭಕ್ತೋದ್ಧಾರಕ್ಕಾಗಿ "ಸ್ವಯಂ ತೀರ್ತ್ವಾ ಪರಾನ್ ತಾರಯತಿ" ಎಂಬ ಪ್ರಮಾಣಾನುಸಾರವಾಗಿ ಅವಶ್ಯವಾಗಿ ಅವತರಿಸಿ ಬರುತ್ತಾರೆ.

ಲೋಕದಲ್ಲಿಯೂ ಅಂಗಳದಲ್ಲಿ ಆಡುವ ಮಗುವು ಎಡವಿ ಬಿದ್ದು ಅಳುತ್ತಿರುವಾಗ ಮಹಡಿಯ (ಮೇಲಂತಸ್ತಿನ) ಮೇಲೆ ಇರುವ ತಾಯಿಯು ಆ ಆರ್ತನಾದವನ್ನು ಕೇಳಿದೊಡನೆ ಕೆಳಗಿಳಿದು ಬಂದು ಮಗುವನ್ನು ಸಾಂತ್ವನಗೊಳಿಸುವುದನ್ನು ಪ್ರತ್ಯಕ್ಷವಾಗಿ ನೋಡುತ್ತೇವೆ. ಮೇಲಿರುವ ತಾಯಿಯು ಮಗುವಿನ ಆರ್ತನಾದವನ್ನು ಕೇಳಿಯೂ ಕೆಳಗಿಳಿದು ಬಾರದಿದ್ದರೆ ಆಕೆಯ ಮಾತೃತ್ವಕ್ಕೆ ಕುಂದುಬರುತ್ತದೆ. ಅದರಂತೆ ಭಕ್ತವತ್ಸಲನೂ, ಕರುಣಾಮಯನೂ ಆದ ಪರಮಾತ್ಮನಾಗಲಿ, ಅವನ ಗಣರಾಗಲಿ ಲೋಕದಲ್ಲಿ ದುಃಖಿತ ಜೀವಿಗಳ ಆರ್ತನಾದವನ್ನು ಕೇಳಿದಾಗ ಲೋಕೋದ್ಧಾರಕ್ಕಾಗಿ ಅವಶ್ಯವಾಗಿ ಅವತರಿಸಲೇಬೇಕಾಗುತ್ತದೆ. ಇಲ್ಲವಾದರೆ ಅವನ ಮಹತ್ವಕ್ಕೆ ಕಳಂಕ ಬಾರದೇ ಇರದು.

ಪರಿಪೂರ್ಣ ಸ್ವರೂಪನಾದ ಪರಮೇಶ್ವರನ ಹೃದಯದಲ್ಲಿ ತನ್ನ ಅಂಶಗಳಾದ ಜೀವಿಗಳ ಮೇಲೆ ಸಹಜ ಸ್ನೇಹವಿದೆ ಎಂಬುದಕ್ಕೆ ನಾಮರೂಪಾತ್ಮಕವಾಗಿರುವ ಜಗತ್ತಿನ ಭೋಗ್ಯ ಪದಾರ್ಥಗಳ ಸೃಷ್ಟಿಯೇ ಸಾಕ್ಷಿಯಾಗಿದೆ. ಇದೂ ಅಲ್ಲದೆ ಜನ್ಮಜನ್ಮಾಂತರಗಳ ಕರ್ಮವನ್ನು ಅನುಭವಿಸುತ್ತಿರುವ ಜೀವಿಗಳಿಗೆ ಸಹಾಯಕನಾಗಿ ಪರಮೇಶ್ವರನು ಅವರ ಸಮೀಪದಲ್ಲಿಯೇ ಇರುತ್ತಾನೆ ಎಂಬುದಕ್ಕೆ ಮಹಾಭಾರತ ಮುಂತಾದ ಉದ್ಗ್ರಂಥಗಳೇ ಸಾಕ್ಷಿಯಾಗಿವೆ. ಆದ್ದರಿಂದ ಅನನ್ಯ ಭಕ್ತರ ಆರ್ತನಾದವನ್ನು ಕೇಳಿ ದ್ರವೀಭೂತನಾದ ಪರಮೇಶ್ವರನು ಪರಮ ಕಾರುಣಿಕನೆಂಬ ತನ್ನ ಬಿರುದನ್ನು ಸಾರ್ಥಕಪಡಿಸಿಕೊಳ್ಳುವುದಕ್ಕಾಗಿ ತನ್ನ ದಿವ್ಯನಿವಾಸದಿಂದ ತಾನೂ ಬರುತ್ತಾನೆ ಹಾಗೂ ಗಣರನ್ನೂ ಕಳುಹಿಸಿಕೊಡುತ್ತಾನೆ ಎಂಬಲ್ಲಿ ಸಂದೇಹವೇನಿದೆ? ಅದಕ್ಕಾಗಿ ಅನಾದಿ ಕಾಲದಿಂದ ಪ್ರಸಿದ್ಧವಾದ ಈ ಅವತಾರ ಶಬ್ದವು ತನ್ನಲ್ಲಿ ನಿಕ್ಷಿಪ್ತವಾದ ಪರಮ ರಹಸ್ಯವನ್ನು ತಿಳಿಸುತ್ತಿದೆ ಎಂತಲೇ ಭಾವಿಸಬೇಕಾಗುತ್ತದೆ.

ಪರಮಾತ್ಮನಾಗಲಿ, ಪರಮಾತ್ಮನ ಗಣರಾಗಲಿ ಸರ್ವತಂತ್ರ ಸ್ವತಂತ್ರರಾಗಿರುವುದರಿಂದ ನಮ್ಮಂತೆ ಮಾತಾಪಿತೃಗಳ ಉದರದಿಂದಲೇ ಬರಬೇಕು ಎಂಬ ನಿರ್ಬಂಧತೆಗಳು ಅವರಿಗಿಲ್ಲ. ಅಂತೆಯೇ ಪ್ರಹ್ಲಾದನಿಗಾಗಿ ಶ್ರೀ ವಿಷ್ಣುವು ಕಂಬದಿಂದ ನೃಸಿಂಹನಾಗಿ ಅವತರಿಸಿದಂತೆ, ಮಾರ್ಕಂಡೇಯನಿಗಾಗಿ ಪರಮಾತ್ಮನು ಶಿವಲಿಂಗದಿಂದ ಪ್ರಾದುರ್ಭವಿಸಿದಂತೆ, ಶ್ರೀ ಜಗದ್ಗುರು ಪಂಚಾಚಾರ್ಯರು ಪರಮಾತ್ಮನ ಅಪ್ಪಣೆಯ ಮೇರೆಗೆ ಸೋಮೇಶ್ವರಾದಿ ಶಿವಲಿಂಗಗಳಿಂದ ಆವಿರ್ಭವಿಸಿದರು.

ಪೂಜ್ಯರು ಶಿವಲಿಂಗಗಳಿಂದ ಆವಿರ್ಭವಿಸಿದರು ಎಂಬ ಮಾತನ್ನು ಕೇಳಿದಾಗ ಬಹಳಷ್ಟು ಜನರಿಗೆ ಇದೊಂದು ಅಸಂಭವದ ಕಟ್ಟುಕಥೆಯಂತೆ ತೋರಬಹುದು. ಅದರಲ್ಲಿಯೂ ಕುತರ್ಕಿಗಳು ಕಲ್ಲು ಜಡವಾದ್ದರಿಂದ ಈ ಜಡವಸ್ತುವಿನಿಂದ ಚೇತನವ್ಯಕ್ತಿಯು ಉದ್ಭವಿಸುವುದೆಂತು? ಎಂಬುದಾಗಿ ತರ್ಕಿಸುವುದೂ ಉಂಟು. ಆದರೆ, ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವತಾರವು ಕಟ್ಟುಕಥೆಯಾಗಿರದೇ ವೈಜ್ಞಾನಿಕವೂ, ಲೋಕ ಹಾಗೂ ಶಾಸ್ತ್ರಸಮ್ಮತವೂ ಆಗಿದೆ.

ಇಂದು ನಾವು ಕಾಣುವ ಜೀವರಾಶಿಗಳಲ್ಲಿ ಉದ್ಭಿಜ, ಸ್ವೇದಜ, ಅಂಡಜ ಮತ್ತು ಜರಾಯುಜಗಳೆಂಬ ನಾಲ್ಕು ವಿಭಾಗಗಳಿರುತ್ತವೆ. ಭೂಮಿಯನ್ನು ಬಿರಿದು ಬರುವ ವನಸ್ಪತಿಗಳು ಉದ್ಭಿಜಗಳೆಂದೂ, ಬೆವರಿನಿಂದ ಜನಿಸುವ ಹೇನು, ಕೂರಿ ಮುಂತಾದವುಗಳು ಸ್ವೇದಜಗಳೆಂದೂ, ತತ್ತಿಯನ್ನು ಭೇದಿಸಿ ಬರುವ ಪಕ್ಷಿ–ಸರ್ಪಾದಿಗಳು ಅಂಡಜಗಳೆಂದೂ ಮತ್ತು ಮಾತೃ ಉದರದೊಳಗಿನ "ಜರಾಯು" ಎಂಬ ಚೀಲದಿಂದ ಜನಿಸುವ ಪಶು–ಮನುಷ್ಯಾದಿಗಳಿಗೆ ಜರಾಯುಜಗಳೆಂದೂ ಕರೆಯಲಾಗಿದೆ. ಇದಲ್ಲದೇ ಜಡಗಳಾದ ಕಲ್ಲುಗಳಿಂದ ಕಪ್ಪೆಗಳು ಮತ್ತು ಸಗಣಿಯಲ್ಲಿ ಚೇಳು ಮುಂತಾದ ಅನೇಕ ಕ್ರಿಮಿಗಳು ಪ್ರಾದುರ್ಭವಿಸುವುದನ್ನು ನಿತ್ಯಜೀವನದಲ್ಲಿ ಕಾಣುತ್ತೇವೆ. ಅದರಂತೆ ಚೇತನನಾದ ಮನುಷ್ಯನ ಶರೀರದಿಂದ ಜಡಗಳಾದ ಉಗುರು, ಕೂದಲುಗಳೂ ಜನಿಸುತ್ತವೆ. ಹೀಗೆ ಸಾಮಾನ್ಯವಾದ ಈ ಲೋಕಾನುಭವದಲ್ಲಿ ಜಡದಿಂದ ಚೇತನಗಳ ಮತ್ತು ಚೇತನದಿಂದ ಜಡಗಳ ಉತ್ಪತ್ತಿಯು ಸರ್ವಾನುಭವ ಸಿದ್ಧವಾದದ್ದು.

ಇನ್ನು ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ರೀತಿಯಿಂದ ಸೂಕ್ಷ್ಮವಾಗಿ ಪರ್ಯಾಲೋಚಿಸಿದಾಗ ಜಗತ್ತಿನ ಪ್ರತಿಯೊಂದು ವಸ್ತುವೂ ಚೇತನವೇ ಆಗಿದೆ. ಮೊದಲು ನಾವು ಗಿಡ–ಬಳ್ಳಿಗಳನ್ನು ಜಡವೆಂದು ಭಾವಿಸುತ್ತಿದ್ದೆವು. ಆದರೆ ಅವುಗಳೂ ಮನುಷ್ಯನಂತೆ ಉಸಿರಾಡುತ್ತವೆ ಎಂಬುದನ್ನು ವಿಜ್ಞಾನಿಗಳು ಗುರುತಿಸಿದರು. ವಿಜ್ಞಾನದ ವಿಕಾಸವಾದಂತೆ ಗಿಡಬಳ್ಳಿಗಳು ಶ್ವಾಸೋಚ್ಛ್ವಾಸವನ್ನು ಮಾಡುವುದಷ್ಟೆ ಅಲ್ಲ, ಮನುಷ್ಯನಂತೆ ಅವುಗಳಿಗೂ ಮನಸ್ಸಿದೆ. ಅವುಗಳಿಗೆ ನೋವು–ನಲಿವುಗಳ ಅರಿವಾಗುತ್ತದೆ ಎಂಬುದನ್ನೂ ಗುರುತಿಸಿದ್ದಾರೆ. ಇನ್ನೂ ಸ್ವಲ್ಪ ಮುಂದೆ ಹೋಗಿ ಹೇಳುವುದಾದರೆ ಮನುಷ್ಯನ ಮನಸ್ಸಿಗಿಂತಲೂ ಗಿಡ – ಬಳ್ಳಿಗಳ ಮನಸ್ಸು ಅತಿ ಕೋಮಲವಾಗಿದೆ. ಒಬ್ಬ ಮನುಷ್ಯನನ್ನು ಯಾರಾದರೂ ಹೊಡೆಯಲಿಕ್ಕೆ ಬಂದರೆ ಮಗ್ಗುಲಲ್ಲಿರುವ ಶತ್ರುಭಾವನೆಯವನು ನೋಡುತ್ತಾ ನಿಲ್ಲುತ್ತಾನೆ. ಆದರೆ ಅಡವಿಯಲ್ಲಿಯ ಯಾವುದೇ ಗಿಡವನ್ನು ಓರ್ವನು ಕೊಡಲಿಯಿಂದ ಕಡಿಯುತ್ತಿರುವಾಗ ಸುತ್ತಮುತ್ತಲಿನ ಎಲ್ಲ ಗಿಡಗಳೂ ಕಡಿಸಿಕೊಳ್ಳುವ ಗಿಡದಷ್ಟೇ ಸಮಾನವಾದ ನೋವನ್ನು ಅನುಭವಿಸುತ್ತವೆಂಬುದನ್ನು ಸೂಕ್ಷ್ಮವಾದ ವೈಜ್ಞಾನಿಕ ಪರೀಕ್ಷೆಯಿಂದ ಇಂದು ವಿಜ್ಞಾನಿಗಳು ತಿಳಿದುಕೊಂಡಿದ್ದಾರೆ. ಆದ್ದರಿಂದ ಗಿಡ – ಬಳ್ಳಿಗಳಿಗೆ ಇಂದು ಯಾರಾದರೂ ಜಡಪದಾರ್ಥಗಳು ಅಂದರೆ ಅವರನ್ನು ಅವೈಜ್ಞಾನಿಕರೆಂದೇ ಕರೆಯಬೇಕಾಗುವುದು. ತಮ್ಮ ನೋವು ನಲಿವುಗಳನ್ನು ತಪಸ್ವಿಗಳಂತೆ ಮೌನವಾಗಿ ಅನುಭವಿಸುತ್ತಿರುವ ಗಿಡ–ಬಳ್ಳಿಗಳಿಂದಲೂ ಮನುಷ್ಯನು ಬಹಳಷ್ಟು ಕಲಿಯಬೇಕಾಗಿದೆ.

ಗಿಡ–ಬಳ್ಳಿಗಳು ಚೇತನಗಳಾಗಿರಬಹುದು. ಆದರೆ ಕಲ್ಲು–ಮಣ್ಣುಗಳು ಜಡಗಳೇ ಎಂದು ಯಾರಾದರೂ ಹೇಳಿದರೆ ಅವರು ತಮ್ಮ ಅಜ್ಞಾನವನ್ನೇ ಪ್ರದರ್ಶಿಸಿದಂತಾಗುತ್ತದೆ. "ಸ್ವಪರಜ್ಞಪ್ತಿ ಶೂನ್ಯತ್ವಂ ಜಡತ್ವಮ್" ಅಂದರೆ "ತನ್ನ ಹಾಗೂ ಅನ್ಯದರ ಜ್ಞಾನವಿಲ್ಲದ್ದು ಜಡ" ಎಂಬುದಾಗಿ ಶಾಸ್ತ್ರಕಾರರು ಸ್ಥೂಲದೃಷ್ಟಿಯಿಂದ ಜಡದ ಪರಿಭಾಷೆಯನ್ನು ಮಾಡಿದ್ದಾರೆ. ಕಾಷ್ಠ ಮೌನವನ್ನಾಚರಿಸುವ ಒಬ್ಬ ದಿವ್ಯಯೋಗಿಯು ತನ್ನ ಹಾಗೂ ಅನ್ಯ ವಸ್ತುಗಳ ಅರಿವನ್ನು ತನ್ನ

ವಾಣಿಯಿಂದ ಅಭಿವ್ಯಕ್ತ ಮಾಡದೆ ಸುಮ್ಮನಿರುವುದನ್ನು ನೋಡಿ ಇವನು ಜಡಬುದ್ಧಿಯುಳ್ಳವನು ಎಂದು ಹೇಳುವುದು ಎಷ್ಟು ಅಪರಾಧವೆನಿಸುವುದೋ, ಕಲ್ಲು-ಮಣ್ಣುಗಳಿಗೆ ಜಡವೆನ್ನುವದಾದರೂ ಅಷ್ಟೇ ಅಪರಾಧವಾದುದ್ದು. ಅವುಗಳಿಗೆ ತನ್ನ ಹಾಗೂ ಅನ್ಯದರ ತಿಳುವಳಿಕೆ ಇಲ್ಲವೆನ್ನುವುದಕ್ಕೆ ಏನು ಪ್ರಮಾಣ ? ನಾವು ಎಷ್ಟೇ ಮಲಿನತೆಯನ್ನು ಅವುಗಳ ಮೇಲೆ ಮಾಡಿದಾಗ, ಅವುಗಳನ್ನು ಕಡಿದಾಗ, ಕತ್ತರಿಸಿದಾಗ ನಮಗೆ ಪ್ರತೀಕಾರ ಮಾಡದದ್ದರಿಂದ ಅವುಗಳನ್ನು ಜಡವೆನ್ನುವುದು ತಪ್ಪು. ಯಾಕೆಂದರೆ ಅದು ಅವುಗಳ ಸಹನಶೀಲತೆಯ ಪರಾಕಾಷ್ಠೆ ಅವಸ್ಥೆಯಾಗಿದೆ. ಅಂತೆಯೇ ಸರ್ವತ್ರ ಚೇತನವನ್ನು ಸಾಕ್ಷಾತ್ಕರಿಸಿಕೊಂಡ ಅನುಭವಿಗಳು "ಸರ್ವಂ ಖಲ್ವಿದಂ ಬ್ರಹ್ಮ", "ಯಾತ್ ಸಾಕ್ಷಾದಪರೋಕ್ಷಾದ್ಬ್ರಹ್ಮ" ಎಂಬುದಾಗಿ ಸರ್ವವನ್ನೂ ಚೇತನವನ್ನಾಗಿ ಹೇಳಿದ್ದಾರೆ.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು –

ಪತ್ರಶಾಖಾದಿ ರೂಪೇಣ ಯಥಾ ತಿಷ್ಠತಿ ಪಾದಪಃ ।
ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥
(ಸಿ.ಶಿ.೧೦ – ೬೬)

ಹೀಗೆ ಸಿದ್ಧಾಂತ ಶಿಖಾಮಣಿಯಲ್ಲಿ ಶಿವಜಗನ್ಮಯ ಸ್ಥಲದಲ್ಲಿ ಪೃಥಿವ್ಯಾದಿ ಪಂಚ ಮಹಾಭೂತಗಳನ್ನು ಪರಮಾತ್ಮನನ್ನಾಗಿಯೇ ಪ್ರತಿಪಾದಿಸಿದ್ದಾರೆ. ಶ್ರೀ ಮಹಾತ್ಮ ಬಸವೇಶ್ವರರಾದರೂ –

ಎತ್ತೆತ್ತ ನೋಡಿದಡತ್ತ ನೀನೇ ದೇವಾ !
ಸಕಲ ವಿಸ್ತಾರದ ರೂಹು ನೀನೇ ದೇವ !
ವಿಶ್ವತಶ್ಚಕ್ಷು ನೀನೇ ದೇವ !
ವಿಶ್ವತೋಮುಖ ನೀನೇ ದೇವ !
ವಿಶ್ವತೋಬಾಹು ನೀನೇ ದೇವ !
ವಿಶ್ವತೋಪಾದ ನೀನೇ ದೇವ ಕೂಡಲಸಂಗಮದೇವ !

ಈ ವಚನದಲ್ಲಿ ಸರ್ವತ್ರ ಚೇತನದ ಅಸ್ತಿತ್ವವನ್ನೇ ವ್ಯಕ್ತಪಡಿಸಿದ್ದಾರೆ. ಜಗತ್ತಿನ ಕಣಕಣಗಳಲ್ಲೂ ಅಡಗಿರುವ ಚೇತನಶಕ್ತಿಯನ್ನು ಅನುಭವಿಸದಿರುವ ವ್ಯಕ್ತಿಯೇ ಜಡನಲ್ಲದೆ, ಕಲ್ಲು-ಮಣ್ಣುಗಳು ಜಡಗಳಲ್ಲ. ಆದ್ದರಿಂದ "ಅತ್ಯಂತ ಗೂಢ ಚೈತನ್ಯಂ ಜಡಮವ್ಯಕ್ತಮುಚ್ಯತೇ" (ಸಿ.ಶಿ) ಅಂದರೆ ಅತ್ಯಂತ ಗೂಢವಾದ ಚೈತನ್ಯಕ್ಕೆ ಜನಗಳು 'ಜಡ'ವೆಂದು ಕರೆಯುತ್ತಾರೆ ಎಂಬುದಾಗಿ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಕಲ್ಲು-ಮಣ್ಣುಗಳಲ್ಲಿ ಗೂಢವಾದ ಚೈತನ್ಯದ ಅಸ್ತಿತ್ವವನ್ನು ಪ್ರತಿಪಾದಿಸಿದ್ದಾರೆ.

ಹೀಗೆ ವೈಜ್ಞಾನಿಕ ಹಾಗೂ ಆಧ್ಯಾತ್ಮಿಕ ಒರೆಗಲ್ಲಿಗೆ ಹಚ್ಚಿ ನೋಡಿದಾಗ ಜಗವಿದೆಲ್ಲವೂ ಜಂಗಮವೇ ಅರ್ಥಾತ್ ಚೇತನವೇ ಆಗಿದೆ.

ಶಿಲೆಗಳಲ್ಲಡಗಿದ ಈ ಸುಪ್ತಚೇತನದ ಮಹಿಮೆಯನ್ನು ಜಗತ್ತಿಗೆ ತಿಳಿಸುವುದಕ್ಕಾಗಿಯೇ–

ಮಾಘಕೃಷ್ಣಚತುರ್ದಶ್ಯಾಮಾದಿದೇವೋ ಮಹಾನಿಶಿ ।
ಶಿವಲಿಂಗತಯೋದ್ಭೂತಃ ಸೂರ್ಯಕೋಟಿಸಮಪ್ರಭಃ ॥

ಎಂಬ ಪ್ರಮಾಣ ವಚನಾನುಸಾರವಾಗಿ ಮಹಾಶಿವರಾತ್ರಿಯ ದಿವಸ ಜ್ಯೋತಿರ್ಲಿಂಗಗಳ ರೂಪದಲ್ಲಿ ಪರಶಿವನು ಭೂಲೋಕದಲ್ಲಿ ಅವತರಿಸಿದ್ದಾನೆ. ಇಂತಹ ಜ್ಯೋತಿರ್ಲಿಂಗಗಳಲ್ಲಿ ಶ್ರೀಜಗದ್ಗುರು ಪಂಚಾಚಾರ್ಯರು ಅವತರಿಸಿದರು.

ಭಾರತದ ಅದಾವ ವ್ಯಕ್ತಿಯು ಈ ಲಿಂಗಗಳಿಗೆ ಜಡವೆಂಬುದಾಗಿಯೂ, ಕಲ್ಲೆಂಬುದಾಗಿಯೂ ಧೈರ್ಯವಾದ ಮನೋಭಾವನೆಯಿಂದ ಪ್ರತಿಪಾದಿಸಬಲ್ಲನು? ಒಂದು ವೇಳೆ ಅಂಗಡಿ, ಮನೆಗಳನ್ನು ಕಟ್ಟುವ ಸಾಮಾನ್ಯ ಕಲ್ಲಿನಂತೆ ಇವು ಕೂಡ ಕಲ್ಲೇ ಆಗಿದ್ದರೆ ಅನಾದಿ ಕಾಲದಿಂದ ಇಂದಿನವರೆಗೆ ದೇಶವಿದೇಶಗಳಿಂದ ಲಕ್ಷಾಂತರ ತೀರ್ಥಯಾತ್ರಿಗಳು ಈ ಲಿಂಗಗಳ ದರ್ಶನಕ್ಕೆ ಅದೇಕೆ ಬರುತ್ತಿದ್ದರು? ಸಾಮಾನ್ಯವಾಗಿ ಮನುಷ್ಯನು ಸ್ವಾರ್ಥ ಪ್ರಾಣಿಯಾದ್ದರಿಂದ ತನ್ನ ಮನೋರಥ ಪೂರ್ಣವಾಗದಿದ್ದರೆ ಯಾವ ಪುಣ್ಯಕ್ಷೇತ್ರದ ಯಾತ್ರೆಯನ್ನೂ ಕೈಗೊಳ್ಳುವುದಿಲ್ಲ. ಆದ್ದರಿಂದ ಲಕ್ಷಲಕ್ಷ ಜನರು ಯಾವ ಶಿವಲಿಂಗವನ್ನು ಪೂಜಿಸಿ ತಮ್ಮ ಮನೋರಥವನ್ನು ಪೂರ್ತಿಮಾಡಿಕೊಳ್ಳುತ್ತಿದ್ದಾರೆಯೋ ಆ ಜಡವನ್ನು ಬರೀ ಕಲ್ಲೆಂದು ಹೇಳುವ ನಿಜವಾದ ನಾಸ್ತಿಕನು ಭಾರತದಲ್ಲೇ ಇಲ್ಲವೆಂದು ಹೇಳಬೇಕಾಗುತ್ತದೆ. ವಾದಕ್ಕೆ ಇಳಿದಾಗ ಕಲ್ಲೆಂದು ಸಾಧಿಸಿದ ಅದೆಷ್ಟೋ ಜನರು ಮನದಲ್ಲಿ ಭಯಪಟ್ಟು ದೇವರಲ್ಲಿ ಕ್ಷಮೆಯನ್ನು ಯಾಚಿಸದೆ ಇರಲಿಕ್ಕಿಲ್ಲ?

ಇಂದು ಭಾರತದ ಶ್ರೀಮಂತ ದೇವರೆಂದು ಪ್ರಸಿದ್ಧನಾದ ಶ್ರೀ ಬಾಲಾಜಿ ಮೂರ್ತಿಯು ಕಲ್ಲಿನಲ್ಲಿ ಆಗಿದೆ. ಒಂದು ವೇಳೆ ಅದು ಸಾಮಾನ್ಯವಾದ ಕಲ್ಲೇ ಆಗಿದ್ದರೆ ಅದರಲ್ಲಿ ಭಕ್ತರ ಮನೋರಥವನ್ನು ಪೂರ್ಣಮಾಡುವ ಸಾಮರ್ಥ್ಯವೆಲ್ಲಿಂದ ಬರುತ್ತಿತ್ತು?

ಆದ್ದರಿಂದ ಭಾರತದ ವಿಭಿನ್ನ ಸ್ಥಾನಗಳಲ್ಲಿ ವೈಭವದಿಂದ ಪೂಜೆಗೊಳ್ಳುವ ಶೈವ-ವೈಷ್ಣವ ಮೂರ್ತಿಗಳಾಗಲೀ, ಪ್ರತಿಯೊಂದು ಊರಿನಲ್ಲಿ ಸ್ಥಾಪಿತಗೊಂಡಿರುವ ದೇವತಾ ವಿಗ್ರಹಗಳಾಗಲೀ, ಗುರುವಿನ ಸಂಸ್ಕಾರದಿಂದ ಪ್ರಾಪ್ತವಾದ ವೀರಶೈವ ಇಷ್ಟಲಿಂಗವಾಗಲೀ ಸ್ಥೂಲನೋಟಕ್ಕೆ ಶಿಲೆಯಾಗಿ ಕಂಡರೂ ಅವುಗಳು ಶಿಲೆಗಳಲ್ಲ. ಅಂತೆಯೇ ಸರ್ವಜ್ಞ ಕವಿಯು –

ಗುರುವ ನರನೆಂದವಗೆ, ಹರನ ಶಿಲೆ ಎಂದವಗೆ
ಕರಣ ಪ್ರಸಾದವನು ಎಂಜಲೆಂದವಗೆ
ನರಕ ತಪ್ಪುವುದೆ ಸರ್ವಜ್ಞ?

ಈ ವಚನದಲ್ಲಿ ಸುಸಂಸ್ಕೃತ ಶಿಲಾಮಯ ಶಿವಲಿಂಗ ಮಹತಿಯನ್ನು ಕೊಂಡಾಡಿದ್ದಾನೆ. ವೀರ ವಿರಾಗಿಣಿಯಾದ ಅಕ್ಕಮಹಾದೇವಿಯು –

ಲಿಂಗದಿಂದುದಯಿಸಿ ಅಂಗವಿಡಿದಿಪ್ಪ ಪುರಾತನರ
ಇಂಗಿತವನೇನೆಂದು ಬೆಸಗೊಂಬಿರಯ್ಯ?
ಅವರ ನಡೆಯೇ ಆಗಮ, ಅವರ ನುಡಿಯೇ ವೇದ,
ಅವರನು ಲೋಕದ ಮಾನವರೆಂದೆನ್ನಬಹುದೆ?
ಅದೆಂತೆಂದೊಡೆ –
ವೃಕ್ಷಾದ್ಭವಂತಿ ಬೀಜಾನಿ ತದ್ವೃಕ್ಷೇಲೀಯತೇ ಪುನಃ ।
ರುದ್ರಲೋಕಂ ಪರಿತ್ಯಜ್ಯ ಶಿವಲೋಕೇ ಭವಿಷ್ಯತಿ ॥

ಎಂಬುದಾಗಿ ಅಂಕೋಲೆಯ ಬೀಜದಿಂದಾಯ್ತು ವೃಕ್ಷವು
ಆ ವೃಕ್ಷವು ಮರಳಿ ಬೀಜದೊಳಡಗಿತ್ತು ಆ ಪ್ರಕಾರದಿಂ
ಲಿಂಗದೊಳಗಿದ್ದ ಪುರಾತನರು ಆ ಲಿಂಗದೊಳಗೆ
ಬೆರೆಸಿದರು ನೋಡಿರಯ್ಯ
ಇಂತಪ್ಪ ಪುರಾತನರಿಗೆ ನಾನು ಶರಣೆಂದು
ಹುಟ್ಟುಗೆಟ್ಟೆನಯ್ಯ ಚನ್ನಮಲ್ಲಿಕಾರ್ಜುನಾ।

ಎಂಬ ಈ ವಚನದಲ್ಲಿ ಪುರಾತನರಾದ ಶ್ರೀ ಜಗದ್ಗುರು ಪಂಚಾಚಾರ್ಯರು ಲಿಂಗೋದ್ಭವರಾಗಿ ಉದಿಸಿ, ಪುನಃ ಲಿಂಗದೊಳಗೆ ಅಡಗಿದ ವಿಷಯವನ್ನು ಅಂಕೋಲೆಯ ಬೀಜ–ವೃಕ್ಷದ ದೃಷ್ಟಾಂತದಿಂದ ತಿಳಿಸಲು ಪ್ರಯತ್ನಪಟ್ಟಿದ್ದಾಳೆ. ಅಂದರೆ ಬೀಜದಿಂದ ವೃಕ್ಷವು ಜನಿಸಿ ಪುನಃ ಆ ವೃಕ್ಷವು ಬೀಜದಲ್ಲಿಯೇ ಅಡಗುವಂತೆ ಆಚಾರ್ಯರು ಪರಮಾತ್ಮನ ಸ್ವರೂಪಗಳೇ ಆದ ಲಿಂಗಗಳಿಂದ ಉದಯಿಸಿ ಪುನಃ ಆ ಲಿಂಗಗಳಲ್ಲಿಯೇ ಅಡಗಿದ್ದಾರೆ ಎಂಬ ಮರ್ಮವನ್ನು ತಿಳಿಸಿ ಅವರು ನಡೆದದ್ದೇ ಆಗಮ, ಅವರು ನುಡಿದದ್ದೇ ವೇದವೆಂದು ಅವರ ಮಹಿಮೆಯನ್ನು ಕೊಂಡಾಡಿ, ಅಂತಹ ಪೂಜ್ಯರಿಗೆ ಶರಣಾಗಿ ನನ್ನ ಭವವನ್ನು ಕಳೆದುಕೊಂಡಿದ್ದೇನೆಂದು, ಅವರಿಗೆ ಶರಣಾಗುವುದರಿಂದ ಉಂಟಾದ ತನ್ನ ಜೀವನದ ಸಾಫಲ್ಯವನ್ನೂ ಹೇಳಿಕೊಂಡಿದ್ದಾಳೆ. ಇದೇ ಪ್ರಕಾರ ಅನಾದಿ ತೋಂಟದ ಸಿದ್ಧಲಿಂಗೇಶ್ವರರು–

"ಆದಿಯಲ್ಲಿ ಶಿವತತ್ತ್ವದಲ್ಲಿ ರೇಣುಕನುದಯವಾಗಿದ್ದರೆ
ಇಲ್ಲಿ ಶಿವಲಿಂಗದಲ್ಲಿ ಉದಯವಾದ ಪರಿಯೆಂತೊ?
ಆ ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ
ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ
ಅವಾಂತರ ಮುಕ್ತನೆಂಬ ಅಜ್ಞಾನಿಗಳಿಗೆ
ನಾಯಕ ನರಕ ತಪ್ಪದು" (ಷ.ಜ್ಞಾ.ಸಾ)

ಈ ತಮ್ಮ ವಚನದಲ್ಲಿಯೂ ಆಚಾರ್ಯರ ಲಿಂಗೋದ್ಭವವನ್ನು ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ.

ಇದೂ ಅಲ್ಲದೆ "ಸುಪ್ರಭೇದಾಗಮ", "ಸ್ವಯಂಭುವಾಗಮ", "ವೀರಲೈಂಗೋಪನಿಷತ್" ಮುಂತಾದ ಆಗಮೋಪನಿಷತ್ತುಗಳಲ್ಲಿಯೂ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗೋದ್ಭವತ್ವವು ಪ್ರತಿಪಾದಿಸಲ್ಪಟ್ಟಿರುವುದರಿಂದ ಈ ವಿಷಯವು ಕೇವಲ ಕಾಲ್ಪನಿಕವಾಗಿರದೇ ಶಾಸ್ತ್ರೀಯವೂ, ವೈಜ್ಞಾನಿಕವೂ ಮತ್ತು ಯೌಗಿಕವೂ ಆಗಿದೆ.

ಸಾಮಾನ್ಯ ಜನರಿಗೆ ಅಸಾಧ್ಯವಾಗಿ ತೋರಿದ ಮಾತ್ರದಿಂದ ಅದನ್ನು ಸಂಪೂರ್ಣವಾಗಿ ಅಪಲಾಪ ಮಾಡುವುದು ಸರಿಯಲ್ಲ. ಯಾನೇಗುಂದಿಯ ಮಾಣಿಕಮ್ಮನವರು ಅನ್ನ–ನೀರುಗಳಿಲ್ಲದೆ ಅನೇಕ ದಿನಗಳಿಂದ ಜೀವಿಸುತ್ತಿರುವುದನ್ನು ಇಂದು ನಾವೆಲ್ಲ ನೋಡುತ್ತಿದ್ದೇವೆ. ಉತ್ತರ ಭಾರತದ ಅನೇಕ ಭಾಗಗಳಲ್ಲಿ ಕೆಲವು ಜನ ಸನ್ಯಾಸಿಗಳು ಭೂಮಿಯಲ್ಲಿ ತಗ್ಗು ತೋಡಿಸಿ ಒಳಗೆ ತಾವು ಕುಳಿತು, ಮೇಲೆ ಮಣ್ಣು ಮುಚ್ಚಿಸಿ ಒಂದು ಸಪ್ತಾಹ, ಒಂದು ಪಕ್ಷ, ಮಾಸ ಪರ್ಯಂತವಾಗಿ ಒಳಗೇ ಇದ್ದು ನಂತರ ನಿರ್ದಿಷ್ಟಪಡಿಸಿದ ದಿನದಂದು ಮಣ್ಣು ತೆಗೆದಾಗ ಅವರು ಪುನಃ ಮೊದಲಿನಂತೆಯೇ ಜೀವಿತ ವ್ಯವಹಾರವನ್ನು ಮಾಡುತ್ತಿದ್ದಾರೆ. ಈ ರೀತಿಯಾಗಿ ಎಲ್ಲರಿಗೂ ಬದುಕಲು ಬರುವುದಿಲ್ಲವೆಂದ ಮಾತ್ರಕ್ಕೆ ಅವುಗಳನ್ನು ಹೇಗೆ ಅಲ್ಲಗಳೆಯಲು ಬರುವುದಿಲ್ಲವೋ ಅದರಂತೆ ಶ್ರೀ ಜಗದ್ಗುರು ಪಂಚಾಚಾರ್ಯರ ಲಿಂಗಾವತಾರ ಲೀಲೆಯನ್ನು ಅಲ್ಲಗಳೆಯುವುದು ಅಸಂಬದ್ಧವೆನಿಸುವುದು.

"ತತೋಣಿಮಾದಿ ಪ್ರಾದುರ್ಭಾವಃ ಕಾಯಸಂಪತ್ ತದ್ಧರ್ಮಾನಭಿಘಾತಶ್ಚ" (ಯೋ.ಸೂ.೩/೪೫) ಎಂಬ ಪತಂಜಲಿ ಮಹರ್ಷಿಗಳ ಯೋಗಸೂತ್ರದಲ್ಲಿ ಹಾಗೂ ಅದರ "ಯಥಾ ಪರಮಾಣುತ್ವಂ ಪ್ರಾಪ್ತೋ ವಜ್ರಾದೀನಾಮಪ್ಯಂತಃ ಪ್ರವಿಶತಿ" ಈ ಭೋಜವೃತ್ತಿಯಲ್ಲಿ "ಯೋಗಸಿದ್ಧಿಯಿಂದ ಪಂಚಮಹಾಭೂತಗಳನ್ನು ವಶಪಡಿಸಿಕೊಂಡ ಯೋಗಿಗೆ ಅಣಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ ಮತ್ತು ವಶತ್ವಗಳೆಂಬ ಅಷ್ಟಸಿದ್ಧಿಗಳು ಲಭಿಸುತ್ತವೆ. ಈ ಯೋಗಸಿದ್ಧನು ಪರಮಾಣುವಿನಂತೆ ಸೂಕ್ಷ್ಮಾಕಾರವನ್ನಾಗಲೀ, ಆಕಾಶದಂತೆ ವಿಭುರೂಪವನ್ನಾಗಲೀ, ಅರಳಿಯಂತೆ ಲಘುರೂಪವನ್ನಾಗಲೀ ಮತ್ತು ಪರ್ವತದಂತೆ ಬೃಹದ್ರೂಪವನ್ನಾಗಲೀ ಹೊಂದಬಲ್ಲನು. ಈ ಯೋಗಿಯು ಯಾವ ಯಾವ ಸಂಕಲ್ಪವನ್ನು ಮಾಡುವನೋ ಅದೆಲ್ಲವೂ ಸುಲಭವಾಗಿ ಈಡೇರುವುದು. ಸಕಲ ಪ್ರಾಣಿಗಳೂ ಅವನಿಗೆ ವಶವಾಗುವವು. ಸ್ವೇಚ್ಛಾಸಂಕಲ್ಪದಿಂದ ಶರೀರವನ್ನು ಧರಿಸಿದ ಯೋಗಿಯು ಸರ್ವಸ್ವತಂತ್ರನಾಗಿ ಪರಮಾಣುವಿನಂತೆ ಸೂಕ್ಷ್ಮಾಕಾರವನ್ನು ಹೊಂದಿ ಅತ್ಯಂತ ಕಠಿಣವಾದ ವಜ್ರಾದಿಗಳೊಳಗೆ ಪ್ರವೇಶಿಸಬಲ್ಲನು ಎಂಬುದಾಗಿ ಪ್ರತಿಪಾದಿಸಲ್ಪಟ್ಟಿದೆ.

ಯೋಗದ ಸಾಮರ್ಥ್ಯದಿಂದ ಶ್ರೀಸಾಮಾನ್ಯರಿಗೆ ಅಸಾಧ್ಯವಾಗಿ ತೋರುವ ಕಾರ್ಯಗಳು ಯೋಗಿಗಳಿಗೆ ಸಹಜವಾಗಿ ನೆರವೇರುತ್ತವೆ. ಕಾಶಿಯಲ್ಲಿ "ವಿಶುದ್ಧಾನಂದ"ರೆಂಬ ಯೋಗಿಗಳು ಇದೇ ೨೦ನೇ ಶತಮಾನದಲ್ಲಿ ಆಗಿಹೋಗಿದ್ದಾರೆ. ಇವರು ಅಸಾಧಾರಣ ಯೋಗಸಾಮರ್ಥ್ಯವನ್ನು ಹೊಂದಿದವರಾಗಿದ್ದರು. ಕಾಶಿಯ ಮೂರ್ಧನ್ಯ ವಿದ್ವಾಂಸರಾದ ಮಹಾಮಹೋಪಾಧ್ಯಾಯ ಗೋಪೀನಾಥ ಕವಿರಾಜರು ಶ್ರೀ ವಿರುದ್ಧಾನಂದರ ಪರಮ ಶಿಷ್ಯರಾಗಿದ್ದರು. ಗೋಪೀನಾಥ ಕವಿರಾಜರು ಗುರುಗಳ ದರ್ಶನಕ್ಕೆ ಹೋದಾಗ ವಿಶುದ್ಧಾನಂದರು "ಜಾತ್ಯಂತರ ಪರಿಣಾಮ" ಅಂದರೆ ಯೋಗ ಸಾಮರ್ಥ್ಯದಿಂದ ಒಂದು ಜಾತಿಯ ವಸ್ತುವನ್ನು ಬೇರೊಂದು ಜಾತಿಗೆ ಪರಿವರ್ತಿಸಬಹುದು ಎಂಬ ಯೋಗಶಾಸ್ತ್ರದ ಮಹಿಮೆಯ ಬಗ್ಗೆ ಉಪನ್ಯಾಸ ಮಾಡುತ್ತಿದ್ದರು. ಆಗ ತಾರ್ಕಿಕ ಬುದ್ಧಿಯ ಗೋಪೀನಾಥ ಕವಿರಾಜರು, ಅದು ಹೇಗೆ ಸಾಧ್ಯ? ಎಂಬುದಾಗಿ ಪ್ರಶ್ನೆ ಮಾಡಲು, ಶ್ರೀ ವಿಶುದ್ಧಾನಂದರು ತಮ್ಮ ಕೈಯಲ್ಲಿಯ "ಗುಲಾಬಿ" ಹೂವನ್ನು ತಕ್ಷಣವೇ ಗೋಪೀನಾಥರ ಅಪೇಕ್ಷೆಯಂತೆ "ಕೆಂಪು ದಾಸವಾಳ" ಹೂವನ್ನಾಗಿ ಪರಿವರ್ತಿಸಿ ತೋರಿಸಿದರಂತೆ. ಈ ವಿಷಯವನ್ನು ಶ್ರೀ ಗೋಪೀನಾಥ ಕವಿರಾಜರು ಗೋರಖಪುರದಿಂದ ಹೊರಡುವ ಕಲ್ಯಾಣ ಮಾಸಪತ್ರಿಕೆಯ "ಯೋಗಾಂತ"ದ ೭೪೮ನೇ ಪುಟದಲ್ಲಿ "ಸೂರ್ಯವಿಜ್ಞಾನ" ಎಂಬ ತಮ್ಮ ಲೇಖನದಲ್ಲಿ ಪ್ರಕಟಪಡಿಸಿದ್ದಾರೆ.

ಇದೂ ಅಲ್ಲದೆ ಕಾಶಿಯಲ್ಲಿ ತೈಲಂಗ ಸ್ವಾಮಿಗಳೆಂಬ ಮಹಾಯೋಗಿಗಳು ಆಗಿಹೋಗಿದ್ದಾರೆ. ಅವರು ಕ್ರಿ.ಶ. ೧೬೦೭ರಲ್ಲಿ ಜನಿಸಿ, ೧೮೮೭ರಲ್ಲಿ ಬ್ರಹ್ಮಲೀನರಾಗಿದ್ದಾರೆ. ಇವರು ಆಂಧ್ರಪ್ರದೇಶದವರು. ತಮ್ಮ ತಾಯಿಯ ಶ್ರಾದ್ಧ ಮಾಡಲು ಕಾಶಿಗೆ ಬಂದ ಇವರು ವೈರಾಗ್ಯದ ಆವೇಶದಲ್ಲಿ ಪುನಃ ಊರಿಗೆ ಹೋಗದೆ ಕಾಶಿಯಲ್ಲಿಯೇ ಉಳಿದು ಮೌನದಿಂದ

ಯೋಗಸಾಧನೆಯನ್ನು ಪ್ರಾರಂಭಿಸಿದರು. ಇವರು ಆಂಧ್ರಪ್ರದೇಶದವರಾದ್ದರಿಂದ ಇವರಿಗೆ ತೈಲಂಗ ಸ್ವಾಮಿ ಎಂದು ಜನರು ಕರೆಯತೊಡಗಿದರು. ಬಾಲಬ್ರಹ್ಮಚಾರಿಗಳಾದ ಇವರು ದಿಗಂಬರರಾಗಿಯೇ ಇರುತ್ತಿದ್ದರು. ಇವರ ಜೀವನದಲ್ಲಿ ಅನೇಕ ಚಮತ್ಕಾರಿಕ ಘಟನೆಗಳು ನಡೆದುಹೋಗಿವೆ. ಇವರು ದಿಗಂಬರರಾಗಿ ತಿರುಗುವುದನ್ನು ನೋಡಿ ಒಬ್ಬ ಬ್ರಿಟಿಷ್ ಅಧಿಕಾರಿಯು ಇವರನ್ನು ಜೈಲಿನಲ್ಲಿ ಹಾಕಿ ಬೀಗ ಹಾಕಿಸಿದನಂತೆ. ಪ್ರಾತಃಕಾಲ ನೋಡಿದರೆ ಜೈಲಿಗೆ ಬೀಗ ಹಾಕಿದಂತೆಯೇ ಇದೆ. ಆದರೆ ಸ್ವಾಮಿಗಳು ಆ ಜೈಲಿನ ಮುಂಭಾಗದಲ್ಲಿ ದಿಗಂಬರರಾಗಿಯೇ ತಿರುಗುತ್ತಿದ್ದಾರೆ. ಆಗ ಆಂಗ್ಲ ಅಧಿಕಾರಿಯು, ನೀನು ಹೊರಗೆ ಹೇಗೆ ಬಂದೆ? ಎಂದು ಆಶ್ಚರ್ಯಚಕಿತನಾಗಿ ಕೇಳಲು ಕೋಣೆಯಲ್ಲಿ ಹಾಕಿ ಬೀಗ ಹಾಕಿದ ಮಾತ್ರಕ್ಕೆ ಆ ಜೀವಿಯನ್ನು ಬಂಧಿಸಿದಂತಾಗುವುದಿಲ್ಲ. ಹಾಗಾದರೆ ಮನೆಯಲ್ಲಿ ಭದ್ರವಾಗಿ ಬಾಗಿಲು ಮುಚ್ಚಿಕೊಂಡು ಕುಳಿತ ಮಾತ್ರದಿಂದ ಮನುಷ್ಯನು ಮೃತ್ಯುವಿನ ದವಡೆಯಿಂದ ತಪ್ಪಿಸಿಕೊಳ್ಳಬಹುದಾಗಿತ್ತು ಎಂಬುದಾಗಿ ಉತ್ತರ ಕೊಟ್ಟರಂತೆ. ಆಗ ಇವರ ಮಹಿಮೆಯನ್ನರಿತ ಅಧಿಕಾರಿಯು ಇವರಿಗೆ ಯಾವ ತೊಂದರೆಯನ್ನೂ ಮಾಡದೆ ಅವರು ಇಚ್ಛೆಬಂದಂತೆ ಇರಲು ಸಮ್ಮತಿಸಿದನೆಂಬ ವಿಷಯವನ್ನು ಕಾಶಿಯ ಸುಪ್ರಸಿದ್ಧ ಹಿಂದೂ ದಿನಪತ್ರಿಕೆಯಾದ "ಆಜ್"ದಲ್ಲಿ ದಿನಾಂಕ ೨೮-೧-೯೮೪ರಲ್ಲಿ ಶ್ರೀ ರಾಜೇಂದ್ರ ಪ್ರಸಾದ ಪಾಂಡೇಯ ಎಂಬುವವರು ಪ್ರಕಟಪಡಿಸಿದ್ದಾರೆ. ಇದೇ ವಿಷಯವನ್ನು ಇನ್ನೂ ಅನೇಕ ಮಹನೀಯರು ಪ್ರಸಂಗಾನುಸಾರವಾಗಿ ಉಲ್ಲೇಖ ಮಾಡಿದ್ದಾರೆ. ಇಂದಿಗೆ ಒಂದು ನೂರು ವರ್ಷದ ಹಿಂದೆ ಸುಮಾರು ೨೮೦ ವರ್ಷಗಳ ವರೆಗೆ ಬದುಕಿ ಅನಂತ ಲೀಲೆಗಳನ್ನು ಮಾಡಿದ ಇವರ ಸಮಾಧಿಯು ಕಾಶಿಯ ಪಂಚಗಂಗಾ ಘಾಟಿನಲ್ಲಿ ಇದೆ. ಕಾಶಿಯಲ್ಲಿ ಇವರ ಬಗ್ಗೆ ಸರ್ವರಲ್ಲಿಯೂ ಪೂಜ್ಯ ಭಾವನೆಯಿದೆ.

ಇದೂ ಅಲ್ಲದೆ ಮೊನ್ನೆ ಮೊನ್ನೆ ಲಿಂಗೈಕ್ಯರಾದ ಅಲ್ಲಿಪುರ ತಾತನವರು ಸುಮಾರು ಎರಡು ನೂರು ವರ್ಷಕ್ಕೂ ಮೀರಿ ಆಯುಷ್ಯವಂತರಾಗಿ ಜನಸಾಮಾನ್ಯರ ಬಯಕೆಗಳನ್ನು ಪೂರ್ಣ ಮಾಡುತ್ತಿದ್ದರೆಂಬ ವಿಷಯವು ಬಳ್ಳಾರಿ ಜಿಲ್ಲೆಯಲ್ಲಿ ಪ್ರಖ್ಯಾತವಿದೆ. ಪೂಜ್ಯ ಅಲ್ಲಿಪುರ ತಾತನವರು ಮೈಸೂರು ಜಿಲ್ಲಾ ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ ಸಮೀಪದ (೪ಕಿ.ಮೀ.) ಪವಿತ್ರ ನದಿಗಳ ಸಂಗಮ ಸ್ಥಳದಲ್ಲಿ ಆಶ್ರಮವನ್ನು ನಿರ್ಮಿಸಿಕೊಂಡು ವಾಸವಾಗಿದ್ದರು. ಅದೇ ಸ್ಥಳದಲ್ಲಿ ಲಿಂಗೈಕ್ಯರಾದರು.

ಯೋಗವನ್ನು ಸಾಧಿಸಿ ಸಿದ್ಧಿಯನ್ನು ಸಂಪಾದಿಸಿಕೊಂಡ ಪರಶಿವನ ಅಪರಾವತಾರಿಗಳೂ ಆದ ಶ್ರೀ ಜಗದ್ಗುರು ಪಂಚಾಚಾರ್ಯರು ಲಿಂಗೋದ್ಭವರಾಗಿರುವುದು ಅಸಂಭವ ಘಟನೆಯೇನಲ್ಲ. ವಿಜ್ಞಾನಯುಗವಾದ ಇಂದು ಪ್ರಣಾಳಿಕಾ ಶಿಶುಗಳು ತಯಾರಾಗುತ್ತಲಿವೆ. ಇದು ಆಶ್ಚರ್ಯಕರವಾದರೂ ಅಸಂಭವವಾದದ್ದಲ್ಲವೆಂಬುದನ್ನು ವಿಜ್ಞಾನ ಸಾಧಿಸಿ ತೋರಿಸುತ್ತಿದೆ. ಅವರಂತೆ ಶ್ರೀ ಜಗದ್ಗುರು ಪಂಚಾಚಾರ್ಯರು ಲಿಂಗೋದ್ಭವರಾದದ್ದು ಇಂದು ಆಶ್ಚರ್ಯವಾಗಿ ತೋರಿದರೂ ಅಂದು ಅವರಿಗೆ ಅಸಂಭವದ ಮಾತಾಗಿರಲಿಲ್ಲ.

ನಮ್ಮ ದೇಶದ ಯೋಗ-ತಂತ್ರ-ಜ್ಯೋತಿಷ್ಯ ಮುಂತಾದ ರಹಸ್ಯ ವಿದ್ಯೆಗಳು ಇಂದು ಗುಪ್ತವಾಗುತ್ತಾ ನಡೆದಿರುವುದರಿಂದ ಪಾಮರರಾದ ಜನಸಾಮಾನ್ಯರಿಗೆ ಮಹಾಪುರುಷರ ದಿವ್ಯಚರಿತ್ರೆಗಳನ್ನು ತಿಳಿದುಕೊಳ್ಳುವುದು ಕಷ್ಟಸಾಧ್ಯವಾಗಿದೆ. ಅಂತೆಯೇ "ಲೋಕೋತ್ತರಾಣಾಂ ಚರಿತಂ ಕೋ ಹಿ ವಿಜ್ಞಾತುಮರ್ಹತಿ" ಎಂದಿದ್ದಾರೆ ಅನುಭವಿಕರು.

ಚತುರ್ಯುಗಗಳಲ್ಲಿ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಭಿನ್ನಭಿನ್ನ ಹೆಸರುಗಳಿಂದ ಸೋಮೇಶ್ವರಾದಿ ಶಿವಲಿಂಗಗಳಿಂದ ಅವತರಿಸಿ ಭೂಲೋಕದಲ್ಲಿ ವೀರಶೈವ ಮತವನ್ನು ಸಂಸ್ಥಾಪಿಸಿದರೆಂದು ಶಿವಾಗಮಗಳು ಪ್ರತಿಪಾದಿಸಿರುವುದರಿಂದ, ಇಂದಿಗೂ ಪ್ರತಿಯೊಂದು ಶುಭಕಾರ್ಯದಲ್ಲಿ ಪಂಚಾಚಾರ್ಯರ ಪ್ರತೀಕವಾಗಿ ಪಂಚಕಲಶಗಳನ್ನು ಸ್ಥಾಪಿಸಿ ಅವುಗಳಲ್ಲಿ ಪಂಚಾಚಾರ್ಯರನ್ನು ಆಹ್ವಾನಿಸಿ ಪೂಜಿಸುತ್ತಿರುವುದು ಶಾಸ್ತ್ರಸಮ್ಮತವಾದದ್ದೆಂದು ಸಕಲರೂ ಅಭಿಪ್ರಾಯ ತಾಳಿದ್ದಾರೆ.

ವೀರಶೈವ ಧರ್ಮ ಪ್ರಚಾರಕರು ಶ್ರೀ ಬಸವೇಶ್ವರರು

ಐತಿಹಾಸಿಕ ಪ್ರಜ್ಞಾಶೂನ್ಯರೂ ಪಕ್ಷಪಾತಿಗಳೂ ಆದ ಕೆಲಜನರು ಕ್ರಿ.ಶ.೧೨ನೇ ಶತಮಾನದಲ್ಲಿ ಬಿಜ್ಜಳ ಮಹಾರಾಜನ ಪ್ರಧಾನ ಮಂತ್ರಿಯಾಗಿದ್ದ ಶ್ರೀ ಬಸವೇಶ್ವರರೇ ವೀರಶೈವ ಮತವನ್ನು ಸಂಸ್ಥಾಪಿಸಿದ್ದಾರೆಂಬ ದುರ್ವಾದವನ್ನು ಮಾಡುತ್ತಿರುತ್ತಾರೆ. ಇವರ ಈ ವಾದವು ಮುಗ್ಧಜನರನ್ನು ಮೋಸಗೊಳಿಸುವುದಾಗಿದೆ.

ಬಿಜಾಪುರ ಜಿಲ್ಲೆಯ ಬಾಗೇವಾಡಿ ನಿವಾಸಿಗಳಾದ ಮಾದರಸ ಮತ್ತು ಮಾದಲಾಂಬಿಕೆ ಎಂಬ ಹೆಸರಿನ ಬ್ರಾಹ್ಮಣ ದಂಪತಿಗಳ ಉದರದಲ್ಲಿ ಶ್ರೀ ಬಸವೇಶ್ವರರ ಜನ್ಮವಾಯಿತು. ಬಾಲಕನು ಎಂಟು ವರ್ಷದವನಾದಾಗ ತಂದೆ-ತಾಯಿಗಳು ಬ್ರಾಹ್ಮಣ ಧರ್ಮೋಚಿತವಾದ ಉಪನಯನ ಸಂಸ್ಕಾರವನ್ನು ಮಾಡಲುದ್ಯುಕ್ತರಾದಾಗ ಬಾಲಕ ಬಸವೇಶ್ವರನು ಅದನ್ನು ತಿರಸ್ಕರಿಸಿ ಕೂಡಲ ಸಂಗಮ ಕ್ಷೇತ್ರಕ್ಕೆ ಬಂದು ಆ ಕ್ಷೇತ್ರದ ಪ್ರಸಿದ್ಧ ವೀರಶೈವ ಆಚಾರ್ಯರಾದ ಸಾರಂಗ ಹಿರೇಮಠದ ಶ್ರೀ ಜಾತವೇದಮುನಿ ಶಿವಾಚಾರ್ಯರಿಂದ ವೀರಶೈವ ಧರ್ಮೋಚಿತ ಇಷ್ಟಲಿಂಗ ದೀಕ್ಷೆಯನ್ನು ಪಡೆದನೆಂಬ ಇತಿಹಾಸವಿದೆ. ಇದರಿಂದ ಶ್ರೀ ಬಸವೇಶ್ವರರಿಗಿಂತಲೂ ಪೂರ್ವದಲ್ಲಿಯೇ ವೀರಶೈವ ಧರ್ಮ ಹಾಗೂ ಅದರ ಆಚಾರ್ಯರು (ಗುರುಗಳು) ಇದ್ದರೆಂಬುದು ಸ್ಪಷ್ಟವಾಗುತ್ತದೆ.

ಆದರೆ ವೀರಶೈವ ಧರ್ಮದಲ್ಲಿ ದೀಕ್ಷೆಯನ್ನು ಹೊಂದಿದ ಶ್ರೀ ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿ ಬಹಳಷ್ಟು ಪ್ರಚಾರವನ್ನು ಮಾಡಿದ್ದಾರೆ. ಈ ವಿಷಯವನ್ನು ನಿರ್ವಿವಾದವಾಗಿ ಎಲ್ಲರೂ ಒಪ್ಪಿಕೊಳ್ಳಬೇಕಾಗುವುದು. ಈ ವಿಷಯವಾಗಿ ಅನೇಕ ಜನ ವಿದ್ವಾಂಸರು ತಮ್ಮ ಸ್ಪಷ್ಟವಾದ ನಿರ್ಣಯವನ್ನು ಕೊಟ್ಟಿದ್ದಾರೆ. ಈ ವಿಷಯದಲ್ಲಿ ಡಾ। ಎಸ್.ಸಿ ನಂದೀಮಠರ ನಿರ್ಣಯವೇನೆಂದರೆ – "ಖ್ಉಜ ಜಚಿಡಿಇಟಿಜ್ಞ, ಣಡಿಡಿಂಣಟಿಜುಟಿಂ ಣುಜ ಜಚಿಡಿಟಥಿ ಝಣಾಂಡಿಥಿ ಂಜಿ ಣುಜ ಜಥಿಣ ್ಭಚಿ ಟಜಜ ಚಿಟಟಥಣ ಚಿಟಟ ಛುಂಟಚಿಥಿ (ಆಡಿ. ಖಚಿಟಿಜಚಿಡಿಇಚಿಡಿ ಜಥಭಿಜಂಣಜಜ) ಣಂ ಛಿಂಟಿಛಿಟಣಜಜ ಣುಚಿಣ ್ಣ ತಿಭಿ ಜಿಂಣಟಿಜಜಜ ಛಥಿ ಃಭಿಚಿತಚಿ, ಣುಜ ಟುಟುಣಜಡಿ ಂಜಿ ಏಚಿಟಚಿಛಿಣಡು ಮಿಟಿಂ ಖಿರಿಯಿಟಚಿ (೧೧೬೨-೧೧೬೭ ಂ.ಆ.) . ಊಂತಿಜತಜಡಿ, ಣು ್ ಜಿಚಿಡಿ ಜಿಡಿಂಟ ಣುಜ ಣಡಿಣಾಣು, ಜಿಂಡಿ ಟಿಂಟಿಜ ಂಜಿ ಣುಜ ಛಂಂಇ ಂಟಿ ಗುಡಿಭಿಚುತುಟ, ಜುಣುಜಡಿ ್ಟಿ ಏಚಿಟಿಟಿಚಿಜಚಿ ಂಡಿ ್ಟಿ ಖಚಿಛಿಇಡುಣ ಛಿಛಿಡುಛಜ ಣುಜ ಜಿಂಣಾಟಿಜಚಿಣುಂಟಿ ಂಜಿ ಣುಜ ಜಥಿಣ ಣಂ ಃಭಿಚಿತಚಿ."

(೦ ಊಚಿಟಿಜಛಂಂಇ ಂಜಿ ಗುಡಿಭಿಚುತುಟ, ೩-

೨)

ಡಾ। ಭಂಡಾರ್‌ಕರ್‌ರನ್ನು ಬಿಟ್ಟು ಉಳಿದೆಲ್ಲ ಸಂಶೋಧಕರ ಬುದ್ಧಿಗೆ ಶ್ರೀ ಬಸವೇಶ್ವರರೇ ವೀರಶೈವ ಧರ್ಮಸಂಸ್ಥಾಪಕರೆಂಬ ಅಂಧಕಾರವು ಮುಸುಕಿಕೊಂಡಿದೆ. ವೀರಶೈವ ಧರ್ಮದ ಯಾವುದೇ ಕನ್ನಡ ಅಥವಾ ಸಂಸ್ಕೃತ ಪುಸ್ತಕದಲ್ಲಿ ಶ್ರೀ ಬಸವೇಶ್ವರರೇ ಧರ್ಮಸಂಸ್ಥಾಪಕರೆಂಬ ಉಲ್ಲೇಖವಿರುವುದಿಲ್ಲ. ಆದ್ದರಿಂದ ಶ್ರೀ ಬಸವೇಶ್ವರರು ಧರ್ಮಸಂಸ್ಥಾಪಕರಾಗಲಾರರು.

ಇನ್ನು ಶ್ರೀ ಕೆ. ಎ. ನೀಲಕಂಠಶಾಸ್ತ್ರಿಗಳ ಅಭಿಪ್ರಾಯವೇನೆಂದರೆ –

“ಖಟಿಂಚಿಥಿಚಿಣ ಣಡಿಚಿಜುಣುಠಟಿ ಚಿತಜಢಿ ಣುಚಿಣ ಣುಜ, ಜಥಿಣ ್ಚ ತಜಡಿಥಿ ಠಟಜ ಚಿಟಿಜ ತಿಛಿ ಜಿಠಣಾಟಿಜಜಜ ಛಥಿ ಜಿತಜ ಛಿಛಿಜಣುಛಿ – ಇಇಾಡಿಚಿಟಟಚಿ, ಕಚಿಟಿಜುಣಚಿಡಿಚಿಜ್ಞುಥಿಚಿ, ಖಜತಚಿಟಿಚಿ, ಒಚಿಡಿಣಾಟಚಿ ಚಿಟಿಜ ಗ್ಳುತಿಚಿಡಿಚಿಜ್ಞುಥಿಚಿ ತ್ತಿಠ ತಿಜಡಿಜ ್ಕಜಟಜ ಣಠ ್ಕಚಿತಜ, ಠಿಡಿಣಾಟಿಠ ಜಿಡಿಠಟ ಣುಜ ಜಿತಜ ್ಕಜಚಿಛ ಠಜಿ, ್ಕತಚಿ. ಃಛಿಚಿತಚಿ, ಣುಜಥಿ, ಚಿಥಿ, ತಿಛಿ ಛಣಾಣ ಣುಜ ಡಿಜತುತಜಡಿ ಠಜಿ ಣುಜ ಈಚುಣು”.

(೦ ಊಣುಣಠಡಿಥಿ ಠಜಿ ಖಠಣಾಣು ಖಟಿಜುಚಿ ೧. ೪೩೫)

ಲಿಂಗಾಯತ ಧರ್ಮವು ಅತ್ಯಂತ ಪ್ರಾಚೀನವಾದುದು. ಶಿವನ ಪಂಚಮುಖಗಳಿಂದ ಆವಿರ್ಭವಿಸಿದ ಏಕೋರಾಮ, ಪಂಡಿತಾರಾಧ್ಯ, ರೇವಣ, ಮರುಳ ಮತ್ತು ವಿಶ್ವಾರಾಧ್ಯರೆಂಬ ಹೆಸರಿನ ಪಂಚಾಚಾರ್ಯರು ಈ ಧರ್ಮವನ್ನು ಸ್ಥಾಪಿಸಿದ್ದಾರೆ. ಇದರ ಅನುಸಾರವಾಗಿ ಬಸವೇಶ್ವರರು ಈ ಧರ್ಮದ ಜೀರ್ಣೋದ್ಧಾರಕರಾಗಿದ್ದಾರೆ.

ಪಾಶ್ಚಾತ್ಯ ವಿದ್ವಾಂಸರಾದ ಡಾ। ಜೆ.ಎನ್. ಫರ್ಕ್ಯೂಹರ್ ಮಹೋದಯರ ಅಭಿಪ್ರಾಯವೇನೆಂದರೆ

ಖಿಜ ಣಡಿಚಿಜುಣುಠಟಿ ್ಚ ಣುಚಿಣ ಣುಜ, ಜಥಿಣ ತಿಛಿ ಜಿಠಣಾಟಿಜಜಜ ಛಥಿ ಜಿತಜ ಛಿಛಿಜಣುಛಿ– ಇಇಾಡಿಚಿಟಟಚಿ, ಕಚಿಟಿಜುಣಚಿಡಿಚಿಜ್ಞುಥಿಚಿ, ಖಜತಚಿಟಿಚಿ, ಒಚಿಡಿಣಾಟಚಿ, ಗ್ಳುತಿಚಿಡಿಜ್ಞುಥಿಚಿ ತ್ತಿಠ ಚಿಡಿಜ ್ಕಜಟಜ ಣಠ ್ಕಚಿತಜ ಖಠಿಡಿಣಾಟಿಠ ಜಿಡಿಠಟ ಣುಜ ಜಿತಜ ್ಕಜಚಿಛ ಠಜಿ ಖತಚಿ, ್ಕಟಿಛಿಚಿಡಿಟಿಚಿಣುಛಿ ಚಿಂಜ ಚಿಜಿಣಜಡಿ ಚಿಂಜ. ಖಿಛಜ ಚಿಡಿಜ ಡಿಜಂಚಿಡಿಜಜಜ ಛಿ ತಜಡಿಥಿ ಚಿಟಿಛಿುಜಟಿಣ ಚಿಟಿಜ ಃಛಿಚಿತಚಿ ್ಚ, ಚುಜ ಣಠ ್ಕಚಿತಜ ಛಜಜಟಿ ಛಣಾಣ ಣುಜ ಡಿಜತುತಜಡಿ ಠಜಿ ಣುಜ ಜಿಚುಣು.”

(೦ಟಿ ಠಣಾಣಟುಟಿಜ ಠಜಿ ಣುಜ ಡಿಜಟುರುಠಣಾ ಟುಣಜಡಿಚಿಣಾಡಿಜ ಠಜಿ ಖಟಿಜುಚಿ, ಕ. ೨೬೦)

ಪ್ರತಿಯೊಂದು ಯುಗದಲ್ಲಿ ಪರಮಾತ್ಮನ ಪಂಚಮುಖಗಳಿಂದ ಆವಿರ್ಭವಿಸಿದ ಏಕೋರಾಮ, ಪಂಡಿತಾರಾಧ್ಯ, ರೇವಣ, ಮರುಳ ಮತ್ತು ವಿಶ್ವಾರಾಧ್ಯರೆಂಬ ಐದು ಜನ ಯೋಗಿಗಳು ಈ ಧರ್ಮವನ್ನು ಸಂಸ್ಥಾಪಿಸಿದರು. ಈ ಐದು ಜನ ಆಚಾರ್ಯರು ಅತ್ಯಂತ ಪ್ರಾಚೀನರಾಗಿರುತ್ತಾರೆ. ಶ್ರೀ ಬಸವೇಶ್ವರರು ಈ ಧರ್ಮದ ಜೀರ್ಣೋದ್ಧಾರಕರು ಮಾತ್ರ ಎಂದು ತಿಳಿದುಬರುತ್ತದೆ.

ಇದೇ ಪ್ರಕಾರ ಡಾ। ಯದುವಂಶಿ ಎಂಬ ಹಿಂದೂ ಲೇಖಕರೂ ಸಹ “ಪ್ರಖ್ಯಾತ ಬಸವ ಇಸ್ ಸಂಪ್ರದಾಯಕೇ ಜನ್ಮದಾತಾ ನಹೀ ಥೇ, ಯದ್ಯಪಿ ಉನ್ಹೋನೇ ಇಸಕೋ ಬಹುತ್ ಸಹಾಯತಾ ದೀ” (ಶೈವಮತ, ಪುಟ ೧೫೮–೧೫೯) ತಮ್ಮ “ಶೈವಮತ” ಎಂಬ ಹಿಂದೀ ಪುಸ್ತಕದಲ್ಲಿಯೂ ಶ್ರೀ ಬಸವೇಶ್ವರರು ವೀರಶೈವ ಧರ್ಮದ ಸಂಸ್ಥಾಪಕರಲ್ಲವೆಂಬುದಾಗಿ ಪ್ರತಿಪಾದಿಸಿದ್ದಾರೆ.

ಹೀಗೆ ಪ್ರಾಚೀನವಾದ ಆಗಮ ಸಾಹಿತ್ಯದಿಂದ ಆಧುನಿಕ ಸಾಹಿತ್ಯದವರೆಗೆ ವಿಚಾರಮಾಡಲಾಗಿ ಶ್ರೀ ಜಗದ್ಗುರು ಪಂಚಾಚಾರ್ಯರೇ ವೀರಶೈವರ ಧರ್ಮದ ಸಂಸ್ಥಾಪಕರೆಂಬುದು ಸಿದ್ಧವಾಗುತ್ತದೆ. ಶ್ರೀ ಬಸವೇಶ್ವರರು ಮಾತ್ರ ಈ ಧರ್ಮದಲ್ಲಿ ದೀಕ್ಷೆಯನ್ನು ಹೊಂದಿ ಈ ಧರ್ಮದ ತತ್ತ್ವಗಳು ಕನ್ನಡನಾಡಿನ ಜನರಿಗೆ ತಿಳಿಯಲೆಂಬ ಉದ್ದೇಶದಿಂದ ಜನರಾಡುವ ಸಾಮಾನ್ಯ ಭಾಷೆಯಲ್ಲಿ ವಚನಗಳನ್ನು ಬರೆದು ಅವುಗಳ ಮೂಲಕ ಬಹಳಷ್ಟು ಧರ್ಮಪ್ರಚಾರವನ್ನು ಮಾಡಿದ್ದಾರೆ.

### ವೀರಶೈವರ ಗೋತ್ರ – ಸೂತ್ರಗಳು

ಇಷ್ಟಲಿಂಗ ಪೂಜಾರೂಪ ನಿತ್ಯಕರ್ಮವನ್ನಾಗಲಿ ಮತ್ತೆ ಯಾವುದೇ ನೈಮಿತ್ತಿಕ–ಕರ್ಮಗಳನ್ನು ಆಚರಿಸುವಾಗ ದೇಶ–ಕಾಲ–ಗೋತ್ರ ಮತ್ತು ಉದ್ದೇಶವನ್ನು ಹೇಳಿ ಸಂಕಲ್ಪ ಮಾಡುವ ಪದ್ಧತಿ ಇದೆ. ಅದೇ ಪ್ರಕಾರ ತೀರ್ಥಯಾತ್ರೆಗಳಿಗೆ ಹೋದಾಗ ಅಲ್ಲಿಯ ಅರ್ಚಕರಾದರೂ ಪೂಜೆಯನ್ನು ಮಾಡಿಸುವಾಗ ಯಾತ್ರಾರ್ಥಿಗಳಿಗೆ ನಿಮ್ಮ ಗೋತ್ರ ಯಾವುದು? ಎಂಬುದಾಗಿ ಪ್ರಶ್ನಿಸುತ್ತಾರೆ. ಈ ಗೋತ್ರದ ವಿಷಯವಾಗಿ ತಿಳಿಯದೇ ಇರುವ ಬಹಳಷ್ಟು ವೀರಶೈವರು ಮೌನವಾಗಬೇಕಾಗುತ್ತದೆ. ಆದ್ದರಿಂದ ಜನಸಾಮಾನ್ಯರಿಗೂ ತಮ್ಮ ತಮ್ಮ ಗೋತ್ರಗಳ ಜ್ಞಾನವಾಗಲೆಂಬ ಉದ್ದೇಶದಿಂದ ಇಲ್ಲಿ ಗೋತ್ರಪುರುಷರ ವಿಷಯವಾಗಿ ಸ್ವಲ್ಪ ವಿಚಾರಿಸೋಣ.

ನಮ್ಮೀ ಭಾರತದೇಶದಲ್ಲಿ ಋಷಿವಂಶ ಮತ್ತು ಗಣವಂಶಗಳೆಂಬ ಎರಡು ವಂಶಗಳು ಅತಿ ಪ್ರಾಚೀನವಾದವುಗಳು. ಕಶ್ಯಪ, ಭಾರದ್ವಾಜ ಮತ್ತು ಗೌತಮ ಮುಂತಾದ ಋಷಿಗಳ ವಂಶದಲ್ಲಿ ಜನಿಸಿದ ಬ್ರಾಹ್ಮಣ, ಕ್ಷತ್ರಿಯ ಮೊದಲಾದವರನ್ನು ಋಷಿವಂಶಜರೆಂದು ಕರೆಯುತ್ತಾರೆ. ಈ ಋಷಿಗಳು ಮತ್ತು ಋಷಿವಂಶಜರೆಲ್ಲ ಬ್ರಹ್ಮಸೃಷ್ಟಿಗೆ ಸಂಬಂಧಪಡುತ್ತಾರೆ. ಆದರೆ ಈ ಬ್ರಹ್ಮಸೃಷ್ಟಿಯ ಪೂರ್ವದಲ್ಲಿ ಉತ್ಪನ್ನವಾದ ಶಿವಸೃಷ್ಟಿಯಲ್ಲಿ ಬರುವ ವೀರ, ನಂದಿ ಮುಂತಾದ ಪಂಚಶಿವಗಣರಿಂದ ಜನಿಸಿದ ವೀರಶೈವರೆಲ್ಲ ಗಣಸೃಷ್ಟಿಗೆ ಸಂಬಂಧ ಪಡುತ್ತಾರೆ.

ಇಲ್ಲಿರುವ ರಹಸ್ಯಾರ್ಥವೇನೆಂದರೆ – ಪೂರ್ವದಲ್ಲಿ ಶಿವನು ಬ್ರಹ್ಮನಿಗೆ ಸೃಷ್ಟಿ ನಿರ್ಮಾಣದ ಕಾರ್ಯವನ್ನು ವಹಿಸಿ ಸೃಷ್ಟಿಸಲು ಆಜ್ಞಾಪಿಸಿದಾಗ, ಶಿವನ ಆಜ್ಞೆಯಂತೆ ಬ್ರಹ್ಮನು ಸೃಷ್ಟಿ ರಚಿಸಲು ಉದ್ಯುಕ್ತನಾಗುತ್ತಾನೆ. ಬಹಳಷ್ಟು ಪ್ರಯತ್ನಿಸಿ ನಿರಾಶನಾದಾಗ–

ಸೃಷ್ಟಿಂ ವಿಧೇಹಿ ಭಗವಾನ್ ಪ್ರಥಮಂ ಪರಮೇಶ್ವರ ।
ಜ್ಞಾತ್ವೋಪಾಯಸ್ತತಃ ಕುರ್ಯಾಂ ಜಗತ್ಸೃಷ್ಟಿಮುಮಾಪತೇ ॥

(ಸಿ.ಶಿ. ೨; ೨೫)

ಹೇ ದೇವಾಧಿದೇವನಾದ ಮಹಾದೇವನೇ, ನೀನು ಸೃಷ್ಟಿಯ ಉಪಾಯವನ್ನು ಹೇಳಿದರೂ ನನಗೆ ತಿಳಿಯದಾಗಿದೆ. ಆದ್ದರಿಂದ ನೀನು ಮೊದಲು ಸೃಷ್ಟಿಯನ್ನು ಮಾಡು, ಅದನ್ನು ನೋಡಿಕೊಂಡು ನಾನು ಸೃಷ್ಟಿಸಲು ಪ್ರಯತ್ನಿಸುತ್ತೇನೆ ಎಂಬುದಾಗಿ ಪ್ರಾರ್ಥಿಸಿದನು.

ಆಗ ಶಿವನು–

ಇತ್ಯೇವಂ ಪ್ರಾರ್ಥಿತಃ ಶಂಭುರ್ಬ್ರಹ್ಮಣಾ ವಿಶ್ವಯೋನಿನಾ ।
ಸಸರ್ಜಾತ್ಮಸಮ ಪ್ರಖ್ಯಾನ್ ಸರ್ವಜ್ಞಾನ್ ಸರ್ವಶಕ್ತಿಕಾನ್ ॥
ಪ್ರಬೋಧಪರಮಾನಂದಪರಿವಾಹಿತಮಾನಸಾನ್ ।
ಪ್ರಮಥಾನ್ ವಿಶ್ವನಿರ್ಮಾಣಪ್ರಲಯಾದಿ ವಿಧಿಕ್ಷಮಾನ್ ॥

(ಸಿ.ಶಿ.೨; ೧೬–೧೭)

ಈ ರೀತಿಯಾಗಿ ತನಗೆ ಸಮಾನವಾದ ಪ್ರತಿಭೆಯುಳ್ಳ ಸರ್ವಜ್ಞರೂ, ಸರ್ವಶಕ್ತರೂ ಆದ ಜಗತ್ತಿನ ನಿರ್ಮಾಣಾದಿ ಸಾಮರ್ಥ್ಯವುಳ್ಳ ಅನಂತ ಶಿವಗಣರನ್ನು ಸೃಷ್ಟಿಸಿದನು.

ಹೀಗೆ ಬ್ರಹ್ಮನ ಸೃಷ್ಟಿಯ ಪೂರ್ವದಲ್ಲಿ ಶಿವನು ಬ್ರಹ್ಮನಿಗೆ ಸೃಷ್ಟಿಯ ಕಲೆಯನ್ನು ತೋರಿಸಿಕೊಡುವುದಕ್ಕಾಗಿ ಸೃಷ್ಟಿಸಿದ ಅನೇಕ ಶಿವಗಣರಲ್ಲಿ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಐದು ಜನ ಶಿವಗಣರೇ ವೀರಶೈವರ ಗೋತ್ರ ಪುರುಷರು, ಅಂತೆಯೇ –

ಈಶಾನಮುಖಸಂಜಾತಾ ವೀರಶೈವಾಮಹೌಜಸಃ ।
ವೀರೋನಂದೀ ತಥಾ ಭೃಂಗೀ ವೃಷಭಃ ಸ್ಕಂದ ಏವ ಚ ॥

(ಪಾಶುಪತ ತಂತ್ರ)

ಅತಿವರ್ಣಾಶ್ರಮಾಃ ಪೂರ್ವೇನಂದ್ಯಾದಿಪ್ರಮಥಾಃ ಸ್ಮೃತಾಃ ।
ತತ್ಸಂತತಿಸಮಾಯಾತಾ ವೀರಶೈವಾ ಇತಿ ಶ್ರುತಾಃ ॥

(ವೀರಶೈವ ಸದಾಚಾರ ಸಂಗ್ರಹ ; ೬/೪)

ಈ ಪಾಶುಪತತಂತ್ರ ಮತ್ತು ವೀರಶೈವ ಸದಾಚಾರ ಸಂಗ್ರಹಗಳಲ್ಲಿ ಈ ವೀರಾದಿಪಂಚಗಣರೇ ವೀರಶೈವರ ವಂಶದ ಮೂಲಪುರುಷರೆಂದು ಸ್ಪಷ್ಟವಾಗಿ ಪ್ರತಿಪಾದಿಸಲ್ಪಟ್ಟಿದೆ.

ಗೋತ್ರ ಪುರುಷರು ವಂಶದ ಮೂಲ ವ್ಯಕ್ತಿಗಳಾಗಿದ್ದರಿಂದ, ಧರ್ಮಪತ್ನಿಯರಿಲ್ಲದೇ ಸಂತಾನೋತ್ಪತ್ತಿಯು ಅಸಂಭವವಾದ್ದರಿಂದ ಇವರು ಪತ್ನೀ ಪರಿಗ್ರಹಮಾಡಿರಬೇಕಾಗುತ್ತದೆ. ಹಾಗಾದರೆ ವೀರಶೈವ ಗೋತ್ರ ಪುರುಷರ ಪತ್ನಿಯರು ಯಾರು? ಎಂಬ ಜಿಜ್ಞಾಸೆಯುಂಟಾದಾಗ ಕ್ರಿಯಾಸಾರ, ವೀರಶೈವಾನಂದ ಚಂದ್ರಿಕಾ ಮತ್ತು ಲಿಂಗಪುರಾಣ ಮುಂತಾದ ಗ್ರಂಥಗಳಲ್ಲಿ ಶಿವಗಣರ ಪತ್ನಿಯರು ಪ್ರತಿಪಾದಿಸಲ್ಪಟ್ಟಿದ್ದಾರೆ. ಅದನ್ನೇ ಈಗ ಅವಲೋಕಿಸೋಣ –

ವೀರಭದ್ರೋ ಮಹಾತೇಜಾ ಹಿಮಕುಂದೇಂದುಸನ್ನಿಭಃ ।
ಭದ್ರಕಾಳೀಪ್ರಿಯೋ ನಿತ್ಯಂ ಮಾತೃಣಾಮಭಿರಕ್ಷಕಃ ॥

(ಲಿಂಗಪುರಾಣ)

ಎನ್ನುವ ಲಿಂಗಪುರಾಣದ ವಚನದಲ್ಲಿ "ವೀರ" ಅಥವಾ "ವೀರಭದ್ರ"ನೆಂಬ ಗಣನಿಗೆ "ಭದ್ರಕಾಳಿ" ಎಂಬ ಪತ್ನಿಯಿರುವಳೆಂದು ಪ್ರತಿಪಾದಿಸಲ್ಪಟ್ಟಿದೆ. ಇಂದಿಗೂ ಕೂಡಾ ವೀರಭದ್ರ ದೇವಾಲಯಗಳ ಪಕ್ಕದಲ್ಲಿಯೇ ಭದ್ರಕಾಳಿಯ ಮಂದಿರಗಳಿರುವುದನ್ನು ಕಾಣುತ್ತೇವೆ. ಅದೇ ಪ್ರಕಾರವಾಗಿ ಶ್ರೀ ನೀಲಕಂಠ ಶಿವಾಚಾರ್ಯರು ತಮ್ಮ 'ಕ್ರಿಯಾಸಾರ' ಎಂಬ ಗ್ರಂಥದ ಹದಿನಾಲ್ಕನೇ ಉಪದೇಶದಲ್ಲಿ 'ಆವರಣ ಪೂಜಾ' ವಿಧಾನವನ್ನು ತಿಳಿಸುವಾಗ ತೃತೀಯಾವರಣ ಪೂಜೆಯಲ್ಲಿ "ಕುಂಡಲಿನೀ ಸಹಿತಾಯ ನಂದಿಕೇಶ್ವರಾಯ ನಮಃ, ಹ್ಲಾದಿನೀ ಸಹಿತಾಯ ಭೃಂಗಿಣೇ ನಮಃ, ಭದ್ರಾ ಸಹಿತಾಯ ವೃಷಭಾಯ ನಮಃ, ದೇವಯಾನೀ ಸಹಿತಾಯ ಸ್ಕಂದಾಯ ನಮಃ॥" (ಕ್ರಿಯಾಸಾರ ಭಾಗ–೨ ಪುಟ ೨೭೮–೨೭೯ ಔಖಿಖ ಪ್ರಕಾಶನ, ಮೈಸೂರು) ಎಂಬುದಾಗಿ ನಂದೀಶ್ವರನಿಗೆ ಕುಂಡಲಿನೀ, ಭೃಂಗಿಗೆ ಹ್ಲಾದಿನೀ, ವೃಷಭನಿಗೆ ಭದ್ರಾ ಮತ್ತು ಸ್ಕಂದನಿಗೆ ದೇವಯಾನೀ ಎಂಬ ಪತ್ನಿಯರು ಇದ್ದರೆಂದು ಉಲ್ಲೇಖವನ್ನು ಮಾಡಿರುತ್ತಾರೆ. ಇದೂ ಅಲ್ಲದೆ ಶ್ರೀಮರಿತೋಂಟದಾರ್ಯರು 'ವೀರಶೈವಾನಂದ ಚಂದ್ರಿಕೆಯ ವಾದಕಾಂಡದಲ್ಲಿ ನಂದೀಶ್ವರನಿಗೆ "ಸುಯಶಾ" ಎಂಬ ಪತ್ನಿ ಇದ್ದಳೆಂದು ಪ್ರತಿಪಾದಿಸಿದ್ದಾರೆ. ಹೀಗೆ ವೀರಶೈವ ಗೋತ್ರಪುರುಷರಾದ ವೀರನು ಭದ್ರಕಾಳಿಯನ್ನೂ, ನಂದಿಯು ಕುಂಡಲಿನಿ ಅಥವಾ ಸುಯಶಾಳನ್ನು, ಭೃಂಗಿಯು ಹ್ಲಾದಿನಿಯನ್ನೂ, ವೃಷಭನು ಭದ್ರಾಳನ್ನು ಮತ್ತು ಸ್ಕಂದನು ದೇವಯಾನಿಯನ್ನೂ ಪತ್ನಿಯರನ್ನಾಗಿ ಪರಿಗ್ರಹಿಸಿರುವುದು ಸಿದ್ಧವಾಗುತ್ತದೆ.

"ಅಥ ಯದಿ ಸ್ತ್ರೀಲೋಕಕಾಮೋ ಭವತಿ" ಎಂಬ ಶ್ರುತಿ ಪ್ರಮಾಣಾನುಸಾರವಾಗಿ ನಿತ್ಯಮುಕ್ತರೂ, ಅನಾದಿ ಮುಕ್ತರೂ ಆದ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಈ ಶಿವಗಣರಿಗೆ ಸರ್ವಸ್ವಾತಂತ್ರ್ಯವಿರುವುದರಿಂದ ಲೀಲಾವಿನೋದಕ್ಕಾಗಿ ಇವರು ಸ್ತ್ರೀ ಪರಿಗ್ರಹವನ್ನು ಮಾಡಿರುವುದರಿಂದ ಇವರಲ್ಲಿ ರಾಗದ್ವೇಷಾದಿಗಳಿಲ್ಲದ ಕಾರಣ ಇವರು ಸಂಸಾರಬಂಧನಕ್ಕೊಳಗಾಗಲಾರರು. ಇಂತಹ ಶಿವಗಣರ ಸಂತಾನವೇ ವೀರಮಾಹೇಶ್ವರರು ಅರ್ಥಾತ್ ಜಂಗಮರು. ಶಿವಗಣರ ಸಂತಾನವಾದ ಕಾರಣ ಜಂಗಮರಿಗೆ ಗಣಂಗಳು ಎಂಬುದಾಗಿ ಲೋಕದಲ್ಲಿ ಕರೆಯುವ ರೂಢಿಯುಂಟು.

ಇದೇ ಪ್ರಕಾರ ಪರಮಾತ್ಮನ ಈಶಾನ ಮುಖದಿಂದ ಪಂಚವಕ್ತ್ರ ಗಣೇಶ್ವರನು ಜನಿಸುತ್ತಾನೆ. ಆ ಗಣೇಶ್ವರನ ಐದು ಮುಖಗಳಿಂದ ಮಖಾರಿ, ಕಾಲಾರಿ, ಪುರಾರಿ, ಸ್ಮರಾರಿ ಮತ್ತು ವೇದಾರಿಗಳೆಂಬ ಐದು ಜನ ಪಂಚಮರು ಜನಿಸುತ್ತಾರೆ. ಈ ಪಂಚಮರ ಸಂತಾನವೇ ಪಂಚಮಸಾಲಿ ಎನ್ನಲಾಗುತ್ತದೆ.

ಹೀಗೆ ವೀರಶೈವ ಸದಾಚಾರ ಸಂಗ್ರಹ ಮತ್ತು ಆಗಮಗಳಲ್ಲಿ ಗಣವಂಶ (ಜಂಗಮ) ಮತ್ತು ಪಂಚಮ (ಭಕ್ತ) ವಂಶ ಎಂಬುದಾಗಿ ಎರಡೇ ಭಾಗಗಳಿವೆ. ಕಾಲಾಂತರದಲ್ಲಿ ಈ ಪಂಚಮರಲ್ಲಿಯೇ ವೃತ್ತಿ ಭೇದದಿಂದ ಅನೇಕ ಜಾತಿ ಉಪಜಾತಿಗಳು ಉತ್ಪನ್ನವಾಗಿರಬಹುದೆಂದು ಊಹಿಸಬಹುದಾಗಿದೆ. ಇಂದಿನ ಈ ಪರಿವರ್ತನಶೀಲ ಪ್ರಪಂಚದಲ್ಲಿ ಎಲ್ಲ ವೀರಶೈವರು ತಮ್ಮ ತಮ್ಮ ಉಪಜಾತಿಗಳ ಗೊಂದಲಕ್ಕೆ ಬಿದ್ದು ಸಮಾಜವನ್ನು ಹದಗೆಡಿಸುವುದಕ್ಕಿಂತ ನಾವೆಲ್ಲರೂ ವೀರಶೈವರೆಂಬ ಏಕಾಭಿಪ್ರಾಯದಿಂದ ಬಾಳಿದರೆ ವೀರಶೈವ ಸಮಾಜವು ಬೇಗನೆ ಸ್ವಸ್ಥವಾಗುವುದರಲ್ಲಿ ಸಂದೇಹವಿಲ್ಲ.

ಭಕ್ತ ಜನರ ಪ್ರತಿಯೊಂದು ಧಾರ್ಮಿಕ ವಿಧಿವಿಧಾನಗಳನ್ನು ಮಾಹೇಶ್ವರ (ಜಂಗಮ)ರೇ ನಿರ್ವಹಿಸುತ್ತಾ ಬಂದಿರುವುದರಿಂದ ಅವರು ಪೂಜ್ಯರೂ, ಇವರು ಪೂಜಕರೂ ಆಗಿದ್ದಾರೆ.

ಪಂಚಮರೆಂದು ಕರೆಯಿಸಿಕೊಳ್ಳುವ ಭಕ್ತವಂಶದವರಾದರೂ ತಾವು ಪೂಜಾದಿಗಳನ್ನು

ಮಾಡುವಾಗ ತಮ್ಮ ವಂಶ ಪರಂಪರೆಯ ಗುರುಗಳ ಗೋತ್ರಗಳನ್ನೇ ಹೇಳಿ ಸಂಕಲ್ಪ ಮಾಡಬೇಕು.

ಈ ರೀತಿಯಾಗಿ ವೀರ, ನಂದಿ, ಭೃಂಗಿ, ವೃಷಭ ಮತ್ತು ಸ್ಕಂದರೆಂಬ ಪಂಚಗಣರ ಹಾಗೂ ಮಕಾರಿ, ಕಾಲಾರಿ, ಪುರಾರಿ, ಸ್ಮರಾರಿ ಮತ್ತು ವೇದಾರಿ ಎಂಬ ಪಂಚಮರ ಸಂತಾನಗಳಿಗೆಲ್ಲ ಶ್ರೀ ಜಗದ್ಗುರು ರೇವಣಸಿದ್ಧ, ಶ್ರೀ ಜಗದ್ಗುರು ಮರುಳಸಿದ್ಧ, ಶ್ರೀ ಜಗದ್ಗುರು ಏಕೋರಾಮರಾಧ್ಯ, ಶ್ರೀಜಗದ್ಗುರು ಪಂಡಿತಾರಾಧ್ಯ ಮತ್ತು ಶ್ರೀ ಜಗದ್ಗುರು ವಿಶ್ವಾರಾಧ್ಯರೆಂಬ ಪಂಚಜಗದ್ಗುರುಗಳೇ ಮೂಲಗುರುಗಳಾಗಿರುತ್ತಾರೆ. ಈ ಮೂಲ ಪಂಚಾಚಾರ್ಯರ ಶಿಷ್ಯರಾದ ಪಟ್ಟಾಧಿಕಾರಿಗಳು ಮೂಲಾಚಾರ್ಯರ ಅಪ್ಪಣೆ ಪ್ರಕಾರ ಅವರ ಹೆಸರಿನ ಪಂಚಕಲಶಗಳನ್ನು ಸ್ಥಾಪಿಸಿ, ಆ ಪಂಚಕಲಶಗಳ ಸಾಕ್ಷಿಯಲ್ಲಿಯೇ ದೀಕ್ಷಾ, ವಿವಾಹ ಮುಂತಾದ ಸಕಲ ಧಾರ್ಮಿಕ ಕ್ರಿಯೆಗಳನ್ನೂ ನಿರ್ವಹಿಸುತ್ತಾರೆ.

ವೀರಶೈವರಿಗೆ ಮುಖ್ಯವಾಗಿ ಐದು ಗೋತ್ರಗಳಿರುವಂತೆ ಪಡ್ವಿಡಿ, ವೃಷ್ಟಿ, ಲಂಬನ, ಮುಕ್ತಾಗುಚ್ಛ ಮತ್ತು ಪಂಚವರ್ಣಗಳೆಂಬ ಐದು ಮಹಾಸೂತ್ರಗಳಿವೆ. ಈ ಒಂದೊಂದು ಸೂತ್ರಕ್ಕೆ ಹನ್ನೆರಡರಂತೆ ಉಪಸೂತ್ರಗಳಿರುತ್ತವೆ. ತಮ್ಮ ವಂಶದ ಗೋತ್ರ-ಸೂತ್ರಗಳ ಪರಿಜ್ಞಾನವು ಪ್ರತಿಯೊಬ್ಬರಿಗೂ ಇರಬೇಕೆಂಬ ಉದ್ದೇಶದಿಂದ ಮುಂದಿನ ಪುಟಗಳಲ್ಲಿ ಅವುಗಳ ಸಂಕ್ಷಿಪ್ತ ವಿವರಣೆಯನ್ನು ಕೊಡಲಾಗಿದೆ.

## ವೀರಶೈವ ಧರ್ಮ – ದರ್ಶಿನಿ

೧) ವೀರಶೈವ ಧರ್ಮ ಸಂಸ್ಥಾಪಕರು

ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು

೨) ವೀರಶೈವ ಧರ್ಮ ಗ್ರಂಥ

ಶ್ರೀ ಸಿದ್ಧಾಂತ ಶಿಖಾಮಣಿ

೩)ಜಗದ್ಗುರು ಮೂಲ ಪಂಚಾಚಾರ್ಯರ ಅವತಾರೋತ್ಸವಗಳು

೧) ವೈಶಾಖ ಶುದ್ಧ ಅಕ್ಷಯ ತದಿಗೆ

ಶ್ರೀ ಜಗದ್ಗುರು ಏಕೋರಾಮಾರಾಧ್ಯರ ಅವತಾರ

೨) ವೈಶಾಖ ಶುದ್ಧ ಪಂಚಮಿ

ಶ್ರೀ ಜಗದ್ಗುರು ದಾರುಕಾಚಾರ್ಯರ ಅವತಾರ

೩) ಮಾಘ ಬಹುಳ ತ್ರಯೋದಶಿ

ಶ್ರೀ ಜಗದ್ಗುರು ಪಂಡಿತಾರಾಧ್ಯರ ಅವತಾರ

ಶ್ರೀ ಜಗದ್ಗುರು ವಿಶ್ವಾರಾಧ್ಯರ ಅವತಾರ

೪) ಫಾಲ್ಗುಣ ಶುದ್ಧ ತ್ರಯೋದಶಿ

ಶ್ರೀ ಜಗದ್ಗುರು ರೇಣುಕಾಚಾರ್ಯರ ಅವತಾರ

## ವೀರಶೈವ ಪಂಚಪೀಠ ಪರಂಪರೆ

ಇದುವರೆಗೂ 'ವೀರಶೈವ' ಧರ್ಮದ ಸ್ವರೂಪ ಹಾಗೂ ಅದರ ತಾತ್ವಿಕ ಅರ್ಥವನ್ನು ಸಂಕ್ಷಿಪ್ತವಾಗಿ ವಿವರಿಸಲಾಯಿತು. ಅದರ ಹಿರಿಮೆ, ಗರಿಮೆಗಳನ್ನು ಅರಿತುಕೊಂಡದ್ದಾಯಿತು. ಅಂಥ ಉತ್ಕೃಷ್ಟ ಧರ್ಮವನ್ನು ಭೂತಲದಲ್ಲಿ ಸಂಸ್ಥಾಪಿಸಿದವರು ಜಗದಾದಿ ಜಗದ್ಗುರು ಶ್ರೀರೇಣುಕಾದಿ ಪಂಚಾಚಾರ್ಯರು ಎಂಬುದು ಸರ್ವಶೃತವಿದೆ. ಪಂಚಪೀಠಗಳು – ರಂಭಾಪುರಿ, ಉಜ್ಜಯಿನಿ, ಕೇದಾರ, ಶ್ರೀಶೈಲ ಹಾಗೂ ಕಾಶಿ ಎಂದು ಸುಪ್ರಸಿದ್ಧವಾಗಿವೆ. ಈ ಪಂಚಪೀಠಗಳು ಆಸೇತು ಹಿಮಾಲಯದವರೆಗೆ ತಮ್ಮ ಶಾಖೋಪಶಾಖೆಗಳನ್ನು ಹೊಂದಿ ಸಹಸ್ರ ಸಹಸ್ರ ವರ್ಷಗಳಿಂದ ಧರ್ಮಪ್ರಚಾರ ಮತ್ತು ಧರ್ಮರಕ್ಷಣೆ ಕಾರ್ಯಗಳನ್ನು ನಿರ್ವಹಿಸುತ್ತ ಬಂದಿರುವುದು ಇತಿಹಾಸ ಪ್ರಸಿದ್ಧವಿದೆ. ಅಂಥ ಪಂಚಪೀಠಗಳ ಪರಂಪರೆಯ ಪರಿಚಯ ಮಾಡಿಕೊಡುವುದೇ ಈ ಕಿರುಹೊತ್ತಗೆಯ ಗುರಿಯಾಗಿದೆ.

ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಮತ್ತು ಈಶಾನಗಳೆಂಬ ಶಿವನ ಪಂಚಮುಖಗಳಿಂದ ಪ್ರಾದುರ್ಭವಿಸಿದ ಶ್ರೀ ರೇವಣಾರಾಧ್ಯ, ಶ್ರೀ ಮರುಳಾರಾಧ್ಯ, ಶ್ರೀ ಏಕೋರಾಮಾರಾಧ್ಯ, ಶ್ರೀ ಪಂಡಿತಾರಾಧ್ಯ ಮತ್ತು ಶ್ರೀ ವಿಶ್ವಾರಾಧ್ಯರೆಂಬ ಪಂಚಾಚಾರ್ಯರು ಪರಶಿವನ ಅಪ್ಪಣೆಯ ಮೇರೆಗೆ ಪ್ರತಿಯೊಂದು ಯುಗಾರಂಭದಲ್ಲಿ ಭೂಲೋಕದಲ್ಲಿ ಅವತರಿಸುವಂತೆಯೇ, ಈ ಕಲಿಯುಗದ ಆರಂಭದಲ್ಲಿ ಕ್ರಮವಾಗಿ ಶ್ರೀ ಕೊಲನುಪಾಕ (ಕೊಲ್ಲಿಪಾಕಿ)ದ ಶ್ರೀ ಸೋಮೇಶ್ವರಲಿಂಗ, ವಟಕ್ಷೇತ್ರದ ಶ್ರೀ ಸಿದ್ಧೇಶ್ವರಲಿಂಗ, ದ್ರಾಕ್ಷಾರಾಮ ಕ್ಷೇತ್ರದ ಶ್ರೀ ರಾಮನಾಥಲಿಂಗ, ಶ್ರೀ ಸುಧಾಕುಂಡ ಕ್ಷೇತ್ರದ ಶ್ರೀ ಮಲ್ಲಿಕಾರ್ಜುನಲಿಂಗ ಮತ್ತು ಶ್ರೀ ಕಾಶೀಕ್ಷೇತ್ರದ ಶ್ರೀ ವಿಶ್ವನಾಥಲಿಂಗಗಳಿಂದ ಅವತರಿಸಿ, ಶ್ರೀ ವೀರಶೈವ ಧರ್ಮವನ್ನು ಸಂಸ್ಥಾಪಿಸಿದ್ದಾರೆ. ಈ ಪಂಚಾಚಾರ್ಯರ ಸಂಕ್ಷಿಪ್ತ ಪರಿಚಯವನ್ನು ಕ್ರಮವಾಗಿ ಪರಿಶೀಲಿಸೋಣ.

## ಶ್ರೀ ರಂಭಾಪುರಿ ಪೀಠದ ಪರಂಪರೆ

೧. ಶ್ರೀ ಜಗದ್ಗುರು ರೇವಣಾರಾಧ್ಯ (ರೇವಣಸಿದ್ಧ)ರು ಃ

ಶ್ರೀ ಕೊಲನುಪಾಕದ (ಕೊಲ್ಲಿಪಾಕಿ) ಶ್ರೀ ಸೋಮೇಶ್ವರ ಶಿವಲಿಂಗದಿಂದ ಆವಿರ್ಭವಿಸಿದ ಶ್ರೀ ಜಗದ್ಗುರು ರೇವಣಾರಾಧ್ಯರು ಪ್ರತಿಯೊಂದು ಯುಗದಲ್ಲೂ ಅವತರಿಸುತ್ತಾ ಬಂದಿದ್ದಾರೆ. ಕೃತಯುಗದಲ್ಲಿ ಇವರಿಗೆ ಶ್ರೀ ಏಕಾಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ಶ್ರೀ ಏಕವಕ್ತ್ರ ಶಿವಾಚಾರ್ಯ, ದ್ವಾಪರಯುಗದಲ್ಲಿ ಶ್ರೀ ರೇಣುಕ ಶಿವಾಚಾರ್ಯ ಮತ್ತು ಕಲಿಯುಗದಲ್ಲಿ ಶ್ರೀ ರೇವಣಾರಾಧ್ಯ ಅಥವಾ ಶ್ರೀ ರೇವಣಸಿದ್ಧ ಎಂಬ ಹೆಸರುಗಳಿದ್ದವೆಂದು 'ಸುಪ್ರಭೇದಾಗಮಾಂತರ್ಗತ ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣ'ದ ಪುಟ-೨ರಲ್ಲಿ ಮತ್ತು 'ವೀರಶೈವ ಸದಾಚಾರ ಸಂಗ್ರಹ'ದ ಪ್ರಥಮ ಪ್ರಕರಣದಲ್ಲಿ ಪ್ರತಿಪಾದಿಸಲ್ಪಟ್ಟಿದೆ.

ಅಥ ತ್ರಿಲಿಂಗವಿಷಯೇ ಕುಲ್ಯಪಾಕಾಭಿದೇ ಸ್ಥಲೇ ।
ಸೋಮೇಶ್ವರ ಮಹಾಲಿಂಗಾತ್ ಪ್ರಾದುರಾಸೀತ್ ಸ ರೇಣುಕಃ ॥
(ಸಿ.ಶಿ. ೪-೧)

ಸಿದ್ಧಾಂತ ಶಿಖಾಮಣಿಯ ಈ ಉಕ್ತಿಗನುಸಾರವಾಗಿ ದ್ವಾಪರಯುಗದ ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯ ಭಗವತ್ಪಾದರು ಕೊಲ್ಲಿಪಾಕಿ ಕ್ಷೇತ್ರದ ಶ್ರೀ ಸೋಮೇಶ್ವರ ಮಹಾಲಿಂಗದಿಂದ ಪ್ರಾದುರ್ಭವಿಸಿ, ಮಲಯ ಪರ್ವತದಲ್ಲಿ ವಾಸಿಸುತ್ತಿದ್ದ ಮಹಾಮಹಿಮರಾದ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ವೀರಶೈವ ಸಿದ್ಧಾಂತವನ್ನು ಉಪದೇಶಿಸಿದರು. ಆ ಉಪದೇಶವನ್ನೇ ಶ್ರೀಶಿವಯೋಗಿ

ಶಿವಾಚಾರ್ಯರು ಸಂಗ್ರಹಿಸಿ ಬರೆದಿಟ್ಟಿದ್ದಾರೆ. ಆ ಸಂಗ್ರಹವೇ ಇಂದು "ಸಿದ್ಧಾಂತ ಶಿಖಾಮಣಿ" ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಈ ಆಚಾರ್ಯರು ಧರ್ಮಪ್ರಚಾರಕ್ಕಾಗಿ ಮಲಯ ಪರ್ವತದಲ್ಲಿಯೇ ಒಂದು ಪೀಠವನ್ನು ಸಂಸ್ಥಾಪಿಸಿದರು. ಅದು ಇಂದು 'ವೀರಸಿಂಹಾಸನ' ಇಲ್ಲವೇ 'ರಂಭಾಪುರೀ ಪೀಠ' ಎಂಬ ಹೆಸರಿನಿಂದ ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯಲ್ಲಿ ಸುಪ್ರಸಿದ್ಧವಾಗಿದೆ. ಈ ಪೀಠದ ಆಚಾರ್ಯರು ಶ್ರೀ ರೇಣುಕ ಶಾಖಾ ಮತ್ತು ವೀರಗೋತ್ರದ ಅಧಿಪತಿಗಳಾಗಿದ್ದಾರೆ.

ತಸ್ಯೇತಿ ವಚನಂ ಶ್ರುತ್ವಾ ರಾಕ್ಷಸೇಂದ್ರಸ್ಯ ಧೀಮತಃ ।
ತಥೇತಿ ಪ್ರತಿಸುಶ್ರಾವ ಸರ್ವಜ್ಞೋ ಗಣನಾಯಕಃ ॥
ತತ್ರ ಸಂತುಷ್ಟಚಿತ್ತಸ್ಯ ಪೌಲಸ್ತ್ಯಸ್ಯೇಷ್ಟ ಸಿದ್ಧಿಯೇ ।
ಕೋಟಿತ್ರಯಂ ತು ಲಿಂಗಾನಾಂ ಯಥಾಶಾಸ್ತ್ರಂ ಯಥಾವಿಧಿ ॥
ತ್ರಿಕೋಟ್ಯಾಚಾರ್ಯ ರೂಪೇಣ ಸ್ಥಾಪಿತಂ ತೇನ ತತ್ಕ್ಷಣೇ ।
(ಸಿ.ಶಿ.೨೧/೩೦-೩೧)

ಶ್ರೀ ಸಿದ್ಧಾಂತ ಶಿಖಾಮಣಿಯಲ್ಲಿಯ ಈ ಶ್ಲೋಕಗಳ ಆಧಾರದಿಂದ ಶ್ರೀ ಜಗದ್ಗುರು ರೇಣುಕಾಚಾರ್ಯರು ವಿಭೀಷಣನ ಪ್ರಾರ್ಥನಾನುಸಾರವಾಗಿ ಏಕಕಾಲದಲ್ಲಿಯೇ ಮೂರುಕೋಟಿ ಗುರುರೂಪವನ್ನು ಧರಿಸಿ, ಮೂರುಕೋಟಿ ಶಿವಲಿಂಗಗಳನ್ನು ಸಂಸ್ಥಾಪಿಸಿದರೆಂದು ತಿಳಿದುಬರುತ್ತದೆ.

ಯುದ್ಧಭೂಮಿಯಲ್ಲಿ ಶ್ರೀರಾಮಚಂದ್ರನ ಬಾಣಗಳಿಂದ ಆಹತನಾಗಿ ತನ್ನ ಪ್ರಾಣಬಿಡುವ ಪೂರ್ವದಲ್ಲಿ ರಾವಣನು–

ನವಕಂ ಕೋಟಿಲಿಂಗಾನಾಂ ಪ್ರತಿಷ್ಠಾಪ್ಯಮಿಹ ಸ್ಥಲೇ ।
ಇತಿ ಸಂಕಲ್ಪಿತಂ ಪೂರ್ವ ಮಯಾತದವಶಿಷ್ಯತೇ ॥
ಕೋಟಿಷಟ್ಕಂ ತು ಲಿಂಗಾನಾಂ ಮಯಾ ಸಾಧು ಪ್ರತಿಷ್ಠಿತಂ ।
ಕೋಟಿತ್ರಯಂ ತು ಲಿಂಗಾನಾಂ ಸ್ಥಾಪನೀಯಮತಸ್ತ್ವಯಾ ॥
(ಸಿ.ಶಿ. ೨೧/೨೪–೨೫)

"ಹೇ ತಮ್ಮನಾದ ಪ್ರಿಯ ವಿಭೀಷಣನೇ! ಒಂಭತ್ತು ಕೋಟಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಬೇಕೆಂದು ನಾನು ಸಂಕಲ್ಪವನ್ನು ಮಾಡಿ ಆರು ಕೋಟಿ ಶಿವಲಿಂಗಗಳನ್ನು ಸಂಸ್ಥಾಪಿಸಿದ್ದೇನೆ. ಆದರೆ ನನ್ನ ಸಂಕಲ್ಪದ ಪ್ರಕಾರ ಇನ್ನೂ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸುವುದಿದೆ. ಅವುಗಳನ್ನು ನೀನು ಪ್ರತಿಷ್ಠಾಪಿಸು" ಎಂಬುದಾಗಿ ಹೇಳಿ ಅಸುನೀಗಿದನು.

ಅಣ್ಣನ ಸಂಕಲ್ಪವನ್ನು ಪೂರ್ಣ ಮಾಡುವುದು ಹೇಗೆಂದು ಬಹುದಿನಗಳಿಂದ ವಿಭೀಷಣನು ಚಿಂತಿಸುತ್ತಿರುವಾಗ, ಅವನ ಪುಣ್ಯವೇ ಮೂರ್ತಿರೂಪ ತಾಳಿ ಬಂದಂತೆ ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಲಂಕೆಗೆ ಬರುತ್ತಾರೆ. ಆಕಾಶಮಾರ್ಗವಾಗಿ ಬಂದ ಅವರ ಮಹಿಮೆಯನ್ನರಿತ ವಿಭೀಷಣನು ವಿಧಿವತ್ತಾಗಿ ಅವರ ಪಾದಪೂಜೆಯನ್ನು ಮಾಡಿ, ತನ್ನ ಅಣ್ಣನ ಸಂಕಲ್ಪವನ್ನು ನಿವೇದಿಸಿಕೊಂಡಾಗ, ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಅದೇ ಕ್ಷಣದಲ್ಲಿ ಮೂರುಕೋಟಿ ಆಚಾರ್ಯರ ರೂಪವನ್ನು ಧರಿಸಿ, ಶಿವಲಿಂಗಗಳನ್ನು ಏಕಕಾಲದಲ್ಲಿಯೇ ಸ್ಥಾಪಿಸಿ, ವಿಭೀಷಣನಿಗೆ ಅಭಯ, ಆಶೀರ್ವಾದಗಳನ್ನಿತ್ತು, ಕೆಲವು ದಿವಸ ಗುಪ್ತವಾಗಿಯೂ ಮತ್ತೆ ಕೆಲವು ದಿವಸ ಪ್ರಕಟವಾಗಿಯೂ ಭೂಮಂಡಲದಲ್ಲೆಲ್ಲ ಸಂಚರಿಸಿ ತಾವು ಅವತರಿಸಿದ ಕಾರ್ಯವು ಪೂರ್ಣವಾದೊಡನೆ ಪುನಃ ಕೊಲ್ಲಿಪಾಕಿ ಕ್ಷೇತ್ರಕ್ಕೆ ದಯಮಾಡಿಸಿ ಅದೇ ಸೋಮೇಶ್ವರ ಶಿವಲಿಂಗದಲ್ಲಿಯೇ ಲೀನವಾದರು.

ಶ್ರೀ ಜಗದ್ಗುರು ರೇಣುಕ ಭಗವತ್ಪಾದರು ಲಂಕೆಗೆ ಹೋಗಿ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಿದ ವಿಷಯ ಕಾಲ್ಪನಿಕ ಪೌರಾಣಿಕ ಕಥೆಯಲ್ಲ. ಸಿಂಹಳದ ಜಾಫ್ನಾದಿಂದ ೧೫ ಕಿ.ಮೀ. ದೂರವಿರುವ "ಕಿರುಮಲಾಯ್" ಎಂಬ ಗ್ರಾಮದಲ್ಲಿ ಈಗಲೂ ಇರುವ "ರೇಣುಕಾಶ್ರಮ" ಮತ್ತು "ರೇಣುಕವನ" ಮಠಗಳು ಹಾಗೂ ಅಲ್ಲಿರುವ ನೂರಾರು ವೀರಶೈವರ ಮನೆತನಗಳು ಐತಿಹಾಸಿಕ ಘಟನೆಯ ಪ್ರತ್ಯಕ್ಷ ನಿದರ್ಶನಗಳಾಗಿವೆ.

ಬೆಂಗಳೂರಿನ ದಾರುಕಾಚಾರ್ಯ ಆಶ್ರಮದ ಶ್ರೀ ವೇ. ವೀರಯ್ಯ ಸ್ವಾಮಿ ಶಾಸ್ತ್ರಿಮಠ ಇವರು ೧೯೬೯ನೇ ಜೂನ್ ತಿಂಗಳಲ್ಲಿ ಸಿಂಹಳಕ್ಕೆ ಹೋಗಿ, ಅಲ್ಲಿಯ ರೇಣುಕಾಶ್ರಮ, ರೇಣುಕವನ ಹಾಗೂ ತಾನಕೇಸಂತುರೈಯಲ್ಲಿಯ ಶ್ರೀ ಗುರು ವೀರಭದ್ರ ದೇವಾಲಯಗಳ ಸಂದರ್ಶನವನ್ನು ಮಾಡಿ, ಅಲ್ಲಿಯ ಅನೇಕ ವೀರಶೈವರ ಜೊತೆ ಸಂದರ್ಶನ ಮಾಡಿ ಅಲ್ಲಿಂದ ಬರುವಾಗ ತಾಮ್ರಪಟದಲ್ಲಿ ಚಿತ್ರಿತವಾದ ಶ್ರೀ ಜಗದ್ಗುರು ರೇಣುಕಾಚಾರ್ಯರ ಲಿಂಗೋದ್ಭವ ಮೂರ್ತಿಯನ್ನು ತಂದಿರುವ ವಿಷಯಗಳು ನಿಜವಾಗಿಯೂ ಇತಿಹಾಸತಜ್ಞರ ಜಿಜ್ಞಾಸೆಯನ್ನು ಕೆರಳಿಸದೆ ಇರಲಾರವು.

ಶ್ರೀಮದ್ರೇವಣಸಿದ್ಧಸ್ಯ ಕುಲ್ಯಪಾಕಪುರೋತ್ತಮೇ ।
ಸೋಮೇಶಲಿಂಗಾಜ್ಜನನಮಾವಾಸಃ ಕದಲೀಪುರೇ ॥

ಎಂಬ ಸ್ವಾಯಂಭುವ ಆಗಮದ ಪ್ರಮಾಣಾನುಸಾರವಾಗಿ ಶ್ರೀ ಜಗದ್ಗುರು ರೇಣುಕಾಚಾರ್ಯರೇ ಪುನಃ ಕಲಿಯುಗದ ಆರಂಭದಲ್ಲಿ ಶ್ರೀ ಜಗದ್ಗುರು ರೇವಣಸಿದ್ಧರೆಂಬ ಹೆಸರಿನಿಂದ ಅವತರಿಸಿ, ೧೪೦೦ ವರ್ಷಗಳವರೆಗೆ ವೀರಶೈವರ ತತ್ತ್ವೋಪದೇಶವನ್ನು ಮಾಡುತ್ತ ಅನಂತಲೀಲೆಗಳನ್ನು ಮಾಡಿದ್ದಾರೆ. ಇವರೇ ಶ್ರೀ ಜಗದ್ಗುರು ಆದಿಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗ ಹಾಗೂ ರತ್ನಗರ್ಭ ಗಣಪತಿಯನ್ನು ದಯಪಾಲಿಸಿ ಅನುಗ್ರಹಿಸಿದ್ದಾರೆ.

ಆದಿಶಂಕರರ ಚರಿತ್ರೆಯನ್ನು ಪ್ರತಿಪಾದಿಸುವ ಅನೇಕ ಗ್ರಂಥಗಳಲ್ಲಿ ಗುರುವಂಶ ಕಾವ್ಯವೂ ಒಂದಾಗಿದೆ. ಇದು ಶೃಂಗೇರಿ ಪೀಠದ ಆಸ್ಥಾನ ವಿದ್ವಾಂಸರಾದ ಪಂಡಿತ ಕಾಶೀ ಲಕ್ಷ್ಮಣ ಶಾಸ್ತ್ರಿಗಳಿಂದ ವಿರಚಿತವಾಗಿದೆ. ಇದು ವಾಣೀವಿಲಾಸ ಮುದ್ರಣಾಲಯ ಶ್ರೀರಂಗಂ ದಿಂದ ಮುದ್ರಿತವಾಗಿದೆ. ಈ ಪುಸ್ತಕದಲ್ಲಿ–

ಶ್ರೀಚಂದ್ರಮೌಳೀಶ್ವರಲಿಂಗಮಸ್ಮೈ ಸದ್ರತ್ನಗರ್ಭಂ ಗಣನಾಯಕಂ ಚ।
ಸ ವಿಶ್ವರೂಪಾಯ ಸುಸಿದ್ಧದತ್ತಂ ದತ್ವಾನ್ಯಗಾದೀಚ್ಚಿರಮರ್ಚಯೇತಿ ॥
(ಗುರುವಂಶ ಕಾವ್ಯ ೩–೩೩)

ಶ್ರೀ ಜಗದ್ಗುರು ಆದಿಶಂಕರಾಚಾರ್ಯರು ಶೃಂಗೇರಿಯಿಂದ ಕಾಂಚಿಗೆ ಬರುವ ಸಮಯದಲ್ಲಿ ತಮ್ಮ ಮೊದಲನೆಯ ಶಿಷ್ಯರಾದ ಶ್ರೀ ಸುರೇಶ್ವರಾಚಾರ್ಯರನ್ನು ಕರೆದು ಶ್ರೀ ರೇವಣಸಿದ್ಧ ಶಿವಯೋಗಿಗಳಿಂದ ಪ್ರಾಪ್ತವಾದ ಶ್ರೀ ಚಂದ್ರಮೌಳೀಶ್ವರಲಿಂಗ ಮತ್ತು ರತ್ನಗರ್ಭ

ಗಣಪತಿಯನ್ನು ಅವರಿಗೆ ಅರ್ಪಿಸಿ, ಅವುಗಳನ್ನು ಪೂಜಿಸುವ ಹೊಣೆಯನ್ನು ಹೊರಿಸಿದರು ಎಂಬ ವಿಷಯವು ಪ್ರತಿಪಾದಿಸಲ್ಪಟ್ಟಿದೆ. ಮೇಲೆ ಹೇಳಿದ ಈ ಶ್ಲೋಕದ ವ್ಯಾಖ್ಯಾನವನ್ನು ಬರೆಯುವಾಗ ಗ್ರಂಥಕಾರರೇ "ಸುಸಿದ್ಧದತ್ತಂ ಸುಸಿದ್ಧೇನ ರೇವಣಸಿದ್ಧ ಮಹಾಯೋಗಿನಾ ದತ್ತಂ ಶ್ರೀ ಚಂದ್ರಮೌಳೀಶ್ವರಲಿಂಗಮ್" ಎಂದು ಇಲ್ಲಿ 'ಸುಸಿದ್ಧ' ಶಬ್ದದ ಅರ್ಥವನ್ನು ರೇವಣಸಿದ್ಧ ಮಹಾಯೋಗಿ ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ. ಆದ್ದರಿಂದ ಇಂದಿನವರೆಗೆ ಶ್ರೀ ಶೃಂಗೇರಿ ಪೀಠದಲ್ಲಿ ಪೂಜೆಗೊಳ್ಳುತ್ತಿರುವ ಶ್ರೀ ಚಂದ್ರಮೌಳೀಶ್ವರಲಿಂಗವು ವೀರಶೈವ ಶಿವಾಚಾರ್ಯರಾದ ಶ್ರೀ ರೇವಣಸಿದ್ಧರಿಂದ ಕೊಡಲ್ಪಟ್ಟದ್ದೆಂದು ತಿಳಿದುಬರುತ್ತದೆ.

ಕಾಶಿಯ ಸರ್ವಶ್ರೇಷ್ಠ ವಿದ್ವಾಂಸರೂ, ಅನೇಕ ಗ್ರಂಥರಚನಾಕಾರರೂ ಆದ ಪಂ. ಬಲದೇವ ಉಪಾಧ್ಯಾಯರು ಹಿಂದೀ ಭಾಷೆಯಲ್ಲಿ ಶಂಕರ ದಿಗ್ವಿಜಯವನ್ನು ಬರೆದಿದ್ದಾರೆ. ಇವರ ಪುಸ್ತಕದ ಪರಿಶಿಷ್ಟ (ಕ) ಪುಟ–೫೮೮ರಲ್ಲಿ 'ಗುರುವಂಶ ಕಾವ್ಯ'ದಲ್ಲಿ ಬಂದಿರುವ ಈ ವಿಷಯವನ್ನು ಚರ್ಚಿಸಿ ಸಚ್ಚಿದಾನಂದ ಭಾರತೀಮುನೀಂದ್ರರೆಂಬ ಶ್ರೀ ಶೃಂಗೇರಿ ಪೀಠದ ಆಚಾರ್ಯರು ಕಾಶೀ ಲಕ್ಷ್ಮಣ ಶಾಸ್ತ್ರಗಳಿಂದ ತಮ್ಮ ಪೀಠ ಪರಂಪರೆಯನ್ನು ಬರೆಸಿರುವುದರಿಂದ ಇದರಲ್ಲಿ ಶ್ರೀ ರೇವಣಸಿದ್ಧರಿಂದ ಆದಿಶಂಕರರಿಗೆ ಕೊಡಮಾಡಿದ ಶ್ರೀಚಂದ್ರಮೌಳೀಶ್ವರಲಿಂಗದ ವಿಷಯವು ಸತ್ಯವಾದದ್ದು ಎಂಬುದಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಇದೂ ಅಲ್ಲದೆ ನಿಟ್ಟೂರು ನಂಜನಾಚಾರ್ಯರು, 'ವೇದಾಂತಸಾರ ವೀರಶೈವ ಚಿಂತಾಮಣಿ' ಎಂಬ ಗ್ರಂಥದ ಪ್ರಾರಂಭದಲ್ಲಿ–

ಶಂಕರಾಚಾರ್ಯ ಸನ್ನಾಮ ಯೋಗೀಂದ್ರಾಯ ಮಹೋಜ್ಜ್ವಲಮ್ ।
ಚಂದ್ರಮೌಳೀಶ್ವರಂ ಲಿಂಗಂ ದತ್ತವಾನಿತಿ ವಿಶ್ರುತಮ್ ॥

ಶ್ರೀ ರೇಣುಕ ಗಣೇಶಾಖ್ಯಂ ರೇವಣಾಸಿದ್ಧದೇಶಿಕಮ್ ।
ವೀರಶೈವ ಮತಾಚಾರ್ಯಂ ವಂದೇಹಂ ತಂ ಜಗದ್ಗುರುಮ್ ।

ಎಂಬ ಮಂಗಲಶ್ಲೋಕಗಳಲ್ಲಿ ಶ್ರೀ ರೇಣುಕಾಚಾರ್ಯರ ದ್ವಿತೀಯ ಅವತಾರಿಗಳಾದ ಶ್ರೀರೇವಣಸಿದ್ಧರಿಂದ ಆದಿಶಂಕರರಿಗೆ ಶ್ರೀ ಚಂದ್ರಮೌಳೀಶ್ವರಲಿಂಗವು ಪ್ರಾಪ್ತವಾಗಿತ್ತೆಂಬುದು ಪ್ರತಿಪಾದಿಸಲ್ಪಟ್ಟಿದೆ.

ಇದೂ ಅಲ್ಲದೆ ಪುಣೆಯಿಂದ ಮರಾಠಿ ಭಾಷೆಯಲ್ಲಿ ಪ್ರಕಾಶಿತವಾದ "ಮಧ್ಯಯುಗೀನ ಚರಿತ್ರ ಕೋಶ" ಎಂಬ ಪುಸ್ತಕದ ೭೧೪ನೇ ಪುಟದಲ್ಲಿ "ರೇವಣಸಿದ್ಧ – ಯಾನೇ ಶಂಕರಾಚಾರ್ಯಾನಾ ಚಂದ್ರಮೌಳೀಶ್ವರಲಿಂಗ ದಿಲೇ ಅಸ್ತೀ ಪ್ರಸಿದ್ಧಿ ಆಹೇ. ಹೇ ಶಂಕರಾಚಾರ್ಯ ಮ್ಹಣಜೇ ಆದ್ಯ ಶಂಕರಾಚಾರ್ಯ ಹೋತ. ಹಾ ಜಾತಿನೇ ಜಂಗಮ ಹೋತಾ" – ಅಂದರೆ ಆದ್ಯ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರ ಲಿಂಗವನ್ನು ಕೊಟ್ಟ ಶ್ರೀ ರೇವಣಸಿದ್ಧರು ಜಂಗಮರಿದ್ದರು ಎಂದು ಹೇಳಲ್ಪಟ್ಟಿದೆ.

ಶ್ರೀ ವೃಷಭೇಂದ್ರ ಪಂಡಿತರಿಂದ ವಿರಚಿತವಾದ ಮಹಾ ನಾರಾಯಣೋಪನಿಷತ್ತಿನ ಭಾಷ್ಯದಲ್ಲಿ "ಕೇಚಿತ್ತು.......ರೇವಣಸಿದ್ಧ ಮರುಳಸಿದ್ಧೈಕೋ ರಾಮಸಿದ್ಧ ಪಂಡಿತಾರಾಧ್ಯಾದಯಃ ಸಹಸ್ರಶೀರ್ಷಂ ದೇವಮಿತ್ಯಾದಿ ಪರಶಿವ ಧರ್ಮಾಣಾಂ ನಾರಾಯಣಾತ್ಮಕವಿಷ್ಣೋಃ ಪ್ರತಿಪಾದನೇಪಿ ಏತದನುವಾಕ್ಯಸ್ಯ ಶಿವಪರತ್ವೇನ ಕಿಂಚಿದಪಿ ದೋಷಃ" (ಪುಟ–೬೫) ಈ ರೀತಿಯಾಗಿ ಶ್ರೀರೇವಣಸಿದ್ಧಾದಿ ಪಂಚಾಚಾರ್ಯರ ಹೆಸರುಗಳನ್ನು ಉಲ್ಲೇಖಿಸಿರುವುದರಿಂದ ಶ್ರೀ ರೇವಣಸಿದ್ಧರು ವೇದಮಂತ್ರಗಳಿಗೆ ಭಾಷ್ಯವನ್ನು ಬರೆದಿದ್ದಾರೆಂದು ತಿಳಿದುಬರುತ್ತದೆ.

ಶ್ರೀ ಜಗದ್ಗುರು ರೇವಣಸಿದ್ಧರು ತಂತ್ರ–ಮಂತ್ರಾದಿ ಸಕಲ ವಿದ್ಯೆಗಳಲ್ಲಿ ಸಿದ್ಧಿಯನ್ನು ಪಡೆದವರಾಗಿದ್ದರಿಂದ ಪ್ರಖ್ಯಾತ ರಸಸಿದ್ಧರಾದ ನವನಾಥರಲ್ಲಿ ಇವರು ಅಗ್ರಗಣ್ಯರಾಗಿದ್ದರು.

ಕ್ರಿ.ಶ. ೬೫೦ರಿಂದ ಕ್ರಿ.ಶ. ೧೯೪೧ರ ವರೆಗೆ ವಿರಚಿಸಲ್ಪಟ್ಟ ೧೯ ಸಂಸ್ಕೃತ, ೩೨ ಕನ್ನಡ, ೮ ತೆಲುಗು, ೫ ಮರಾಠಿ, ೧ ಹಿಂದೀ ಹಾಗೂ ೪ ಇಂಗ್ಲೀಷ್ – ಹೀಗೆ ಒಟ್ಟು ೬೯ ಗ್ರಂಥಗಳಲ್ಲಿ ಶ್ರೀ ರೇವಣಸಿದ್ಧರ ಚರಿತ್ರೆ ಹಾಗೂ ಲೀಲೆಗಳು ವರ್ಣಿಸಲ್ಪಟ್ಟಿವೆ. ಇದರಿಂದ ಇವರ ಮಹಿಮೆಯು ತಿಳಿದುಬರುತ್ತದೆ. ಇವರು ತಮ್ಮ ಲೀಲೆಯನ್ನು ಪೂರ್ಣಗೊಳಿಸುವ ಮುನ್ನ ಶ್ರೀ ಜಗದ್ಗುರು ರುದ್ರಮುನೀಶ್ವರರಿಗೆ ಪಟ್ಟಾಭಿಷೇಕವನ್ನು ಮಾಡಿ ಪುನಃ ಕೊಲ್ಲಿಪಾಕಿಯ ಸೋಮೇಶ್ವರ ಲಿಂಗದಲ್ಲಿಯೇ ಲೀನರಾದರು.

ಹೀಗೆ ಈ ಪೀಠ ಪರಂಪರೆಯಲ್ಲಿ ಶ್ರೀ ರುದ್ರಮುನೀಶ್ವರರ ನಂತರ ಶ್ರೀ ಮುಕ್ತಿಮುನೀಶ್ವರ, ದಿಗಂಬರ ಮುಕ್ತಿಮುನೀಶ್ವರ ಮುಂತಾಗಿ ೨೮ ಪೀಠಾಚಾರ್ಯರ ನಂತರ ಪುನಃ ೨೯ನೇ ಪೀಠಾಚಾರ್ಯರಾಗಿ ಶ್ರೀ ಜಗದ್ಗುರು ರೇವಣಸಿದ್ಧೇಶ್ವರ ಎಂಬ ಹೆಸರಿನವರು ಅಧಿಕಾರವನ್ನು ವಹಿಸಿಕೊಳ್ಳುತ್ತಾರೆ. ಇವರು ಕ್ರಿ.ಶ. ೧೦೦೦ದಿಂದ ೧೧೫೭ರ ಮಧ್ಯದಲ್ಲಿ ಆಗಿರುವುದಾಗಿ ತಿಳಿದುಬರುತ್ತದೆ.

ಇವರು ಮಾಡಿದ ಲೀಲೆಗಳು ಅನಂತವಾಗಿವೆ. ಅವುಗಳಲ್ಲಿ ಮಾಸನೂರಿನ ಯಕ್ಷಮಿಥುನಗಳ ಉದ್ಧಾರ, ವಿಕ್ರಮಾದಿತ್ಯನಿಗೆ ಖಡ್ಗಪ್ರದಾನ, ಬಿಜ್ಜಳನಿಗೆ ಖಡ್ಗಪ್ರದಾನ, ೧೨ ಸಾವಿರ ಕನ್ಯೆಯರ ಬಂಧವಿಮೋಚನೆ, ಕಲ್ಯಾಣದ ಬಳಿ ತ್ರಿಪುರಾಂತಕೇಶ್ವರ ಕೆರೆಯ ನಿರ್ಮಾಣ ಹಾಗೂ ಸೊನ್ನಲಿಗೆಯ ಶ್ರೀ ಸುಗ್ಗಲಾದೇವಿಗೆ ಪುತ್ರಾನುಗ್ರಹ – ಇವೇ ಮೊದಲಾದವುಗಳು ಪ್ರಮುಖವಾಗಿವೆ.

ಇವರು ಸಂಚರಿಸಿದ ಸ್ಥಳಗಳಲ್ಲೆಲ್ಲ ಇವರ ಹೆಸರಿನ ದೇವಾಲಯಗಳು ಇಂದಿಗೂ ಜ್ವಾಜ್ವಲ್ಯಮಾನವಾಗಿ ಉಳಿದಿವೆ. ಇವುಗಳಲ್ಲಿ ಬೆಂಗಳೂರು ಜಿಲ್ಲಾ ರಾಮನಗರ ತಾಲೂಕಿನ ರೇವಣಸಿದ್ಧೇಶ್ವರ ಬೆಟ್ಟ, ಶಿವಾಗಂಗಾ ಕ್ಷೇತ್ರದಲ್ಲಿಯ ರೇವಣಸಿದ್ಧ ದೇವಾಲಯ, ತುಮಕೂರು ಜಿಲ್ಲೆಯ ಸಿದ್ಧರಬೆಟ್ಟ, ಗುಲಬರ್ಗಾ ಜಿಲ್ಲೆಯ ರಟಗಲ್ಲ ರೇವಣಸಿದ್ಧೇಶ್ವರ, ಸೊಲ್ಲಾಪುರದ ರೇವಣಸಿದ್ಧೇಶ್ವರ ದೇವಾಲಯ, ರೇಣಾವಿಯ ರೇವಣಸಿದ್ಧೇಶ್ವರ ಮತ್ತು ಮಾಸನೂರು, ಮಂಗಳವೇಢೆಗಳ ರೇವಣಸಿದ್ಧೇಶ್ವರ ದೇವಸ್ಥಾನಗಳು ಪ್ರಮುಖಗಳಾಗಿವೆ.

ಇದೇ ಪ್ರಕಾರ ಪುನಃ ಈ ಪೀಠಕ್ಕೆ ಸುಮಾರು ೧೩ನೇ ಶತಮಾನದಲ್ಲಿ ಮತ್ತೊಬ್ಬ ರೇವಣಸಿದ್ಧರು ಪೀಠಾಚಾರ್ಯರಾಗಿದ್ದಾರೆ. ಇವರಿಗೆ ಕಾಡಸಿದ್ಧೇಶ್ವರ ಎಂಬ ಹೆಸರು ಪರ್ಯಾಯ ನಾಮವಾಗಿತ್ತೆಂದು ತಿಳಿದುಬರುತ್ತದೆ. ರಂಭಾಪುರಿ ಪೀಠಾಚಾರ್ಯರಲ್ಲೊಬ್ಬರಾದ ಶ್ರೀ ರುದ್ರಮುನಿಗಳು ಕಾಲಜ್ಞಾನವನ್ನು ಬರೆದಿದ್ದಾರೆ. ಅದು ಈಗಲೂ 'ರುದ್ರಮುನಿ ಕಾಲಜ್ಞಾನ'ವೆಂದು ಸುಪ್ರಸಿದ್ಧವಾಗಿದೆ.

ಹೀಗೆ ಅನಾದಿ ಪರಂಪರೆಯಿಂದ ಬಂದ ಈ ಪೀಠಕ್ಕೆ ಅನೇಕ ಜನ ಪೀಠಾಚಾರ್ಯರು

ಆಗಿಹೋಗಿದ್ದಾರೆ. ಬಹಳ ಜನ ಆಚಾರ್ಯರ ಚರಿತ್ರೆಗಳು ಕಾಲಗರ್ಭದಲ್ಲಿ ಅಡಗಿಹೋಗಿರುವುದರಿಂದ ಎಲ್ಲರ ಜೀವನ ಘಟನೆಗಳನ್ನು ಸಮಯೋಲ್ಲೇಖಪೂರ್ವಕ ಚಿತ್ರಿಸುವುದು ಕಷ್ಟವಾಗಿ ತೋರುತ್ತದೆ. ಈ ಪೀಠದ ಪರಂಪರೆಯಲ್ಲಿ ಇಲ್ಲಿಯವರೆಗೆ ೧೨೦ ಜಗದ್ಗುರುಗಳು ಆಗಿಹೋಗಿದ್ದಾರೆ.

ಮೈಸೂರಿನ ಮಹಾರಾಜರು ಈ ಪೀಠದ ಆಚಾರ್ಯರಲ್ಲಿ ಅನನ್ಯ ಶ್ರದ್ಧಾ ಭಕ್ತಿಯುಳ್ಳವರಾಗಿದ್ದರು. ಈ ಪೀಠದ ೧೧೩ನೇ ಆಚಾರ್ಯರಾದ ಶ್ರೀ ೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳ ಕಾಲದಲ್ಲಿ ಅಂದಿನ ಮಹಾರಾಜರಾದ ಶ್ರೀ ಚಾಮರಾಜ ಒಡೆಯರ್ ಮಹಾಪ್ರಭುಗಳು ಶಾ.ಶ. ೧೮೦೮ ಪಾರ್ಥಿವನಾಮ ಸಂವತ್ಸರ ಕಾರ್ತಿಕ ಬ॥ ೧೧ ಬುಧವಾರ (ದಿ॥೨೧-೧೨-೧೮೮೫) ದಿವಸ ಪೀಠಕ್ಕೆ ಬಂದು ಮಹಾಸನ್ನಿಧಿಯ ದರ್ಶನಾಶೀರ್ವಾದವನ್ನು ಪಡೆದ ಉಲ್ಲೇಖವಿದೆ. ಮುಂದೆ ಶ್ರೀ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯರು ೧೧೪ನೆಯ ಮತ್ತು ಜಗದ್ಗುರು ಗುರು ವೃಷಭರಾಜೇಂದ್ರ ಶಿವಾಚಾರ್ಯರು ೧೧೫ನೆಯ ಪೀಠಾಧ್ಯಕ್ಷರಾಗಿದ್ದರು.

ಈ ಪೀಠದ ೧೧೬ನೇ ಜಗದ್ಗುರುಗಳಾಗಿದ್ದ ಶ್ರೀ ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ೧೯೧೮ನೇ ಮಾರ್ಚ್ ತಿಂಗಳಲ್ಲಿ ಕಾಶೀ ಪೀಠದಲ್ಲಿ ನೆರವೇರಿದ ಪಂಚಾಚಾರ್ಯರ ಸಮ್ಮೇಳನದಲ್ಲಿ ಭಾಗಿಗಳಾಗಿ ಮಹತ್ತ್ವಪೂರ್ಣವಾದ ಠರಾವುಗಳನ್ನು ಮಂಡಿಸಿದರು. ಇವರು ತಮ್ಮ ಅಂತ್ಯಕಾಲದಲ್ಲಿ ಉತ್ತರಾಧಿಕಾರಿಯನ್ನು ನೇಮಿಸದೇ ಲಿಂಗೈಕ್ಯರಾದ ಕಾರಣ, ಸಮಾಜದಲ್ಲಿ ಕಲಹ ಉತ್ಪನ್ನವಾಗಿ ಕೆಲಕಾಲ ಈ ಪೀಠವು ಅನಾಯಕವಾಗಿಯೇ ಉಳಿಯಿತು. ಮುಂದೆ ಉಜ್ಜಯಿನಿ ಪೀಠದ ಶ್ರೀ ಸಿದ್ಧಲಿಂಗ ಜಗದ್ಗುರುಗಳವರ ತಪಸ್ಸು, ಶೃಂಗೇರಿ ಪೀಠದ ಜಗದ್ಗುರುಗಳ ಸಹಾಯ ಮತ್ತು ಲಿಂ। ಪಂ। ಕಾಶೀನಾಥ ಶಾಸ್ತ್ರಿಗಳ ಪ್ರಯತ್ನದ ಫಲವಾಗಿ ಬಳ್ಳಾರಿ ಜಿಲ್ಲಾ ಹಿರೇಹಾಳು ಹಿರೇಮಠದ ಶ್ರೀ ಸಿದ್ಧೇಶ್ವರ ಶಾಸ್ತ್ರಿ ಮತ್ತು ಸೌ॥ ಸಿದ್ಧವೀರಮ್ಮನವರ ಪುತ್ರರತ್ನರಾಗಿ ಜನಿಸಿದ (ಶಾ.ಶ. ೧೮೧೨ ವಿಕೃತಿನಾಮ ಸಂವತ್ಸರ, ಶ್ರಾವಣ ಶು॥೨), ಕಾಶೀಯಲ್ಲಿ ವ್ಯಾಕರಣ ತೀರ್ಥ ಪಧವೀಧರರಾಗಿ ಜಂಗಮವಾಡಿಮಠದ ಕಾರಭಾರಿಗಳಾಗಿ ಅನೇಕ ದಿನ ಸೇವೆ ಸಲ್ಲಿಸಿದ ಪಂ॥ ಸದಾಶಿವ ಶಾಸ್ತ್ರಿಗಳು, ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಅಮೃತಹಸ್ತದಿಂದ ಶಾ.ಶ. ೧೮೪೭ನೇ ಕ್ರೋಧನನಾಮ ಸಂವತ್ಸರ, ಮಾರ್ಗಶೀರ್ಷ ಶು॥೬ (ದಿ॥ ೨೨-೧೧-೧೯೨೫)ರಂದು ಶ್ರೀ ರಂಭಾಪುರೀ ಪೀಠದ ಅಧಿಕಾರವನ್ನು ಸ್ವೀಕರಿಸಿ ಶ್ರೀ ೧೦೦೮ ಜಗದ್ಗುರು ಅಭಿನವ ರೇಣುಕ ಶಿವಾನಂದರಾಜೇಂದ್ರ ಶಿವಾಚಾರ್ಯರೆಂಬ ನೂತನ ಅಭಿಧಾನದಿಂದ ಶೋಭಾಯಮಾನರಾದರು.

ಅತಿ ಜೀರ್ಣಾವಸ್ಥೆಯಲ್ಲಿದ್ದ ಶ್ರೀ ರಂಭಾಪುರೀ ಪೀಠವು ಇವರ ಕಾಲದಲ್ಲಿ ಪುನಃಶ್ಚೇತನಗೊಂಡು ರಾಜವೈಭವವನ್ನು ಪಡೆಯಿತು. ಯಾಲಕ್ಕಿ, ಕಾಫಿ, ಅಡಿಕೆ ಬೆಳೆಯುವ ಭೂಮಿಯು ಇವರ ಕಾಲದಲ್ಲಿ ಸಂಪಾದಿಸಲ್ಪಟ್ಟಿತು. ದಿ॥ ೩೦-೧೧-೧೯೩೧ರಂದು ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರ್ ಮಹಾಪ್ರಭುಗಳು ಪೀಠಕ್ಕೆ ಬಂದು ದರ್ಶನಾಶೀರ್ವಾದವನ್ನು ಪಡೆದುಹೋಗಿದ್ದಾರೆ. ಶಾಲಿವಾಹನ ಶಕೆ ೧೮೫೬ ಭಾವನಾಮ ಸಂವತ್ಸರ ಭಾದ್ರಪದ ಶು॥೧೧ ಗುರುವಾರ ದಿವಸ ಮೈಸೂರಿನ ಶ್ರೀ ಕೃಷ್ಣರಾಜ ಮಹಾಪ್ರಭುಗಳು ಶ್ರೀ ಮಹಾಸನ್ನಿಧಿಯವರನ್ನು ತಮ್ಮ ಅರಮನೆಗೆ ಬರಮಾಡಿಕೊಂಡು ತೀರ್ಥಪ್ರಸಾದವನ್ನು ಸ್ವೀಕರಿಸಿದ ವಿಷಯವು ಗಮನಾರ್ಹವಾಗಿದೆ; ಇದು ಶ್ರೀ ಸನ್ನಿಧಿಯ ಪ್ರಭಾವದ ಪ್ರತೀಕವಾಗಿದೆ.

ಶ್ರೀ ರಂಭಾಪುರೀ ಪೀಠದ ಗುರುಪರಂಪರೆಯಲ್ಲಿ ಶ್ರೀ ೧೦೦೮ ಜಗದ್ಗುರು ಅಭಿನವ ರೇಣುಕ ಶಿವಾನಂದರಾಜೇಂದ್ರ ಮಹಾಸ್ವಾಮಿಗಳ ಚರಿತ್ರೆಯು ಪರಮ ಪಾವನವಾಗಿದೆ. ದಿ॥ ೧೬-೨-೧೯೪೧ರಂದು ಮೈಸೂರಿನ ಜಯಚಾಮರಾಜ ಒಡೆಯರ್ ಮಹಾಪ್ರಭುಗಳು ಸಹ ಪೀಠಕ್ಕೆ ಬಂದು ದರ್ಶನಾಶೀರ್ವಾದ ಪಡೆದುಹೋಗಿದ್ದಾರೆ. ಇವರು ಸುಮಾರು ೨೧ ವರ್ಷ ಅಖಂಡವಾಗಿ ಪೀಠ ಹಾಗೂ ಸಮಾಜೋದ್ಧಾರಕ್ಕಾಗಿ ಶ್ರಮಿಸಿ ದಿ॥ ೧-೯-೧೯೪೭ ಗುರುವಾರ ಲಿಂಗೈಕ್ಯರಾದರು.

ಅನಂತರ ೧೧೯ನೇ ಪೀಠಾಧ್ಯಕ್ಷರಾಗಿ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡರು. ಇವರು ಧಾರವಾಡ ಜಿಲ್ಲಾ ಹುಬ್ಬಳ್ಳಿ ತಾಲ್ಲೂಕಿನ ಪಾಲಿಕೊಪ್ಪದ ಹಿರೇಮಠದ ಶ್ರೀ ಅಡಿವೆಯ್ಯ ಹಾಗೂ ಸೌ॥ ಸಿದ್ಧಮ್ಮನವರ ಪವಿತ್ರ ಗರ್ಭದಲ್ಲಿ ದಿ॥೮-೪-೧೯೦೩ರಂದು ಜನಿಸಿದರು. ಸೊಲ್ಲಾಪುರದ ವಾರದ ಸಂಸ್ಕೃತ ಪಾಠಶಾಲೆಯಲ್ಲಿ ಪಂ। ಜಗದೀಶ ಶಾಸ್ತ್ರಿಗಳ ಶಿಷ್ಯರಾಗಿ ಸಂಸ್ಕೃತ ಅಧ್ಯಯನವನ್ನು ಮಾಡಿದರು. ಬಾಲ್ಯದಿಂದಲೂ ಇವರಿಗೆ ಶಿವಪೂಜೆಯೇ ಅತ್ಯಂತ ಪ್ರಿಯವಾದುದು. ಹೊಟಗಿ ಬೃಹನ್ಮಠದ ಬಾಲತಪಸ್ವಿ ಶ್ರೀ ಷ॥ ಬ್ರ॥ ಚೆನ್ನವೀರ ಶಿವಾಚಾರ್ಯ ಸ್ವಾಮಿಗಳವರು ಇವರ ಬಾಲ್ಯಸ್ನೇಹಿತರಾಗಿದ್ದರು. ಶಿಗ್ಗಾಂವಿ ತಾಲೂಕಿನ ಗಂಗೀಭಾವಿಯಲ್ಲಿ ಮಾಡಿದ ಇವರ ತಪಸ್ಸು ಉಲ್ಲೇಖನೀಯವಾಗಿದೆ. ಇವರು ಪಾಲಿಕೊಪ್ಪದ ಪಟ್ಟಾಧ್ಯಕ್ಷರಾಗಿದ್ದರಲ್ಲದೇ, ಲಿಂ॥ ಜಗದ್ಗುರು ಶಿವಾನಂದರಾಜೇಂದ್ರ ಮಹಾಸ್ವಾಮಿಗಳ ಆಜ್ಞೆಯಂತೆ ಬೆಂಗಳೂರಿನ ವಿಭೂತಿಪುರಮಠ ಹಾಗೂ ಮಹಂತಿನಮಠದ ಅಧಿಕಾರವನ್ನು ವಹಿಸಿಕೊಂಡಿದ್ದರು. ಮುಂದೆ ಇವರು ಶ್ರೀ ಶಿಶುನಾಳ ಶರೀಫ ಶಿವಯೋಗಿಗಳ ಗುರುಗಳಾದ ಗೋವಿಂದಭಟ್ಟರ೧ ಭವಿಷ್ಯವಾಣಿಯ ಪ್ರಕಾರ ೧೯೩೭ರಲ್ಲಿ ಲಕ್ಷ್ಮೇಶ್ವರದ ಸಮೀಪ “ಮುಕ್ತಿಮಂದಿರ” ಎಂಬ ಪುಣ್ಯಾಶ್ರಮವನ್ನು ಸ್ಥಾಪಿಸಿ ಅದನ್ನೇ ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡರು.

ಮುಂದೆ ಲಿಂ॥ ಜಗದ್ಗುರು ಶಿವಾನಂದರಾಜೇಂದ್ರ ಮಹಾಸ್ವಾಮಿಗಳ ಮೃತ್ಯುಪತ್ರದ ಪ್ರಕಾರ ಶಾ.ಶ.೧೮೬೯ನೇ ಸರ್ವಧಾರೀನಾಮ ಸಂವತ್ಸರದ ವೈಶಾಖ ಶು॥ ೧೨, ದಿ॥ ೨-೫-೧೯೪೬ನೇ ದಿವಸ ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಹಾಗೂ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಸನ್ನಿಧಾನದಲ್ಲಿ ರಂಭಾಪುರೀ ಪೀಠದ ಜಗದ್ಗುರುತ್ವವನ್ನು ವಹಿಸಿಕೊಂಡರು.

---

೧. ಶಿಶುನಾಳ ಶರೀಫ ಶಿವಯೋಗಿಯು ಓರ್ವ ಸಿದ್ಧಪುರುಷನಾಗಿದ್ದನು. ಅವನು ತ್ರಿಕಾಲ ಜ್ಞಾನಿಯೂ ಹೌದು. ಒಮ್ಮೆ ಲಕ್ಷ್ಮೇಶ್ವರಕ್ಕೆ ಹೊರಟಿದ್ದನು. ಹೋಗುವ ಮಾರ್ಗದಲ್ಲಿ ಇಂದಿನ ಮುಕ್ತಿಮಂದಿರವಿರುವ ಸ್ಥಳದಲ್ಲಿ ಒಂದು ಬನ್ನಿಮರ ಹಾಗೂ ಕಟ್ಟೆ ಇದ್ದಿತು. ಏರುಬಿಸಿಲಿನಲ್ಲಿ

ಅಲ್ಪ ವಿಶ್ರಾಂತಿಗಾಗಿ ಶರೀಫನು ಬನ್ನಿಕಟ್ಟೆಯ ಮೇಲೆ ಕುಳಿತನು. ಅವನಿಗೆ ಗಾಂಜಾ ಸೇದುವ ಹವ್ಯಾಸವಿತ್ತು. ಚಿಲುಮೆಯನ್ನು ಹೊರತೆಗೆದು ಗಾಂಜಾ ತುಂಬುವಷ್ಟರಲ್ಲಿ ಕೈಲ್ಲಿಯ ಚಿಲುಮೆ ಕೆಳಗೆ ಬಿತ್ತು. ಆಗ ತನ್ನೊಂದಿಗೆ ಇದ್ದ ಗುರುಗೋವಿಂದ ಭಟ್ಟರು ಶಿಷ್ಯನಿಗೆ ಹೀಗೆ ಹೇಳಿದರಂತೆ: 'ಏ ತಮ್ಮಾ, ಈ ಜಾಗಾ ಬಾಳಾ ಪವಿತ್ರ ಐತಿ, ಇಲ್ಲಿ ಯಾರೋ ಮಹಾತ್ಮರು ಬರುವಾಂಗ ಕಾಣತೈತಿ. ಮುಂದೆ ಅವರ ಗದ್ದಿಗೆ ಆಕ್ಕೈತಿ. ಇಲ್ಲಿ ಸೇದೋದು ಬ್ಯಾಡ, ಏಳೋಲೆ' ಎಂದು ಹೇಳಿದ್ದರೆಂದು ಜಮೀನು ದಾನ ಮಾಡಿದ ಶಿಷ್ಯನು ಹೇಳುತ್ತಿದ್ದನಂತೆ.

ಇವರು ಸುಮಾರು ೩೫ ವರ್ಷ ಪರ್ಯಂತವಾಗಿ ಪೀಠಾಧ್ಯಕ್ಷರಾಗಿದ್ದು, ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಧರ್ಮಜಾಗೃತಿಯನ್ನು ಉಂಟುಮಾಡಿದರು. "ಮಾನವ ಧರ್ಮಕ್ಕೆ ಜಯವಾಗಲಿ", "ಧರ್ಮದಿಂದಲೇ ವಿಶ್ವಕ್ಕೆ ಶಾಂತಿ" –ಎಂಬ ವಿನೂತನ ಘೋಷಣೆಗಳನ್ನು ಜಾರಿಗೊಳಿಸಿದರು. ಇವು ಇವರ ಜೀವನದ ಉಸಿರಾಗಿದ್ದವು, ಮನುಕುಲದ ಒಳಿತಿನ ಮಂತ್ರವಾಗಿದ್ದವು. ಇವರ ಅಡ್ಡಪಲ್ಲಕ್ಕಿ ಮಹೋತ್ಸವದಲ್ಲಿಯ ಸರ್ವಧರ್ಮಗಳ ಗುರುಗಳ ಭಾವಚಿತ್ರಗಳ ಮೆರವಣಿಗೆಯು ಜನಮನದಲ್ಲಿ ಸರ್ವಧರ್ಮ ಸಮಭಾವನೆಯನ್ನು ಮೂಡಿಸುತ್ತಿತ್ತು. ಶ್ರಾವಣ, ನವರಾತ್ರಿ, ಧನುರ್ಮಾಸ, ಆಷಾಢಮಾಸ ಮತ್ತು ಮಹಾಶಿವರಾತ್ರಿ ಮುಂತಾದ ಪರ್ವಕಾಲಗಳಲ್ಲಿಯ ಇವರ ಇಷ್ಟಲಿಂಗದ ಮಹಾಪೂಜೆಗಳು ಭೂಮಿಯನ್ನು ಕೈಲಾಸವನ್ನಾಗಿ ಮಾರ್ಪಡಿಸುತ್ತಿದ್ದವು. ಈ ಮಹಾಪೂಜೆಯಲ್ಲಿ ಸಹಸ್ರ ಕುಂಭಾಭಿಷೇಕ, ಲಕ್ಷ ಬಿಲ್ವಾರ್ಚನೆ ಹಾಗೂ ಲಕ್ಷದೀಪೋತ್ಸವಗಳು ವಿಶೇಷ ಉಲ್ಲೇಖನೀಯಗಳಾಗಿವೆ. ಕುಂಭಾಭಿಷೇಕದ ಸಂದರ್ಭಗಳಲ್ಲಿ ಪೂಜ್ಯರು ಸ್ವತಃ ಕುಂಭವನ್ನು ಹೊತ್ತು ಉತ್ಸವದಲ್ಲಿ ಪಾಲ್ಗೊಳ್ಳುತ್ತಿದ್ದರು. ಅನಾವೃಷ್ಟಿಯ ಪ್ರದೇಶಗಳಲ್ಲಿ ಇವರ ವೈಭವದ ಸಹಸ್ರ ಕುಂಭಾಭಿಷೇಕದಿಂದೊಡಗೂಡಿದ ಮಹಾಪೂಜಾದಿಗಳಿಂದ ಆಯಾ ಭಾಗಗಳಲ್ಲಿ ಸುವೃಷ್ಟಿಯಾಗಿ ಹೊಳೆ ಹಳ್ಳಗಳು ತುಂಬಿ ಹರಿದ ಹತ್ತು ಹಲವು ನಿದರ್ಶನಗಳಿವೆ.

ಸಹಸ್ರ ಕುಂಭಾಭಿಷೇಕ, ಲಕ್ಷ ಬಿಲ್ವಾರ್ಚನೆ ಹಾಗೂ ಲಕ್ಷದೀಪೋತ್ಸವಗಳ ಪ್ರಭಾವದಿಂದ ಕಾಶ್ಮೀರದ ಭದ್ರಸೇನ ಮಹಾರಾಜ ಹಾಗೂ ಅವನ ಮಂತ್ರಿಯ ಮಗ ಇವರೀರ್ವರೂ ಪೂರ್ಣಾಯುಷಿಗಳಾದರೆಂಬ ವಿಷಯವು ಸ್ಕಂದಪುರಾಣದಲ್ಲಿ ವಿಶೇಷವಾಗಿ ವರ್ಣಿತವಾಗಿದೆ. ಪುರಾಣ ಪ್ರಸಿದ್ಧವಾದ ಈ ಘಟನೆಯಿಂದ ಪ್ರೇರಿತರಾದ ಹಾಗೂ ಅದರ ಮಹತ್ತ್ವವನ್ನರಿತ ಪೂಜ್ಯ ಜಗದ್ಗುರುಗಳವರು ಹೋದಲ್ಲೆಲ್ಲ ಈ ಮಹಾಪೂಜೆಗಳನ್ನು ನೆರವೇರಿಸುತ್ತಿದ್ದರು.

ಮಹಾಶಿವರಾತ್ರಿಯ ದಿವಸ ಹಗಲು–ರಾತ್ರಿ ಎನ್ನದೆ ಇಪ್ಪತ್ನಾಲ್ಕು ತಾಸುಗಳ ಪರ್ಯಂತವಾಗಿ ಏಕಾಸನದಲ್ಲಿ ಕುಳಿತು ಆನಂದಭರಿತರಾಗಿ ಶಿವಪೂಜೆಯನ್ನು ನೆರವೇರಿಸಿ ಕೊನೆಗೆ ತಮ್ಮ ಆಶೀರ್ವಚನದಲ್ಲಿ " ಶಿವನು ಒಂದು ದಿವಸಕ್ಕೆ ೨೪ ತಾಸುಗಳ ಪರಿಮಿತಿಯನ್ನು ಮಾಡಿದ್ದಾನೆ. ಆದರೆ ಈ ಪರಿಮಿತಿಯು ಇನ್ನೂ ಹೆಚ್ಚಾಗಿದ್ದರೆ ನಮಗೆ ಸಂತೋಷವಾಗುತ್ತಿತ್ತು" ಎಂಬುದಾಗಿ ಅಪ್ಪಣೆ ಕೊಡಿಸುತ್ತಿದ್ದರು. ಅಷ್ಟೊಂದು ಆನಂದ! ಅಷ್ಟೊಂದು ಆಸಕ್ತಿ!

ಪೂಜ್ಯರ ಮಹಾಪೂಜೆಯ ಸಾಮಗ್ರಿಗಳು ಎರಡು ಲಾರಿಗಳಷ್ಟಿದ್ದವು. ಪೂಜೆಯ ಈ ಸಾಮಗ್ರಿಗಳನ್ನು ವರ್ಣಿಸುವುದೇ ಅಸಾಧ್ಯ! ಅವನ್ನು ಕಣ್ತುಂಬ ನೋಡಿದವರೇ ಧನ್ಯರು. ಮಹಾಪೂಜೆಯಲ್ಲಿ ಉಪಯೋಗಿಸುವ ದೀಪಸ್ತಂಭಗಳು ಮೂರು ಫೂಟು ಅಗಲ ಹಾಗೂ ಒಂಭತ್ತು ಫೂಟು ಎತ್ತರದಷ್ಟಿವೆ. ಒಂದು ದಿವಸದ ಮಹಾಪೂಜೆಯಲ್ಲಿ ಸುಮಾರು ಮೂರು ಕಿಲೋ ಅರಳೆ ಹಾಗೂ ಇಪ್ಪತ್ತು ಡಬ್ಬಿ ಎಣ್ಣೆ ಖರ್ಚಾಗುತ್ತಿತ್ತು. ಇಂತಹ ವೈಭವದ ಇಷ್ಟಲಿಂಗ ಪೂಜೆಯನ್ನು ಮಾಡುವವರು ಭಾರತದಲ್ಲಷ್ಟೇ ಅಲ್ಲ, ವಿಶ್ವದಲ್ಲಿಯೇ ಇರಲಿಲ್ಲವೆಂದರೂ ಅತಿಶಯೋಕ್ತಿಯಾಗಲಾರದು. ಭಾರತ ಸರ್ಕಾರದವರು ಪೂಜ್ಯರ ಪೂಜಾ ವೈಭವವನ್ನು ಚಿತ್ರೀಕರಣ ಮಾಡಿಕೊಂಡಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಸರ್ಕಾರೀ ಕಾರ್ಯಕ್ರಮಗಳಿದ್ದಾಗ ಆ ಚಿತ್ರದ ಪ್ರದರ್ಶನವನ್ನು ಮಾಡುತ್ತಾರೆ.

ಶ್ರೀ ಸನ್ನಿಧಿಯವರು ರಂಭಾಪುರೀ ಪೀಠದ ಅಧಿಕಾರವನ್ನು ವಹಿಸಿಕೊಂಡಿದ್ದರೂ, ಮುಕ್ತಿಮಂದಿರವು ಇವರನ್ನು ಅಗಲಗೊಡಲಿಲ್ಲ. ಅಂತೆಯೇ "ಮುಕ್ತಿಮಂದಿರದ ಮಹರ್ಷಿ" ಎಂದು ಪ್ರಸಿದ್ಧರಾದರು. ಪೀಠಾಚಾರ್ಯರಾದರೂ ವೈಭವಕ್ಕಿಂತಲೂ ವೈರಾಗ್ಯಕ್ಕೆ ಮಹತ್ತ್ವಕೊಟ್ಟ ಕಾರಣ, ತಟ್ಟಿನ ಪೋಷಾಕು, ಕಂಬಳಿ, ಬಿಲ್ವಫಲಗಳ ಮಾಲೆ, ಕೈಯಲ್ಲಿ ಒಂದು ಮಣ್ಣಿನ ಪಾತ್ರೆ, ಬಡಿಗೆ, ಯೋಗದಂಡ ಮತ್ತು ರುದ್ರಾಕ್ಷಿ ಜಪಮಾಲೆ – ಇವು ಇವರ ಆಭರಣಗಳಾಗಿದ್ದವು. ಆದ್ದರಿಂದ ಇವರಿಗೆ "ಹರಕು ಪಾಟೀನ ಅರಸು" ಎಂದು ಜನರು ಕರೆಯುತ್ತಿದ್ದರು.

ಪೂಜ್ಯರ ಲಕ್ಷ್ಯ ತಪಸ್ಸಿನ ಕಡೆಗೆ ವಿಶೇಷವಾಗಿದ್ದ ಕಾರಣ ರಂಭಾಪುರೀ ಪೀಠದ ಯೋಗಕ್ಷೇಮ ನೋಡುವುದಕ್ಕಾಗಿ ದಿ॥೧೫–೫–೧೯೭೨ರಂದು ಮಹಾರಾಷ್ಟ್ರದ ವೈರಾಗ ಬೃಹನ್ಮಠದ ಪಟ್ಟಾಧ್ಯಕ್ಷರೂ, ಮಹಾನ್ ವಿದ್ವಾಂಸರೂ, ಗುಣಗ್ರಾಹಿಗಳೂ ಆದ ಶ್ರೀ ಷ॥ಬ್ರ॥ ಪಂಚಾಕ್ಷರ ಶಿವಾಚಾರ್ಯರನ್ನು ರಂಭಾಪುರೀ ಪೀಠದ ೧೨೦ನೇ ಜಗದ್ಗುರುಗಳನ್ನಾಗಿ ಮಾಡಿ ಅವರಿಗೆ ಶ್ರೀ ೧೦೦೮ ಜಗದ್ಗುರು ಪ್ರಸನ್ನರೇಣುಕ ವೀರರುದ್ರಮುನಿ ದೇವ ಶಿವಾಚಾರ್ಯ ಮಹಾಸ್ವಾಮಿಗಳೆಂದು ನಾಮಕರಣ ಮಾಡಿದರು.

ಪೂಜ್ಯ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳು ಮುಕ್ತಿಮಂದಿರ ಧರ್ಮಕ್ಷೇತ್ರದಲ್ಲಿ ಅನೇಕ ಧಾರ್ಮಿಕ ಕಾರ್ಯಕ್ರಮಗಳನ್ನು ಮಾಡಿದ್ದಾರೆ. ಅವುಗಳಲ್ಲಿ ೧೦೧ ನೂತನ ರಥೋತ್ಸವ, ೧೦೦೮ ಮಂಟಪಪೂಜೆ ಹಾಗೂ ೧೦೦೮ ಪಲ್ಲಕ್ಕಿ ಉತ್ಸವಗಳು ಉಲ್ಲೇಖನೀಯಗಳಾಗಿವೆ. ಪೂಜ್ಯರು ಮುಕ್ತಿಮಂದಿರದಲ್ಲಿಯೇ ಮೂರುಕೋಟಿ ಶಿವಲಿಂಗಗಳನ್ನು ಸ್ಥಾಪಿಸಬೇಕೆಂಬ ಮಹದೋದ್ದೇಶ ಉಳ್ಳವರಾಗಿದ್ದರು. ಆದರೆ ಶಿವನು ದಯಪಾಲಿಸಿದ ಸಮಯವು ಪೂರ್ಣವಾಗಿದ್ದರಿಂದ ತಮ್ಮ ೭೯ನೇ ವಯಸ್ಸಿನಲ್ಲಿ ದಿ॥ ೫–೧೦–೧೯೮೭ನೇ ಮಂಗಳವಾರ ರಾತ್ರಿ ೧೧–೩೦ಕ್ಕೆ ಮುಕ್ತಿಮಂದಿರದಲ್ಲಿ ಲಿಂಗೈಕ್ಯರಾದರು. ಪೂಜ್ಯರ ಸಮಾಧಿಯು ಮುಕ್ತಿಮಂದಿರದಲ್ಲಿಯೇ ಮಾಡಲ್ಪಟ್ಟಿದೆ. ಇದೇ ಸ್ಥಾನದಲ್ಲಿಯೇ ಎಲ್ಲ ಮಠಾಚಾರ್ಯರ ಶಿಲಾವಿಗ್ರಹಗಳು, ಗೋತ್ರ ಪುರುಷರ ಮತ್ತು ಶಕ್ತಿಯರ ಶಿಲಾಮೂರ್ತಿಗಳು ಪ್ರತಿಷ್ಠಾಪಿಸಲ್ಪಟ್ಟಿರುವುದರಿಂದ ಮುಕ್ತಿಮಂದಿರವು ಸರ್ವಧರ್ಮಗಳ ಸುಂದರ ಸಮನ್ವಯ ಕ್ಷೇತ್ರವಾಗಿ ಕಂಗೊಳಿಸುತ್ತಿದೆ.

ಇದೀಗ ಮುಕ್ತಿಮಂದಿರ ಸುಕ್ಷೇತ್ರವು ಸಂಸ್ಥಾಪನೆಗೊಂಡು ಅರವತ್ತೈದು ವರ್ಷಗಳು ಸಂದವು. ಅಲ್ಲಿಯ ಲಿಂಗಮಯ ಗೋಪುರದ ಲಿಂ॥ ಶ್ರೀ ಜಗದ್ಗುರು ವೀರಗಂಗಾಧರ ಭಗವತ್ಪಾದರ ಸುಂದರ ಬಂಧುರ ಭವ್ಯ ಶಿಲಾಮಂದಿರ, ಶ್ರೀ ಜಗದ್ಗುರು ರೇಣುಕಾಚಾರ್ಯರ

ಭಗವತ್ಪಾದರ ಭವ್ಯ ಶಿಲಾಮೂರ್ತಿ, ವಿಶ್ವಮತಾಚಾರ್ಯರ ಮಂದಿರಗಳು ಭಾವುಕ ಭಕ್ತರ ಕಣ್ಮನ ತಣಿಸುವುದರೊಂದಿಗೆ ಕೈಲಾಸದ ಕಲ್ಪನೆ ಮೂಡಿಸುತ್ತಲಿವೆ. ಇಂದು ಮುಕ್ತಿಮಂದಿರವು ಸಕಲ ಧರ್ಮೀಯರ ತೀರ್ಥಯಾತ್ರಾ ಕ್ಷೇತ್ರವಾಗಿ ಮಾನವ ಧರ್ಮಮಂದಿರವಾಗಿ ಕಂಗೊಳಿಸುತ್ತಿದೆ.

ಗುರುತ್ವದಿಂದ ಜಗದ್ಗುರುತ್ವದೆಡೆಗೆ

ವಿಚಿತ್ರ ಆದರೂ ನಿಜ ಃ

"ಹುಟ್ಟು ಆಕಸ್ಮಿಕ ಸಾವು ನಿಶ್ಚಿತ" ಎಂಬುದು ಬಲ್ಲವರು ಹೇಳುವ ಮಾತಾಗಿದೆ. ಆ ವ್ಯಕ್ತಿಯ ಬದುಕಿನಲ್ಲಿ ಆಕಸ್ಮಿಕವಾಗಿ ಸಂಭವಿಸುವ ಈ ಹುಟ್ಟು ಹಾಗೂ ಅದರ ಗುಟ್ಟು ಅರಿತವರು ಅಪರೂಪವೆನ್ನಬಹುದು. ಈಗ ಇಲ್ಲಿ ಉಲ್ಲೇಖಿಸುತ್ತಿರುವ ಓರ್ವ ಮಹಂತರ ಹುಟ್ಟು ಸಹ ವಿಶಿಷ್ಟವಾಗಿಯೇ ಜರುಗಿತು. ಇವರ ಹುಟ್ಟು ಸಾಮಾನ್ಯ ಹುಟ್ಟಿನಂತಿಲ್ಲ. ಈಗಿನ ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ವೈರಾಗ್ ಎಂಬುದು ಒಂದು ಹಳ್ಳಿ, ಅಲ್ಲಿಯ ಹಿರಿಯ ಮಠದ ಶ್ರೀ ವೇ॥ ಬಾಳಲಿಂಗ ಸ್ವಾಮಿ ಆಚಾರ ಸಂಪನ್ನರು, ವಿಚಾರವಂತರು. ಅವರಿಗೆ ಅನುಗುಣವಾದ ಬಾಳಸಂಗಾತಿ ಲಕ್ಷ್ಮೀಬಾಯಿ ಎಂಬುವರು. ತಾಯಿಯು ಗರ್ಭಿಣಿಯಾದರು. ಸಾಮಾನ್ಯವಾಗಿ ಗರ್ಭವತಿಯಾದ ಓರ್ವ ತಾಯಿಯು ಒಂಭತ್ತು ತಿಂಗಳು ತುಂಬಿ ಹತ್ತು ದಿನಗಳ ನಂತರ ಮಗುವಿಗೆ ಜನನ ನೀಡುತ್ತಾರೆ. ಆದರೆ ಲಕ್ಷ್ಮೀಬಾಯಿಗೆ ತಿಂಗಳು ಹತ್ತಾಯಿತು. ಹನ್ನೊಂದನೆಯ ತಿಂಗಳೂ ಕಳೆದು ಹೋಯಿತು. ಈಗಿನಂತೆ ಆಧುನಿಕ ವೈದ್ಯಕೀಯ ಜ್ಞಾನ–ಸಾಧನೆಗಳಿಲ್ಲದ ಆ ಕಾಲದಲ್ಲಿ ಯಾರಿಗೂ ಏನು ಮಾಡಬೇಕೆಂಬುದೇ ತಿಳಿಯದಾಯಿತು. ದೇವರು–ದಿಂಡರು ಎಂದು ಹೇಳುವುದು ನಡೆಯಿತು, ಎಲ್ಲರೂ ಗಾಬರಿಗೊಂಡರು. ಆದರೆ ಪರಿಹಾರ ಮಾತ್ರ ಕಾಣದಾದರು. ಲಕ್ಷ್ಮೀಬಾಯಿಯವರಿಗೆ ಇದಾವುದರ ಪರಿವೆಯೂ ಇಲ್ಲ. ಆಯಾಸವೂ ಎನಿಸಲಿಲ್ಲ. ಪರಮಾತ್ಮನ ಚಿಂತನೆಯಲ್ಲಿಯೇ ದಿನಗಳನ್ನು ಎಣಿಸತೊಡಗಿದರು. ಇನ್ನೇನು ಇಷ್ಟರಲ್ಲಿ ಹನ್ನೆರಡು ತಿಂಗಳು ತುಂಬುವವು ಎನ್ನುವಷ್ಟರಲ್ಲಿ ಸರಳ ಹೆರಿಗೆಯಾಯಿತು. ನಗುಮೊಗದ ನಸುಗಪ್ಪಾದ ಶಿಶುವೊಂದು ಧರೆಗಿಳಿದು ಬಂದಿತು. ಅದುವೇ ಬೆಳೆದು ದೊಡ್ಡವನಾಗಿ ಶ್ರೀಮದ್ರಂಭಾಪುರಿ ಜಗದ್ಗುರು ವೀರರುದ್ರಮುನಿದೇವ ಶಿವಾಚಾರ್ಯ ಮಹಾಸ್ವಾಮಿಗಳು ಎಂಬ ಅಭಿಧಾನದಿಂದ ಶೋಭಾಯಮಾನವಾಗಿದೆ.

ತಾಯಿ–ತಂದೆಗಳು ಇಟ್ಟ ಹೆಸರು ಪಂಚಾಕ್ಷರಿ. ಈ ಮರಿ ಹುಟ್ಟೂರಿನಲ್ಲಿಯೇ ಪ್ರಾಥಮಿಕ ಹಂತದ ಶಿಕ್ಷಣ ಪಡೆದನು. ಈ ಬಾಲಕನ ಹುಟ್ಟಿನ ಗುಟ್ಟನ್ನು ಅರಿಯದ ತಾಯಿ–ತಂದೆ ಹಾಗೂ ಗುರು–ಹಿರಿಯರು ಇವನೊಬ್ಬ ಶ್ರೇಷ್ಠ ವ್ಯಕ್ತಿ ಆಗುವನೆಂದು ಭಾವಿಸಿ ಆಧ್ಯಾತ್ಮ ವಿದ್ಯೆ ನೀಡಲು ನಿರ್ಧರಿಸಿದರು. ಸೊನ್ನಲಿಗೆಯ ಅರ್ಥಾತ್ ಸೊಲ್ಲಾಪುರದ ಸುಪ್ರಸಿದ್ಧ ಸಂಸ್ಕೃತ ಹಾಗೂ ಧಾರ್ಮಿಕ ಪಾಠಶಾಲೆ ಎಂಬ ಪ್ರತೀತಿಗೆ ಪಾತ್ರವಾದ ವಾರದ ಪಾಠಶಾಲೆಯಲ್ಲಿ ಸಂಸ್ಕೃತ ಅಧ್ಯಯನ ಪ್ರಾರಂಭಿಸಿದರು. ಘನ ವಿದ್ವಾಂಸರು ಎನಿಸಿದ್ದ ಶ್ರೀ ವೇ। ಪಂ। ಜಗದೀಶ ಶಾಸ್ತ್ರಿಗಳು ಇವರಿಗೆ ಗುರುವಾಗಿ ದೊರೆತುದು ಭಾಗ್ಯವೇ ಸರಿ. ಆದರೆ ಆ ಭಾಗ್ಯ ಬಹಳ ದಿನ ಉಳಿಯಲಿಲ್ಲ. ವೈರಾಗ್ ಬಾರ್ಸಿ ಹಿರೇಮಠಕ್ಕೆ ಇವರನ್ನೇ ಪಟ್ಟಾಧ್ಯಕ್ಷರನ್ನಾಗಿ ಮಾಡಬೇಕೆಂದು ತೀರ್ಮಾನವಾಯಿತು.

ಈ ವಿಷಯವನ್ನು ಅರಿಕೆ ಮಾಡಿಕೊಳ್ಳಲು ಹಿರಿಯ ಮಠದ ಗುರು–ಹಿರಿಯರು ಶ್ರೀಮದ್ ರಂಭಾಪುರಿ ಪೀಠಕ್ಕೆ ಹೋದರು. ಅಂದಿನ ಜಗದ್ಗುರುಗಳಾಗಿದ್ದ ಅಭಿನವ ರೇಣುಕ ಶ್ರೀ ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸನ್ನಿಧಾನದಲ್ಲಿ ಈ ವಿಷಯ ಕುರಿತು ಅರಿಕೆ ಮಾಡಿಕೊಂಡರು. ಸನ್ನಿಧಿಗೆ ಸಮಯವಿರಲಿಲ್ಲ. ಕಾರಣ ತಮ್ಮ ಕೃಪಾಪಾತ್ರರಾದ ಪಾಲಿಕೊಪ್ಪ ಹಾಗೂ ಬೆಂಗಳೂರಿನ ಶ್ರೀ ಮಹಂತರ ಮಠದ ಪಟ್ಟಾಧ್ಯಕ್ಷರಾಗಿದ್ದ 'ವೀರತಪಸ್ವಿ' ಶ್ರೀ ಗಂಗಾಧರ ಶಿವಾಚಾರ್ಯ ಸ್ವಾಮಿಗಳನ್ನು ಈ ಸಮಾರಂಭಕ್ಕೆ ಕಳುಹಿಸಿಕೊಟ್ಟರು. ಶ್ರೀಗಳವರು ವಿಧಿವತ್ತಾಗಿ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿ " ಶ್ರೀ ಷ॥ ಬ್ರ॥ ಪಂಚಾಕ್ಷರ ಶಿವಾಚಾರ್ಯ ಸ್ವಾಮಿಗಳು" ಎಂಬ ಅಭಿಧಾನವನ್ನು ನೀಡಿ ಗುರುತ್ವವನ್ನು ಅನುಗ್ರಹಿಸಿದರು.

ಕಿರುದೊರೆಯಿಂದ ಹೆದ್ದೊರೆಗೆ ಃ

ಪಂಚಾಕ್ಷರ ಸ್ವಾಮಿಗಳವರಿಗೆ ಉನ್ನತ ವ್ಯಾಸಂಗ ಪಡೆಯಬೇಕೆಂಬ ಹಂಬಲವಿತ್ತು. ಅಂತೆಯೇ ಶ್ರೀ ಕಾಶಿ ಜಂಗಮವಾಡಿ ಮಠದ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದಲ್ಲಿದ್ದು ಡಾ। ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯ ಮತ್ತು ಕಾಶೀ ಹಿಂದೂ ವಿಶ್ವವಿದ್ಯಾಲಯದಲ್ಲಿ ಅಧ್ಯಯನವನ್ನು ಮಾಡಿದರು. ಮೀಮಾಂಸಾಚಾರ್ಯ, ಸಾಹಿತ್ಯಾಚಾರ್ಯ, ವೇದಾಂತಾಚಾರ್ಯ ಹಿಂದಿ ಸಾಹಿತ್ಯದ ಎಂ.ಎ. ಮುಂತಾದ ಪದವಿಗಳನ್ನು ಸಲೀಸಾಗಿ, ಸಹಜವಾಗಿ ಸಂಪಾದಿಸಿದರು. ಸತತವಾಗಿ ೨೦ ವರ್ಷಗಳ ಕಾಲ ಅಧ್ಯಯನಶೀಲರಾಗಿ ಹಿಂದಿ ಹಾಗೂ ಸಂಸ್ಕೃತ ಭಾಷೆಗಳ ಪರಮೋಚ್ಚ ಪಂಡಿತರೆನಿಸಿದರು.

ಶ್ರೀಗಳವರ ಕಾಶೀವಾಸದಲ್ಲಿ ನಡೆದ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಿದರೆ ತಪ್ಪಾಗಲಾರದು. ಇದನ್ನು ಪಂಚಾಕ್ಷರ ಶಿವಾಚಾರ್ಯರೇ ಸ್ವತಃ ಹೇಳಿದ್ದು, ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ಶ್ರೀ ಕಾಶೀಜ್ಞಾನ ಸಿಂಹಾಸನಕ್ಕೆ ಜಗದ್ಗುರುತ್ವ ದಯಪಾಲಿಸುವ ಸಮಾರಂಭವು ಕಾಶೀ ಜಂಗಮವಾಡಿಮಠದಲ್ಲಿ ೧೯೪೮ನೇ ನವಂಬರ್ ೧೪ರಂದು ಏರ್ಪಡಿಸಲಾಗಿತ್ತು. ಆ ಕಾರ್ಯಕ್ರಮಕ್ಕೆ ಶ್ರೀಮದುಜ್ಜಯಿನಿ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರು ಹಾಗೂ ಶ್ರೀಮದ್ರಂಭಾಪುರಿ ಜಗದ್ಗುರು ವೀರಗಂಗಾಧರ ರಾಜೇಂದ್ರ ಶಿವಾಚಾರ್ಯರು ದಯಮಾಡಿಸಿದ್ದರು. ಪದ್ಧತಿಯಂತೆ ಪೀಠಾರೋಹಣ ಕಾರ್ಯಕ್ರಮಗಳಲ್ಲಿ ವಿದ್ವತ್ ಸಭೆ ಜರುಗುವುದು ಒಂದು ಉನ್ನತ ಪರಂಪರೆಯಾಗಿದೆ. ಅದು ಕೇವಲ ಸಂಸ್ಕೃತ ವಿದ್ವಾಂಸರಿಗೆ ಮಾತ್ರ ಸೀಮಿತವಾಗಿರುತ್ತದೆ. ಆ ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಕಾರ್ಯಕ್ರಮ ನಿರ್ವಹಿಸುವ ಹೊಣೆ ಶ್ರೀಮದ್ರಂಭಾಪುರಿ ಜಗದ್ಗುರುಗಳಿಗೆ ಮೀಸಲಾಯಿತು. ಅನೇಕರಿಗೆ ಅಚ್ಚರಿ, ಕೆಲವರಿಗೆ ಆತಂಕ. ಇನ್ನು ಕೆಲವರಿಗೆ ಕಾಶಿಯಲ್ಲಿದ್ದು ಸಂಸ್ಕೃತ ಅಧ್ಯಯನಕ್ಕೆ ಜೀವನವನ್ನು ಮುಡುಪಿಟ್ಟವರು ಕೂಡಾ ಈ ಹೊಣೆ ಹೊರಲು ಹಿಂಜರಿಯುತ್ತಿರುವಾಗ ಕರ್ನಾಟಕದ ಈ ಮಹಾರಾಜರು (ಶ್ರೀ ರಂಭಾಪುರಿ ಜಗದ್ಗುರು) ಅದು ಹೇಗೆ ಮುಂದಾದರು ಎಂದುಕೊಂಡರು. ಸರದಿ ಬಂದಾಗ ಶ್ರೀ ರಂಭಾಪುರಿ ಜಗದ್ಗುರುಗಳವರು ನೀಡಿದ ಆಶೀರ್ವಚನ ಸಭೆಯನ್ನೇ ನಿಬ್ಬೆರಗುಗೊಳಿಸಿತು. ಮಹಾ ಮಹೋಪಾಧ್ಯಾಯರು ಆದಿಯಾಗಿ ಎಲ್ಲ ಪಂಡಿತರು ಹರ್ಷಚಿತ್ತರಾಗಿ ಚಪ್ಪಾಳೆ ತಟ್ಟುತ್ತ ಶಹಬ್ಬಾಸ್ ಎಂದರು. ಈ ಸನ್ನಿವೇಶವನ್ನು ಕಂಡ ಪಂಚಾಕ್ಷರಿ ಶಿವಾಚಾರ್ಯರು ಮೂಕ ವಿಸ್ಮಿತರಾದರಂತೆ! ಕಾರಣವಿಷ್ಟೆ. ರಂಭಾಪುರಿ ಜಗದ್ಗುರುಗಳು ಸ್ವಲ್ಪ ಸಮಯ ಮಾತ್ರ ಸೊಲ್ಲಾಪುರದ ವಾರದ

ಪಾಠಶಾಲೆಯಲ್ಲಿ ಅಧ್ಯಯನ ಮಾಡಿದವರಾಗಿದ್ದರು. ಈ ಘಟನೆಯಿಂದ ಪಂಚಾಕ್ಷರ ಶಿವಾಚಾರ್ಯರು ರಂಭಾಪುರಿ ಜಗದ್ಗುರುಗಳ ಬಗ್ಗೆ ವಿಶೇಷ ಗೌರವ ತಾಳಿ ಅವರ ವಾಸ್ತವ್ಯದ ಉದ್ದಕ್ಕೂ ಹಗಲಿರುಳು ಸೇವೆಗೆ ಸನ್ನದ್ಧರಾದರು. ಇದರಿಂದಾಗಿ ಉಭಯರ ವಿಶ್ವಾಸ ವರ್ಧಿತವಾಯಿತು.

ಈ ಘಟನೆಯಿಂದ ರಂಭಾಪುರಿ ಜಗದ್ಗುರುಗಳವರು ವೈರಾಗ್ ಬಾರ್ಸಿ ಹಿರೇಮಠದ ತಮ್ಮ ಶಿಷ್ಯ ಉತ್ತಮ ಚಾರಿತ್ರ್ಯ, ಹಾಗೂ ಪೂಜಾನಿಷ್ಠರಾಗಿರುವುದನ್ನು ಗುರುತಿಸಿ, ತಮ್ಮ ಹೃದಯಮಂದಿರದಲ್ಲಿ ಅವರನ್ನು ಇರಿಸಿಕೊಂಡರು. ಮುಂದೊಂದು ದಿನ ಭಾಗ್ಯಲಕ್ಷ್ಮಿ ಪಂಚಾಕ್ಷರಿ ಶಿವಾಚಾರ್ಯರನ್ನು ಅರಸಿ ಬಂದಳೇನೋ ! ಶ್ರೀ ಮುಕ್ತಿಮಂದಿರ ಮಹರ್ಷಿ ಎನಿಸಿದ್ದ ರಂಭಾಪುರಿ ಜಗದ್ಗುರುಗಳವರು ವೀರವೀರಾಗಿಗಳು, ತಪೋನುಷ್ಠಾನ ಪ್ರಿಯರು. ಶಿವಪೂಜೆ ಅವರಿಗೆ ಪ್ರಾಣವಾಗಿತ್ತು. ಆದ್ದರಿಂದ ಈ ಜಗದ್ಗುರುತ್ವದ ಜಂಜಾಟದಿಂದ ದೂರವಾಗಿ ಮಹಾಪೀಠದ ಉನ್ನತಿಗೆ ಶ್ರಮಿಸಬಲ್ಲ ಓರ್ವ ವ್ಯಕ್ತಿಯನ್ನು ಪೀಠಾಧೀಶರನ್ನಾಗಿ ಮಾಡುವ ಸಂಕಲ್ಪಗೈದರು. ಇಳಿಯವಯಸ್ಸಿನಲ್ಲಿ ಪೂಜೆ–ಜಪ–ತಪಗಳೇ ಆಶ್ರಮ ಧರ್ಮಗಳು ಎಂಬುದು ಅವರ ನಿಲುವಾಗಿತ್ತು. ಆಗ ಶ್ರೀ ಸನ್ನಿಧಿಯ ಸೂಕ್ಷ್ಮಮತಿಗೆ ವೈರಾಗ್ ಹಿರೇಮಠ ಪಟ್ಟಾಧ್ಯಕ್ಷರೇ ಸೂಕ್ತ ವ್ಯಕ್ತಿ ಎಂದೆನಿಸಿತು. ಅವರು ಗುಣಗ್ರಾಹಿಯೂ, ವಿದ್ವನ್ಮಣಿಗಳು, ಶಿವಪೂಜಾನಿಷ್ಠರು ಆಗಿದ್ದರು. ಕಾಶೀಯಿಂದ ಬಾರ್ಸಿಗೆ ಮರಳಿದ ನಂತರ (೧೯೬೧) ಮಹಾರಾಷ್ಟ್ರದ ಉದ್ದಗಲಕ್ಕೂ ಸಂಚರಿಸಿ, ಮಹಾಜನತೆಯಲ್ಲಿ ಧರ್ಮಜಾಗೃತಿ ಮೂಡಿಸುವುದರೊಂದಿಗೆ ಪಂಚಪೀಠಗಳ ಪರಂಪರೆ ಬಗ್ಗೆ ಗೌರವ ಮೂಡಿಸಿದ್ದರು. ಅದನರಿತ ರಂಭಾಪುರಿ ಜಗದ್ಗುರುಗಳವರು ೧೫–೫–೧೯೭೨ ರಂದು ಶ್ರೀಮದ್ರಂಭಾಪುರಿ ಮಹಾಸಂಸ್ಥಾನದಲ್ಲಿ ಉಜ್ಜಯಿನಿ, ಶ್ರೀಶೈಲ ಹಾಗೂ ಕಾಶೀ ಜಗದ್ಗುರುಗಳವರ ದಿವ್ಯಸನ್ನಿಧಾನದಲ್ಲಿ ಜಗದ್ಗುರುತ್ವವನ್ನು ದಯಪಾಲಿಸಿದರು. ಪಂಚಮುದ್ರಾಧಾರಣ, ಕಿರೀಟಧಾರಣ ಮುಂತಾದ ವಿಧಿ–ವಿಧಾನಗಳನ್ನು ನೆರವೇರಿಸಿ ವೀರ ಸಿಂಹಾಸನಾರೋಹಣ ಮಾಡಿಸಿ ಅವರಿಗೆ "ಶ್ರೀಮದ್ರಂಭಾಪುರಿ ಜಗದ್ಗುರು ಪ್ರಸನ್ನ ರೇಣುಕ ವೀರರುದ್ರಮುನಿ ದೇವ ಶಿವಾಚಾರ್ಯ ಮಹಾಸ್ವಾಮಿಗಳವರು" ಎಂಬ ಅಭಿಧಾನವನ್ನು ದಯಪಾಲಿಸಿ, ಸಾಷ್ಟಾಂಗವೆರಗಿದರು. ನೆರೆದ ಜನಸಂದೋಹ ಹರ್ಷಾತಿರೇಕದಿಂದ ಜಯಘೋಷಗೈದರು.

ಶ್ರೀ ಪೀಠದ ಶ್ರೇಯೋಭಿವೃದ್ಧಿ ಃ

ಪರಮಾಚಾರ್ಯರಾದ ಶ್ರೀ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರು ವಿಶೇಷವಾಗಿ ಮುಕ್ತಿಮಂದಿರವನ್ನು ತಮ್ಮ ಧರ್ಮಭೂಮಿ ಹಾಗೂ ಕರ್ಮಭೂಮಿಯನ್ನಾಗಿಸಿಕೊಂಡು ಈ ಭಾಗದ ಜನತೆಯ ಕಲ್ಯಾಣಕ್ಕಾಗಿ ತಮ್ಮ ತಪೋನುಷ್ಠಾನ ಶಕ್ತಿಯನ್ನು ಧಾರೆಯೆರೆಯತೊಡಗಿದರು. ಪೀಠಕ್ಕೆ ಹೋಗುವುದೇ ಅಪರೂಪವಾಯಿತು. ಇದರಿಂದ ಶ್ರೀ ಜಗದ್ಗುರು ರುದ್ರಮುನಿದೇವ ಶಿವಾಚಾರ್ಯರು ಕಂಗೆಡದೆ ಗುರುವಿನ ಆಶೀರ್ವಾದ ಇರುವುದರಿಂದ ಶ್ರೀ ರಂಭಾಪುರಿ ಪೀಠದ ಸರ್ವಾಂಗೀಣ ಅಭಿವೃದ್ಧಿಗಾಗಿ ಟೊಂಕಕಟ್ಟಿ ನಿಂತರು. ಜೀರ್ಣ–ಶೀರ್ಣಗೊಂಡ ಪೀಠದ ಅನೇಕ ಕಟ್ಟಡಗಳನ್ನು ನವೀಕರಿಸಿದರು. ಪೀಠಕ್ಕೆ ಶ್ರೀ ಜಗದ್ಗುರು ರೇಣುಕಾಚಾರ್ಯ ಮಹಾದ್ವಾರವನ್ನು ನಿರ್ಮಾಣಗೊಳಿಸಿದರು. ಪೀಠಕ್ಕೆ ಆದಾಯ ತರುವಂಥ ಮಾರಾಟಮಳಿಗೆಗಳನ್ನು ನಿರ್ಮಿಸಿದರು. ಪೀಠದ ಆಶ್ರಯದಲ್ಲಿ ಕೆಲವು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರಲ್ಲದೆ ಕೆಲವು ವಿದ್ಯಾಸಂಸ್ಥೆಗಳಿಗೆ ನಿವೇಶನ ಹಾಗೂ ಇತರೆ ಸಹಾಯ – ಸಹಕಾರ ನೀಡಿದರು. ಶಿವಾನಂದ ಎಸ್ಟೇಟ್ (ಕಾಫಿ ತೋಟ) ಬಗ್ಗೆ ವಿಶೇಷ ಕಾಳಜಿ ವಹಿಸಿ ಆದಾಯ ಮೂಲ ಹೆಚ್ಚಿಸಿದರು. ಸ್ವತಃ ಕೃಷಿ ಕ್ಷೇತ್ರದ ಅಭಿವೃದ್ಧಿಗಾಗಿ ನಿಗಾವಹಿಸಿದರು. ಶ್ರೀ ಜಗದ್ಗುರು ರೇಣುಕಾಚಾರ್ಯ ಜಯಂತಿ ಹಾಗೂ ಕ್ಷೇತ್ರನಾಥ ಶ್ರೀವೀರಭದ್ರಸ್ವಾಮಿಯ ಯಾತ್ರಾಮಹೋತ್ಸವಗಳನ್ನು ಅರ್ಥಪೂರ್ಣವಾಗಿ ಆಚರಿಸುವುದರೊಂದಿಗೆ ಅವುಗಳ ಆಯಾಮ ಹೆಚ್ಚಿಸಿದರು.

ಶ್ರೀ ಸನ್ನಿಧಿಯವರು ಮರಾಠಿ ಹಾಗೂ ಹಿಂದಿಯಲ್ಲಿ ಜನಸ್ತೋಮ ಬೆರಗಾಗುವಂತೆ ಆಶೀರ್ವಚನ ನೀಡಬಲ್ಲ ವಾಗ್ಮಿಗಳಾಗಿದ್ದರು. ಕನ್ನಡ ಭಾಷೆಯ ಮೇಲೆ ಅಷ್ಟೊಂದು ಹಿಡಿತವಿರಲಿಲ್ಲವಾದರೂ ಕನ್ನಡ ಜನತೆಯ ಒಡನಾಟದಿಂದ ಕನ್ನಡವನ್ನು ಕಲಿತು ವಿಶೇಷ ಅಧ್ಯಯನ ಮಾಡಿ ವಿದ್ವತ್‌ಪೂರ್ಣ ಆಶೀರ್ವಚನ ನೀಡಬಲ್ಲವರಾದರು. ಅವರ ಆಶೀರ್ವಚನ ಪಾಂಡಿತ್ಯಪೂರ್ಣವಾಗಿರುತ್ತಿತ್ತು. ಹೀಗೆ ಧರ್ಮಜಾಗೃತಿ ಯಾತ್ರೆಯನ್ನು ದೇಶದ ನಾನಾ ಭಾಗಗಳಲ್ಲಿ ಕೈಗೊಂಡು ಪೀಠದ ಹಾಗೂ ಲೋಕದ ಕಲ್ಯಾಣೈಕ ಗುರಿಯಿಂದ ನಿರಂತರವಾಗಿ ೧೯ ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದರು. ಸಮಾಜದ ದುರ್ದೈವವೆಂಬಂತೆ ಅನಾರೋಗ್ಯಕ್ಕೆ ತುತ್ತಾಗಿ ೧೭–೮–೧೯೯೧ನೇ ಶನಿವಾರ ಈ ಲೋಕವನ್ನು ತ್ಯಜಿಸಿ ಶಿವಸನ್ನಿಧಿಗೈದರು. ಪೀಠಕ್ಕಾಗಿ ಶ್ರಮಿಸಿದ ಓರ್ವ ಪೀಠಾಚಾರ್ಯರನ್ನು ಕಳೆದುಕೊಂಡ ಪೀಠಾಭಿಮಾನಿಗಳು ತಬ್ಬಲಿಗಳಾದರು. ಆದರೆ ಶಿವೈಕ್ಯರಾಗುವ ಪೂರ್ವದಲ್ಲಿಯೇ ಓರ್ವ ದಕ್ಷ, ದೂರದರ್ಶಿತ್ವದ, ಚಾಣಾಕ್ಷ ವ್ಯಕ್ತಿಯನ್ನು (ಹಳ್ಯಾಳ ಶ್ರೀಗಳನ್ನು) ತಮ್ಮ ಉಯಿಲಿನ ಮೂಲಕ ಕೊಡುಗೆಯಾಗಿ ನೀಡಿದುದು ಮೆಚ್ಚತಕ್ಕ ಸಂಗತಿಯಾಗಿದೆ.

## ಗುರುಕಾರುಣ್ಯದ ಶಿಶು

ಹಳ್ಯಾಳದ ಬಳುವಳಿ ಃ

ಇಂದಿನ ಗದಗ ಜಿಲ್ಲೆಯ ಶಿರಹಟ್ಟಿ ತಾಲೂಕಿನ ಶ್ರೀಮುಕ್ತಿಮಂದಿರ ಧರ್ಮಕ್ಷೇತ್ರವು ಅಪೂರ್ವ ಧರ್ಮಪ್ರಕಾಶವನ್ನು ಬೀರಿದ ಮುಕ್ತಿಧಾಮವೆನಿಸಿದೆ. ಆ ಪರಿಸರದಲ್ಲಿ ಬರುವ ನೂರಾರು ಹಳ್ಳಿ–ಪಟ್ಟಣಗಳು, ಲಕ್ಷಾವಧಿ ಭಕ್ತ – ಮಹೇಶ್ವರರು ಈ ಧರ್ಮಕ್ಷೇತ್ರದ ಪ್ರಭಾವಲಯಕ್ಕೆ ಒಳಗಾದವರಾಗಿದ್ದಾರೆ. ಸುತ್ತಮುತ್ತಲಿನ ಹಳ್ಳಿಗಳ ಜನತೆಗೆ ಮುಕ್ತಿ–ಮಂದಿರವೇ ಕಾಶಿ, ಶ್ರೀಶೈಲ, ಕೇದಾರ, ಉಜ್ಜಯಿನಿ, ಬಾಳೆಹೊನ್ನೂರು ಎಂಬ ಭಾವನೆ ಇದೆ. ಮುಕ್ತಿಮಂದಿರದ ಅಜ್ಜ ಅರ್ಥಾತ್ ಶ್ರೀಮದ್ರಂಭಾಪುರಿ ಜಗದ್ಗುರು ಪ್ರಸನ್ನ ರೇಣುಕ ವೀರಗಂಗಾಧರ ರಾಜದೇಶೀಕೇಂದ್ರ ಶಿವಾಚಾರ್ಯ ಭಗವತ್ಪಾದರು ಈ ಭಾಗದ ಜನತೆಯ ಆರಾಧ್ಯ ಗುರು, ಪೂಜಾರ್ಹ ದೇವರು ಎನಿಸಿದ್ದರು. ಅಂಥವರ ಕೃಪಾಪಾತ್ರದಲ್ಲಿ ಹಳ್ಯಾಳ ಗ್ರಾಮದ ಶ್ರೀ ವೇ। ಚನ್ನಬಸವಯ್ಯನವರು ಹಾಗೂ ಸೌಭಾಗ್ಯವತಿ ಚೆನ್ನಬಸಮ್ಮನವರು ಅಗ್ರಗಣ್ಯರು. ಆಚಾರ ಸಂಪನ್ನ ದಂಪತಿಗಳ ಸತ್ಪುತ್ರರಾಗಿ ದಿನಾಂಕ ೭–೧–೧೯೫೬ರಂದು ಜನಿಸಿದವನೇ ಶ್ರೀ ಶಿವಮೂರ್ತಿಯು. ತನ್ನ ಬಾಲಲೀಲೆಗಳೊಂದಿಗೆ ಈ ಬಾಲಕನು ಹಳ್ಯಾಳದಲ್ಲಿಯೇ ತನ್ನ ಪ್ರಾಥಮಿಕ ಶಿಕ್ಷಣವನ್ನು ಪೂರೈಸಿದನು. ಪ್ರೌಢಶಿಕ್ಷಣ ಪಡೆಯಲೋಸುಗ ಗದಗನಗರದ ಮಾಡೆಲ್ ಹೈಸ್ಕೂಲ್

ವಿದ್ಯಾರ್ಥಿಯಾದನು. ಬಾಲ್ಯದಲ್ಲಿಯೇ ಆಧ್ಯಾತ್ಮದತ್ತ ಒಲವು ಇದ್ದುದರಿಂದ ಮಗನು ಗುರುವಾಗಲಿ ಎಂದು ಗುರಿ ಇಟ್ಟುಕೊಂಡ ಶ್ರೀ ಚನ್ನಬಸವಯ್ಯನವರು ಮುಕ್ತಿಮಂದಿರ ಮಹರ್ಷಿಗಳಲ್ಲಿ ಅರಿಕೆ ಮಾಡಿಕೊಂಡರು. ಈ ತರುಣನನ್ನು ಕರುಣಾಪೂರಿತ ದೃಷ್ಟಿಯಿಂದ ನೋಡುತ್ತ ಗಂಭೀರ ವದನರಾಗಿ ಜಗದ್ಗುರುಗಳವರು "ಏ ಚೆನ್ನಬಸವಯ್ಯ, ನಿನ್ನ ಮಗನ್ನ ನಮ್ಮ ಬೆಂಗಳೂರಿನ ಮಹಂತಿನ ಮಠದಾಗ ಇಡು. ಅವ ಸಂಸ್ಕೃತ ಓದಲಿ, ಮುಂದೆ ನೋಡೋಣ" ಎಂದು ಒಂದೇ ಮಾತಿನಲ್ಲಿ ಸುಗ್ರೀವಾಜ್ಞೆ ನೀಡಿದರು. ಎರಡು ಮಾತಿಲ್ಲದೆ ಪ್ರೌಢಶಿಕ್ಷಣ ಪೂರೈಸಿದ ಶಿವಮೂರ್ತಿಯು ಬೆಂಗಳೂರಿಗೆ ಹೋಗಲು ಅಣಿಯಾದನು. ಬೆಂಗಳೂರಿನಲ್ಲಿ 'ಶಕ್ತಿ ವಿಶಿಷ್ಟಾದ್ವೈತ ವೇದಾಂತ'ವನ್ನೇ ಅಧಿಕೃತ ವಿಷಯವನ್ನಾಗಿ ಆಯ್ದುಕೊಂಡು ಯಶಸ್ವಿ ಅಧ್ಯಯನ ಮುಗಿಸಿದರು. ಆಗ ಗುರು ವಿರಕ್ತಮಠಾಧಿಪತಿಗಳಾಗಬಯಸುವವರಿಗೆ ಹಾನಗಲ್ಲ ಶ್ರೀ ಕುಮಾರೇಶ್ವರರು ಕಟ್ಟಿದ ಶ್ರೀ ಶಿವಯೋಗ ಮಂದಿರವು ಸಾಧನೆಯ ಕೇಂದ್ರವೆನಿಸಿತ್ತು. ಅಂತೆಯೇ ಶಿವಯೋಗ ಸಾಧನೆಗಾಗಿ ಶಿವಮೂರ್ತಿ ಅವರು ಮಂದಿರದಲ್ಲಿ ತರಬೇತಿ ಪಡೆಯತೊಡಗಿದರು. ಶ್ರೀ ಶಿವಯೋಗ ಮಂದಿರದಲ್ಲಿ ಕೆಲಕಾಲ ಅಧ್ಯಯನ ಮಾಡಿದುದು ಇವರಲ್ಲಿ ಆಧ್ಯಾತ್ಮದ ಬಗ್ಗೆ ಹೆಚ್ಚಿನ ಆಸಕ್ತಿ ಮೂಡಿಸಿತು.

ಜಗದ್ಗುರುಗಳವರ ಕೃಪಾದೃಷ್ಟಿ :

ಹಳ್ಯಾಳದ ಹಿರಿಯಮಠವು ಪುತ್ರವರ್ಗಕ್ಕೆ ಸೇರಿದ ಉಜ್ಜಯಿನಿ ಸದ್ಧರ್ಮದ ಶಾಖಾಮಠವಾಗಿದೆ. ಗ್ರಾಮದ ಮಠಸ್ಥರು, ಹಿರಿಯರು ಶ್ರೀ ಶಿವಮೂರ್ತಿ ದೇವರನ್ನೇ ಹಿರಿಯಮಠದ ಪಟ್ಟಾಧ್ಯಕ್ಷರನ್ನಾಗಿ ನಿಯುಕ್ತಿಗೊಳಿಸಿ ಪಟ್ಟಾಧಿಕಾರ ಮಹೋತ್ಸವವನ್ನು ವೈಭವಪೂರ್ಣವಾಗಿ ನೆರವೇರಿಸಲು ನಿರ್ಧರಿಸಿದರು. ಗ್ರಾಮದ ಹಿರಿಯರು ಮತ್ತು ಶಿವಮೂರ್ತಿದೇವರ ತಂದೆಯವರು ಗ್ರಾಮದಲ್ಲಿ ಸಮಾಲೋಚಿಸಿ ಒಂದು ತೀರ್ಮಾನಕ್ಕೆ ಬಂದರು.

ಶ್ರೀಮದ್ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರ ದಿವ್ಯ ಸನ್ನಿಧಾನದಲ್ಲಿ ಪಂಚಪೀಠಾಧೀಶ್ವರರ ಅಡ್ಡಪಲ್ಲಕ್ಕಿ ಮಹೋತ್ಸವ ಹಾಗೂ ಧರ್ಮಸಭೆ ಏರ್ಪಡಿಸಿರುವ ಸಂದರ್ಭದಲ್ಲಿ ಹಿರಿಯಮಠದ ಪಟ್ಟಾಧಿಕಾರವನ್ನು ನೆರವೇರಿಸೋಣ ಎಂದು ಎಲ್ಲರೂ ಒಮ್ಮತದಿಂದ ನಿರ್ಣಯಿಸಿದರು. ಆಗ ೧೯೭೪-೭೬ರಲ್ಲಿ ಶಿವಯೋಗ ಸಾಧನೆಗಾಗಿ ಶಿವಯೋಗ ಮಂದಿರದಲ್ಲಿ ಅಧ್ಯಯನ ಮಾಡುತ್ತಿದ್ದ ಶಿವಮೂರ್ತಿ ದೇವರನ್ನು ಕೂಡಲೇ ಕರೆತಂದರು. ಪಟ್ಟಾಧಿಕಾರಕ್ಕೆ ಬೇಕಾದ ಪೂರ್ವಸಿದ್ಧತೆ ಇಲ್ಲದಿರುವುದರಿಂದ ಕಾರ್ಯಕರ್ತರು ಗೊಂದಲಕ್ಕೆ ಒಳಗಾದರು. ಆಗ ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಭಗವತ್ಪಾದರು "ನಮ್ಮವೇ ಬಟ್ಟೆ – ಪೀತಾಂಬರ, ದಂಡ, ಕಮಂಡಲ ಕೊಟ್ಟು ಆಶೀರ್ವದಿಸುತ್ತೇವೆ. ನೀವು ಪಟ್ಟಾಧಿಕಾರ ನೆರವೇರಿಸಿ ಬಿಡಿರಿ" ಎಂದು ಕಾರ್ಯಕರ್ತರಿಗೆ ಆದೇಶಿಸಿದರು. ಇದು ಮುಂಬರುವ ಭಾಗ್ಯದ ಶುಭ ಸೂಚನೆಯಾಯಿತು. ಎನ್ನಬಹುದಲ್ಲವೇ?

ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಅಡ್ಡಪಲ್ಲಕ್ಕಿ ಮಹೋತ್ಸವ ಹಾಗೂ ಧರ್ಮ ಜಾಗೃತಿ ಸಮ್ಮೇಳನದ ಸಡಗರದಲ್ಲಿ ಹಿರಿಯ ಮಠದ ಪಟ್ಟಾಧಿಕಾರವು ಅದ್ದೂರಿಯಿಂದ ದಿನಾಂಕ ೧೧-೪-೧೯೭೬ರಂದು ನೆರವೇರಿತು. ಶ್ರೀಮದುಜ್ಜಯಿನಿ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರು "ಶ್ರೀ ಷ। ಬ್ರ। ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು" ಎಂದು ನಾಮಕರಣ ಮಾಡಿ ಆಶೀರ್ವದಿಸಿದರು.

ಹಳ್ಯಾಳ ಶ್ರೀಗಳವರ ಆಚಾರ-ವಿಚಾರ, ವಿದ್ಯಾ ಸಂಪನ್ನತೆ, ವಾಗ್‌ವೈಖರಿಗಳಿಂದ ಸಂಪ್ರೀತರಾದ ಶ್ರೀ ರಂಭಾಪುರಿ ಜಗದ್ಗುರುಗಳವರು ತಮ್ಮ ಎಲ್ಲಾ ಸಭೆ-ಸಮಾರಂಭಗಳಲ್ಲಿ ಇವರಿಗೆ ಉಪದೇಶ ನೀಡಲು ಅವಕಾಶ ನೀಡತೊಡಗಿದರು. ಏಳೆಂಟು ವರ್ಷಗಳ ಈ ತೆರನಾದ ಒಡನಾಟದಿಂದ ಹಳ್ಯಾಳ ಶ್ರೀಗಳವರು ಶ್ರೀ ರಂಭಾಪುರಿ ಸನ್ನಿಧಿಗೆ ಆತ್ಮೀಯರೆನಿಸಿದರು.

ಆಗಲೇ ಇನ್ನೋರ್ವ ರಂಭಾಪುರಿ ಜಗದ್ಗುರು ಪ್ರಸನ್ನ ರೇಣುಕ ವೀರರುದ್ರಮುನಿದೇವ ಶಿವಾಚಾರ್ಯ ಮಹಾಸ್ವಾಮಿಗಳವರ ಕೃಪಾವಲಯದಲ್ಲಿ ಶ್ರೀ ಸಿದ್ಧಲಿಂಗ ಶಿವಾಚಾರ್ಯರು ಸೇರ್ಪಡೆಯಾದರು. ಅವರ ಅಂತರಂಗದ ಶಿಷ್ಯರಾಗಿ ಅನುಗ್ರಹೀತರಾದರು. ಅಂತೆಯೇ ಸುಪ್ರಸಿದ್ಧ ಶಿವಕ್ಷೇತ್ರವಾದ ಶಿವಗಂಗಾ ಮೇಲಣ ಗವಿ ವೀರಸಿಂಹಾಸನಮಠದ ಪಟ್ಟಾಧಿಕಾರಿಗಳಾಗಿ ೩೧-೧-೧೯೮೫ರಂದು ಅಧಿಕಾರ ಸ್ವೀಕರಿಸಿದರು. ಉಭಯಮಠಗಳ ಶ್ರೇಯೋಭಿವೃದ್ಧಿಗಾಗಿ ಹಗಲಿರುಳು ಶ್ರಮಿಸಿ ಕೀರ್ತಿಭಾಜನರಾದರು.

ಶಿವಗಂಗಾ ಶ್ರೀಗಳವರು ಹುಬ್ಬಳ್ಳಿ ಮಹಾನಗರದಲ್ಲಿ ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ಅದ್ದೂರಿಯ ಅಡ್ಡಪಲ್ಲಕ್ಕಿ ಮಹೋತ್ಸವ ನೆರವೇರಿಸಿ ವೀರಶೈವ ಧರ್ಮಪತಾಕೆಯನ್ನು ಆಗಸದೆತ್ತರಕ್ಕೆ ಹಾರಿಸುವ ಸಂಕಲ್ಪಗೈದರು. ಮಹಾನಗರದ ಪ್ರಮುಖರನ್ನು ಕಟ್ಟಿಕೊಂಡು ಆ ಕಾರ್ಯಕ್ರಮವನ್ನು ಅತ್ಯಂತ ಯಶಸ್ವಿಯಾಗಿ ೧೯೮೫ರಲ್ಲಿ ನಿಭಾಯಿಸಿದರು. 'ಧರ್ಮಜ್ಯೋತಿ' ಎಂಬ ಸ್ಮರಣ ಸಂಚಿಕೆ ಶ್ರೀಗಳವರ ಸಾಧನೆಗೊಂದು ಸಾಕ್ಷಿಯಾಯಿತು. ಈ ದಿಸೆಯಲ್ಲಿ ಇವರ ಅವಿರತ ಕಾರ್ಯನಿಷ್ಠೆ, ಛಲವಂತಿಕೆ ಹಾಗೂ ಜನಮನವನ್ನು ಗೆಲ್ಲುವ ಕುಶಲತೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಗುರುತಿಸಿದ ಜಗದ್ಗುರು ವೀರರುದ್ರಮುನಿ ದೇವ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಎಲ್ಲಾ ಕಾರ್ಯಕ್ರಮಗಳಲ್ಲಿ ಇವರನ್ನು ಮುಂಚೂಣಿಯಲ್ಲಿ ಇಡುತ್ತಿದ್ದರು. ಮುಂದೆ ದುರ್ದೈವವಶಾತ್ ಶ್ರೀ ರಂಭಾಪುರಿ ಸನ್ನಿಧಿಯವರು ತೀವ್ರ ಅನಾರೋಗ್ಯಕ್ಕೆ ತುತ್ತಾದಾಗ ಶಿವಗಂಗಾ ಶ್ರೀಗಳು ತಾಯಿಯ ವಾತ್ಸಲ್ಯದೊಂದಿಗೆ ಶ್ರವಣಕುಮಾರನಂತೆ ಸೇವೆಗೈದು ಕೃತಕೃತ್ಯರಾದರು. ಅದುವೇ ಶ್ರೀ ರಂಭಾಪುರಿ ಮಹಾಸನ್ನಿಧಿಯವರ ಸಂಪೂರ್ಣ ಆಶೀರ್ವಾದಕ್ಕೆ ಕಾರಣವಾಯಿತು.

ಶ್ರೀಗಳವರು ಜನ್ಮತಃ ಸಾಹಿತ್ಯಾಸಕ್ತರು. 'ಅಮರ ಜೀವನ' ಹಾಗೂ 'ಸದ್ಧರ್ಮ ಪ್ರಭಾ' ಎಂಬ ಧಾರ್ಮಿಕ ಮಾಸಪತ್ರಿಕೆಯ ಸಂಪಾದಕರಾಗಿ ಉತ್ತಮ ಕಾರ್ಯ ನಿರ್ವಹಿಸಿದುದನ್ನು ಸಾಹಿತ್ಯಲೋಕ ಮರೆಯುವಂತಿಲ್ಲ. ಶ್ರೇಷ್ಠ ವಾಗ್ಮಿಗಳು, ಸಂಘಟನಾಶೀಲರು, ಉತ್ತಮ ಲೇಖಕರು ಆದುದರಿಂದ ಇವರು ಜನಾಕರ್ಷಣೆಗೆ ಒಳಗಾದವರು. ಶಿವಗಂಗಾ ಮಠಾಧ್ಯಕ್ಷರಾಗಿದ್ದಾಗ ನೆಲಮಂಗಲದಲ್ಲಿ ೧೯೯೦ರಲ್ಲಿ ಶ್ರೀಮದ್ರಂಭಾಪುರಿ ಜಗದ್ಗುರುಗಳವರ ದಸರಾ ದರ್ಬಾರ ಸಮಾರಂಭವು ಅದ್ದೂರಿಯಾಗಿ ನೆರವೇರಿತು. ಆ ಸಮಾರಂಭದ ಗೌರವಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದುದು ಇವರ ಸಾಮರ್ಥ್ಯಕ್ಕೆ ಒರೆಗಲ್ಲಾಯಿತು. ಇದರಿಂದ ಶಿವಗಂಗಾ ಶ್ರೀಗಳು ರಂಭಾಪುರಿ ಜಗದ್ಗುರುಗಳವರ ಅಂತರಂಗದಲ್ಲಿ ಮನೆಮಾಡಿಕೊಂಡರು. ಅಂತೆಯೇ ಬೆಂಗಳೂರಿನ ಶ್ರೀ ಮಹಾಂತರಮಠದಲ್ಲಿ ರಂಭಾಪುರಿ ಜಗದ್ಗುರುಗಳು ಅನಾರೋಗ್ಯದಿಂದ ಬಳಲುತ್ತಿರುವಾಗಲೇ ದೂರದರ್ಶಿತ್ವದ ಉಯಿಲು (ಮೃತ್ಯುಪತ್ರ) ಸಿದ್ಧವಾಯಿತು. ಅದು

ದಿನಾಂಕ ೮-೮-೧೯೯೧ರಂದು ಬೆಂಗಳೂರಿನ ಜಿಲ್ಲಾ ಕಛೇರಿಯಲ್ಲಿ ನೋಂದಾಯಿಸಲ್ಪಟ್ಟಿತು.

ಜಗದ್ಗುರುತ್ವ ಧರ್ಮ ಸಾಮ್ರಾಜ್ಯದ ಪ್ರಭುತ್ವ :

ಶ್ರೀಮದ್ರಂಭಾಪುರಿ ಜಗದ್ಗುರು ವೀರರುದ್ರಮುನಿದೇವ ಶಿವಾಚಾರ್ಯ ಭಗವತ್ಪಾದರು ೧೯೯೧ರ ಆಗಸ್ಟ್ ಹದಿನೇಳರಂದು ಅವರ ಜೀವನಯಾತ್ರೆಯನ್ನು ಪೂರೈಸಿ ಶ್ರೀ ಪೀಠದಲ್ಲಿ ಕ್ರಿಯಾಸಮಾಧಿಸ್ಥರಾದರು. ಅನಂತರ ಅವರ ಸದಿಚ್ಛೆ ಹಾಗೂ ದೈವಸಂಕಲ್ಪದಂತೆ ಧರ್ಮ ಸಾಮ್ರಾಜ್ಯದ ಪ್ರಭುತ್ವವು ಸಹಜವಾಗಿ ಶಿವಗಂಗಾ ಶ್ರೀಗಳವರನ್ನು ಅರಸಿ ಬಂದಿತು. ಶ್ರೀಮತ್ ಉಜ್ಜಯಿನಿ, ಶ್ರೀಮತ್ ಹಿಮವತ್ ಕೇದಾರ, ಶ್ರೀ ಶ್ರೀಶೈಲ ಹಾಗೂ ಶ್ರೀ ಕಾಶೀ ಜಗದ್ಗುರು ಮಹಾಸನ್ನಿಧಿಯವರ ದಿವ್ಯಸಾನ್ನಿಧ್ಯದಲ್ಲಿ ದಿನಾಂಕ ೬-೨-೧೯೯೨ ರಂದು ಶ್ರೀಗಳವರು ವೀರಸಿಂಹಾಸನಾರೋಹಣಗೈದು "ಶ್ರೀಮದ್ರಂಭಾಪುರಿ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು" ಎಂಬ ನೂತನ ಅಭಿಧಾನವನ್ನು ಪಡೆದರು. ಶ್ರೀರಂಭಾಪುರಿ ಪೀಠದ ೧೨೧ನೇ ಜಗದ್ಗುರುಗಳೆಂದು ಜಗಜ್ಜಾಹೀರವಾಯಿತು. ಅಂದಿನ ಆ ಭವ್ಯದಿವ್ಯ ಸಮಾರಂಭದಲ್ಲಿ ನೂತನ ಜಗದ್ಗುರುಗಳವರು ತಮ್ಮ ಯೋಜನಾಷ್ಟಕವನ್ನು ಮಹಾಜನತೆಯ ಮುಂದೆ ಇಟ್ಟರು. ಆ ಯೋಜನೆಗಳು ಹೀಗಿವೆ.

೧. ಶ್ರೀಪೀಠದಲ್ಲಿ ನಿತ್ಯ ದಾಸೋಹವನ್ನು ನಡೆಯಿಸುವುದು.
೨. ಶ್ರೀಪೀಠದ ಆಡಳಿತದಲ್ಲಿ ಚುರುಕುತನವನ್ನು ತರುವುದು.
೩. ಶ್ರೀಪೀಠದಲ್ಲಿ ಗುರುಕುಲ ಸ್ಥಾಪನೆ ಮಾಡುವುದು.
೪. ಶ್ರೀಪೀಠದಲ್ಲಿ ಶ್ರೀಜಗದ್ಗುರು ರೇಣುಕಾಚಾರ್ಯ ಶಿಕ್ಷಣ ಪ್ರತಿಷ್ಠಾನವನ್ನು ಸ್ಥಾಪಿಸಿ, ಆ ಮೂಲಕ ನಾಡಿನಾದ್ಯಂತ ಶಿಕ್ಷಣ ಸಂಸ್ಥೆಗಳನ್ನು ಪ್ರೋತ್ಸಾಹಿಸಿ ಶಿಕ್ಷಣ ಹಾಗೂ ಸಂಸ್ಕೃತಿಗಳನ್ನು ಬೆಳಗಿಸುವುದು.
೫. ಶ್ರೀ ಪೀಠದಲ್ಲಿ ವೀರಶೈವ ಧಾರ್ಮಿಕ ಸಾಹಿತ್ಯವನ್ನು ಪ್ರಕಟಿಸಿ ಜನತೆಯ ಬಡ ಜೇಬಿಗೆ ಎಟಕುವ ಬೆಲೆಯಲ್ಲಿ ಮಾರಾಟ ಮಾಡಿ ವೀರಶೈವ ಹಾಗೂ ಶಿವಾಗಮ ಸಾಹಿತ್ಯವನ್ನು ಮನೆ-ಮನೆಗೆ ತಲುಪಿಸುವುದು.
೬. ಪ್ರಚಾರ ಮತ್ತು ಪ್ರಸಾದ ಮಾಧ್ಯಮಗಳನ್ನು ಚೆನ್ನಾಗಿ ಬಳಸಿಕೊಳ್ಳುವುದು.
೭. ಪ್ರತಿವರ್ಷ ಶ್ರಾವಣಮಾಸದ ತಪೋನುಷ್ಠಾನವನ್ನು ಶ್ರೀಪೀಠದಲ್ಲಿ ನೆರವೇರಿಸಿ ಜನತೆಯೊಂದಿಗೆ ನೇರ ಹಾಗೂ ನಿಕಟ ಸಂಪರ್ಕವನ್ನು ಹೊಂದುವುದು.
೮. ಶ್ರೀಪೀಠದಲ್ಲಿ ಪೀಠಾಚಾರ್ಯರ ವಾಸ್ತವ್ಯದ ಅವಧಿಯನ್ನು ಹೆಚ್ಚಿಸುವುದು ಮತ್ತು ಪ್ರತಿ ಪೂರ್ಣಿಮೆಯಂದು ಪೀಠಾಚಾರ್ಯರು ಪೀಠದಲ್ಲಿದ್ದು ಬಂದ ಭಕ್ತಾದಿಗಳಿಗೆ ದರ್ಶನ ನೀಡುವುದು.

ಕಳೆದ ಒಂಭತ್ತು ವರ್ಷಗಳಲ್ಲಿ ಈ ಯೋಜನಾಷ್ಟಕವು ಬಹುತೇಕ ಕಾರ್ಯರೂಪಕ್ಕೆ ಬಂದು ಯಶೋದುಂದುಭಿ ಬಾರಿಸಿದೆ.

ಮಾತು - ಕೃತಿಯ ನೇತಾರ :

'ಮಾನವ ಧರ್ಮಕ್ಕೆ ಜಯವಾಗಲಿ, ಧರ್ಮದಿಂದಲೇ ವಿಶ್ವಕ್ಕೆ ಶಾಂತಿ' ಎಂಬುದು ಶ್ರೀಮದ್ ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯರ ಘೋಷವಾಕ್ಯವಾದರೆ 'ಸಾಹಿತ್ಯ ಸಂಸ್ಕೃತಿ ಸಂವರ್ಧಿಸಲಿ, ಶಾಂತಿ ಸಮೃದ್ಧಿ ಸರ್ವರಿಗಾಗಲಿ' ಎಂಬ ಸರ್ವಜನಹಿತ ಸಾರುವ ಮಾತನಾಡುತ್ತ, ಆಡಿದ್ದನ್ನು ಮಾಡಿಯೇ ತೋರಿಸುವ ವೀರರು ಶ್ರೀಜಗದ್ಗುರು ವೀರಸೋಮೇಶ್ವರರು! ಅನೇಕ ಸಲ ಆಡದೇ ಮಾಡಿಬಿಡುತ್ತಾರೆ. ಅವರ ಸಂಕಲ್ಪಶಕ್ತಿ ಗಜಗಾತ್ರದ್ದಾಗಿದೆ. ಅದು ಹುಸಿಯಾಗುವ ಸಾಧ್ಯತೆಯೇ ಇಲ್ಲ. ಶ್ರೀಪೀಠವನ್ನು ಇತ್ತೀಚೆಗೆ ಸಂದರ್ಶಿಸಿದವರು ನೋಡಲು ಎರಡು ಕಣ್ಣುಗಳು ಸಾಲವು ಎನ್ನುತ್ತಾರೆ. ಶ್ರೀಪೀಠದ ನವೀಕರಣ, ಕ್ಷೇತ್ರನಾಥ ಶ್ರೀ ವೀರಭದ್ರ ಸ್ವಾಮಿಯ ಮಂದಿರದ ಅಂದಚಂದ ನೋಡಿಯೇ ಆನಂದಿಸಬೇಕು. ಆಧುನಿಕ ಸೌಕರ್ಯಗಳನ್ನು ಒಳಗೊಂಡ ಶ್ರೀಶಿವಾನಂದ ಜ್ಯೋತಿ, ಶ್ರೀರುದ್ರಜ್ಯೋತಿ, ಶ್ರೀ ಜಗದ್ಗುರು ರುದ್ರಮುನೀಶ್ವರ ಶಾಂತಿಧಾಮ ಮುಂತಾದವುಗಳ ವಾಸ್ತವ್ಯದ ಸವಿಯನ್ನು ಸವಿದವನೇ ಭಾಗ್ಯವಂತನು. ಪೂರ್ವಾಚಾರ್ಯರ ಕರ್ತೃಗದ್ದಿಗೆಗಳ ಸಂಕೀರ್ಣ ಸುಂದರ ಬಂಧುರವಾಗಿದೆ, ಮುಕ್ತಿಧಾಮವೆನಿಸಿದೆ. ಮೂಲ ಜಗದ್ಗುರು ಶ್ರೀ ರುದ್ರಮುನಿ ಶಿವಾಚಾರ್ಯರ ಹಾಗೂ ಶ್ರೀ ಚೌಡೇಶ್ವರಿ ಮಾತೆಯ ದೇವಾಲಯಗಳು ತಲೆಯೆತ್ತಿ ನಿಂತದ್ದು ತಮ್ಮ ಔನ್ನತ್ಯವನ್ನು ಪ್ರತಿಬಿಂಬಿಸುತ್ತಿವೆ. ಮಹಾದ್ವಾರಗಳು, ಬೃಹದಾಕಾರದ ಸಮುದಾಯ ಭವನ, ವಿದ್ಯಾರ್ಥಿ ವಸತಿ ನಿಲಯಗಳು ಒಂದೇ, ಎರಡೇ! ಹತ್ತಾರು ಕಟ್ಟಡಗಳು ಹುಟ್ಟಿಕೊಂಡು ಕಾಡನ್ನು ನಾಡಾಗಿಸಿವೆ.

ರಂಭಾಪುರಿ ಸನ್ನಿಧಿಯವರ ಕಾರ್ಯಕ್ಷೇತ್ರಕ್ಕೆ ಇತಿಮಿತಿ ಎಂಬುದಿಲ್ಲ. ಸಂಕುಚಿತ ಪ್ರವೃತ್ತಿ ಅವರ ಜಾಯಮಾನದಲ್ಲಿ ಇಲ್ಲ. ಕೇವಲ ಶ್ರೀಪೀಠವು ಶ್ರೀಮಂತವಾದರೆ ಅವರಿಗೆ ತೃಪ್ತಿಯಿಲ್ಲ. ಬಾಳೇಹೊನ್ನೂರು ಮಾತ್ರ ಹೊನ್ನಾದರೆ ಸಾಲದು, ಇನ್ನುಳಿದ ಧರ್ಮಕ್ಷೇತ್ರಗಳು ಅಭಿವೃದ್ಧಿಗೊಳ್ಳಬೇಕೆಂಬುದು ಅವರ ಅಭಿಲಾಷೆ. ಅಂತೆಯೇ ಗದಗ, ಕುಷ್ಟಗಿ, ಹುಬ್ಬಳ್ಳಿ, ಕುಮಾರಪಟ್ಟಣಂ (ಶ್ರೀ ವಾಗೀಶ ನಗರ) ಹೀಗೆ ಹಲವೆಡೆ ಉತ್ತಮೋತ್ತಮ ಮಾಂಗಲ್ಯ ಮಂದಿರಗಳು, ಕಲ್ಯಾಣಮಂಟಪಗಳು ಬಡವ ಬಲ್ಲಿದರ ಮಂಗಲಕಾರ್ಯಕ್ಕೆ ಎಡೆಮಾಡಿಕೊಟ್ಟಿವೆ.

ಸನ್ನಿಧಿಯವರ ದೃಷ್ಟಿ-ಸೃಷ್ಟಿ ಕೇವಲ ಕಟ್ಟಡಗಳಿಗೆ ಮಾತ್ರ ಸೀಮಿತವಾಗಿಲ್ಲ. ಶಿಕ್ಷಣ ಕ್ಷೇತ್ರದಲ್ಲೂ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಗುರುಕುಲ, ಶಾಲೆ, ಪ್ರೌಢಶಾಲೆ, ಉನ್ನತ ಶಿಕ್ಷಣ ಸಂಸ್ಥೆ ತಾಂತ್ರಿಕ ತರಬೇತಿ ಸಂಸ್ಥೆ - ಮುಂತಾದವುಗಳು ಅವರು ಶಿಕ್ಷಣ ಕ್ಷೇತ್ರಕ್ಕೆ ನೀಡಿದ ವಿಶಿಷ್ಟ - ವಿಶೇಷ ಕೊಡುಗೆಗಳಾಗಿವೆ. ಬೆಂಗಳೂರು, ಶಿಗ್ಗಾವಿ, ಧರ್ಮನಿವಾಸ ಮುಂತಾದವುಗಳು ಪೀಠದ ಹೊರಗಣ ಶಿಕ್ಷಣ ಕೇಂದ್ರಗಳಾಗಿವೆ.

ಸಾಹಿತ್ಯ, ಸಂಗೀತ ಕಲೆಗಳತ್ತ ಶ್ರೀ ಸನ್ನಿಧಿಯವರ ಪರುಷದೃಷ್ಟಿ ಹರಿದಿದೆ. 'ರಂಭಾಪುರಿ ಬೆಳಗು' ಧಾರ್ಮಿಕ ಪತ್ರಿಕೆ ಆಧ್ಯಾತ್ಮದ ಬೆಳಕನ್ನು ಹರಡುತ್ತಲಿದೆ. ಶ್ರೀ ಪೀಠದಿಂದ ಕನ್ನಡ ಸಾಹಿತ್ಯ ಪರಿಷತ್‌ನ ಮುಖಾಂತರ ಅನೇಕ ಗ್ರಂಥ - ಉದ್ಗ್ರಂಥಗಳು ಪ್ರಕಟಿಸಲ್ಪಟ್ಟಿವೆ. ಆಕರ್ಷಣೀಯ ಸಾಧನೆಗಳಾಗಿರುವ ಧ್ವನಿ ಸುರುಳಿಗಳು, ವೈವಿಧ್ಯಪೂರ್ಣವಾಗಿ ಹೊರಹೊಮ್ಮಿವೆ.

"ದಸರಾ ದರ್ಬಾರ್" ಎಂಬುದು ಶ್ರೀಮದ್ರಂಭಾಪುರಿ ಮಹಾಪೀಠದ ಒಂದು ಮಹತ್ತರ ಸಾಂಸ್ಕೃತಿಕ ಕೊಡುಗೆಯಾಗಿದೆ, ಪೂರ್ವಾಚಾರ್ಯರ ಉತ್ಕೃಷ್ಟ ಉಡುಗೊರೆಯಾಗಿದೆ. ಅದನ್ನು ಕಳೆದ ೧೫ ವರ್ಷಗಳಲ್ಲಿ ವರ್ತಮಾನ ಜಗದ್ಗುರುಗಳು ಇನ್ನೂ ಅರ್ಥಪೂರ್ಣವಾಗಿ ವ್ಯಾಪಕವಾಗಿ, ಇನ್ನೂ ಹೆಚ್ಚಿನ ಮೆರುಗಿನೊಂದಿಗೆ ಆಚರಿಸುತ್ತಾ ಬಂದಿದ್ದಾರೆ. ಆ ಸಂಭ್ರಮದ ಸಮಾರಂಭವನ್ನು ಅದರಲ್ಲೂ "ನಜರ್ ಸಮರ್ಪಣೆ"ಯಂತಹ ಶ್ರೀಮದ್ ಗಾಂಭೀರ್ಯದಿಂದ ಕೂಡಿದ

ಕಾರ್ಯಕ್ರಮವನ್ನಂತೂ ಕಣ್ಣಾರೆ ನೋಡಿ ಆನಂದಿಸಬೇಕು.

ಇದುವರೆಗೆ ೧೫ ನಗರ – ಪಟ್ಟಣಗಳಲ್ಲಿ ಶ್ರೀ ವೀರಸೋಮೇಶ್ವರ ಜಗದ್ಗುರುಗಳವರ 'ದಸರಾ ದರ್ಬಾರು' ಜರುಗಿ ಜನಮನದಲ್ಲಿ ಸನ್ನಿಧಿಯವರ ವ್ಯಕ್ತಿತ್ವವನ್ನು ಸುಸ್ಥಿರಗೊಳಿಸಿವೆ. ಆ ತಾಣಗಳು ಇಂತಿವೆ: ೧. ನಿಡಗುಂದಿ (ಬಿಜಾಪುರ ಜಿಲ್ಲೆ) ೨. ತುಮಕೂರು ೩. ಮುಂಡರಗಿ (ಗದಗ ಜಿಲ್ಲೆ) ೪. ಬಾಗಿಲುಕೋಟೆ ೫. ಶಿಗ್ಗಾಂವಿ ೬. ಸವದತ್ತಿ ೭. ಸಿಂಧನೂರು ೮. ಕುಂದಗೋಳ ೯. ಬೀರೂರು ೧೦. ಹಾವೇರಿ ೧೧. ಸೊಲ್ಲಾಪುರ ೧೨. ಕಲಬುರ್ಗಿ ೧೩. ಹೊಸದುರ್ಗ ೧೪. ರಾಣೇಬೆನ್ನೂರು ೧೫. ಶಿವಮೊಗ್ಗ

ಕವಿ – ಕಲಾವಿದರನ್ನು ಸಾಹಿತ್ಯ ಸಾಧಕರನ್ನು ಗುರುರಕ್ಷೆ ನೀಡುವ ಮೂಲಕ ಸನ್ಮಾನಿಸುವ ಸಂಸ್ಕೃತಿ ಶ್ರೀಪೀಠದ ವೈಶಿಷ್ಟ್ಯವಾಗಿದೆ. ಲೋಕಮಾನ್ಯ ಕಾರ್ಯವೆಸಗಿದವರನ್ನು ಗುರುತಿಸಿ, ಗೌರವಿಸುವ "ಶ್ರೀಜಗದ್ಗುರು ರೇಣುಕಾಚಾರ್ಯ ಪ್ರಶಸ್ತಿ" ಶ್ರೀ ಪೀಠದ ವಿಶೇಷ ಕೊಡುಗೆಯಾಗಿದೆ. ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಮುನ್ನಡೆಯುತ್ತಿರುವ ಶ್ರೀಮದ್ರಂಭಾಪುರಿ ಮಹಾಸಂಸ್ಥಾನವು ಮಹತ್ತರ ಗುರಿಯನ್ನು ಹೊದಿದೆ. ಮಹಂತರೆನಿಸಿದ ಗುರು ಪರಂಪರೆಯ ಸಮರ್ಥ ಬೆಂಬಲ ಪಡೆದಿದೆ. ಆನೆ ನಡೆದುದೇ ದಾರಿ ಎಂದಾದರೆ ಶ್ರೀಮದ್ರಂಭಾಪುರಿ ಸಂಸ್ಥಾನವು ಸಾಗಿದುದೇ ಸಾಧನೆಯ ಮಾರ್ಗವೆನಿಸಿದೆ. ಪ್ರಸನ್ನ ರೇಣುಕ ಜಗದ್ಗುರು ವೀರಸೋಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಕೇವಲ ೧೫ ವರ್ಷಗಳನ್ನು ಮಾತ್ರ ಪೂರೈಸಿದ್ದು ೧೫೦ ವರ್ಷಗಳ ಸಾಧನೆ ಕಂಡುಬರುತ್ತಿದೆ.

ರಂಭಾಪುರಿ ಪೀಠ:

ಆಂಧ್ರಪ್ರದೇಶದ ಕೊಲ್ಲಿಪಾಕಿ (ಕೊನಲುಪಾಕ) ಆದಿಜಗದ್ಗುರು ರೇಣುಕಾಚಾರ್ಯರು ಅವತರಿಸಿದ ಪರಮಪವಿತ್ರ ಕ್ಷೇತ್ರವಾಗಿದೆ. ಅಲ್ಲಿ ಪ್ರಾಚೀನ ಕಾಲದ ದೇವಸ್ಥಾನ ಹಾಗೂ ಶ್ರೀ ಸೋಮೇಶ್ವರ ಲಿಂಗವು ಕಂಗೊಳಿಸುತ್ತಲಿದೆ. ಆದರೆ ಆ ಕ್ಷೇತ್ರವು ಅಭಿವೃದ್ಧಿ ಕಾಣದೇ ಅಂಧಕಾರದಲ್ಲಿ ಉಳಿದಿತ್ತು. ಶ್ರೀಮದ್ ರಂಭಾಪುರಿ ಪೀಠದ ಪ್ರಸನ್ನ ಜಗದ್ಗುರು ವೀರಸೋಮೇಶ್ವರ ಮಹಾಸನ್ನಿಧಿಯವರು ತಮ್ಮ ಪರುಷದೃಷ್ಟಿಯನ್ನು ಆ ಸುಕ್ಷೇತ್ರದ ಮೇಲೆ ಹರಿಸಿದರು. ಇತ್ತೀಚೆಗೆ ಅವಕಾಶ ಸಿಕ್ಕಾಗಲೆಲ್ಲ ಶ್ರೀ ಜಗದ್ಗುರುಗಳವರು ಆ ಕ್ಷೇತ್ರಕ್ಕೆ ದಯಮಾಡಿಸುತ್ತಲಿದ್ದಾರೆ. ಆ ಕ್ಷೇತ್ರ ದರ್ಶನಕ್ಕೆ ಬಂದ ಭಕ್ತಾದಿಗಳಿಗೆ ವ್ಯವಸ್ಥಿತ ವಸತಿಯ ಸೌಲಭ್ಯವಿರಲಿಲ್ಲ. ಅದನ್ನು ಕಣ್ಣಾರೆ ಕಂಡು ನೊಂದ ಸನ್ನಿಧಿಯವರು ಸುಸಜ್ಜಿತ ವಸತಿ ಯೋಜನೆ ರೂಪಿಸಿದರು. ಮನಸ್ಸಿನಲ್ಲಿ ಮೂಡಿದುದನ್ನು ಒಡನೆಯೇ ಕೃತಿಗಿಳಿಸುವ ಕರ್ತೃತ್ವ ಶಕ್ತಿಯುಳ್ಳ ಜಗದ್ಗುರುಗಳು ಕಟ್ಟಡ ಕಾರ್ಯ ಪ್ರಾರಂಭಿಸಿಯೇ ಬಿಟ್ಟರು. ಆ ಬೃಹತ್ ಯೋಜನೆಯಲ್ಲಿ ಬಹಳಷ್ಟು ಕಾರ್ಯವು ಮುಗಿದು ಜನಕ್ಕೆ ಅನುಕೂಲತೆಯನ್ನುಂಟು ಮಾಡಿದೆ.

ಜಗದ್ಗುರುಗಳವರಿಗೆ ಈಗ ಐವತ್ತೊಂದರ ಪ್ರಾಯ. ಪ್ರಾಯದೊಂದಿಗೆ ಉತ್ಸಾಹವು ವರ್ಧಿಸುತ್ತಲೇ ನಡೆದಿದೆ. ಆಹಾರ – ಆರೋಗ್ಯವನ್ನು ಅತಿಯಾಗಿ ಪರಿಗಣಿಸದೆ ದೇಶವನ್ನು ಸುತ್ತುತ್ತ ಧರ್ಮಜಾಗೃತಿ ಕಾರ್ಯದಲ್ಲಿ ನಿರತರಾಗಿದ್ದಾರೆ. ಶ್ರೀ ಜಗದ್ಗುರುಗಳವರ ಐವತ್ತನೆಯ ವರ್ಧಂತಿ ಉತ್ಸವವನ್ನು ದಾವಣಗೆರೆ ನಗರದಲ್ಲಿ ೨೦೦೬ ನೆಯ ವರ್ಷಾರಂಭದಲ್ಲಿ ಅದ್ದೂರಿಯಿಂದ ಆಚರಿಸಿದ್ದನ್ನು ಕಂಡವರ ಕಣ್ಣುಗಳು ಪಾವನವಾಗಿವೆ. ಐವತ್ತು ವರ್ಷಗಳ ಸಾಂಕೇತಿಕ ವಯೋಮಾನಕ್ಕನುಗುಣವಾಗಿ ಐವತ್ತು ವಿಶಿಷ್ಟ ಗ್ರಂಥಗಳನ್ನು ಪ್ರಕಟಗೊಳಿಸಿದ್ದು ಪ್ರಶಂಸನೀಯವೆನಿಸಿದೆ. ಮತ್ತೆ ಐವತ್ತೊಂದನೆಯ ವರ್ಧಂತಿಯಲ್ಲಿ ಇಂತಹ ಹತ್ತು ಹಲವು ಯೋಜನೆಗಳು ಸಾಕಾರಗೊಳ್ಳುವುದರಲ್ಲಿ ಸಂಶಯವಿಲ್ಲ. ವೀರಶೈವ ಸದ್ಬೋಧನಾ ಸಂಸ್ಥೆಯ ಪ್ರಸಾರಾಂಗವು ಜಗದ್ಗುರುಗಳ ಕನಸಿನ ಕೂಸಾಗಿದ್ದು ಧರ್ಮ ಪ್ರಸಾರ – ಪ್ರಚಾರಕ್ಕಾಗಿ ತನ್ನನ್ನು ತಾನು ಅರ್ಪಿಸಿಕೊಂಡಿದೆ. ಹೀಗೆ ಶ್ರೀ ಜಗದ್ಗುರು ವೀರಸೋಮೇಶ್ವರ ರಾಜದೇಶೀಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ವಿಶ್ವಬಾಂಧವ್ಯದ ತಮ್ಮ ಕನಸನ್ನು ನನಸಾಗಿಸಿಕೊಳ್ಳುತ್ತ ಮುನ್ನಡೆದಿದ್ದಾರೆ. ಇಂತಹ ಪರಮಪೂಜನೀಯ ಜಗದ್ಗುರುಗಳವರಿಗೆ ಪೂರ್ವಾಚಾರ್ಯರು ಆಯು – ಆರೋಗ್ಯಭಾಗ್ಯಾದಿಗಳನ್ನು ಅನುಗ್ರಹಿಸಿಲೆಂದು ಭಕ್ತಿಪೂರ್ವಕ ಬೇಡಿಕೊಳ್ಳೋಣ.

ಶ್ರೀ ರಂಭಾಪುರಿ ವೀರಸಿಂಹಾಸನದ ಜಗದ್ಗುರು ಪರಂಪರೆ

ಶ್ರೀ ಜಗದ್ಗುರು ಏಕಾಕ್ಷರ ಶಿವಾಚಾರ್ಯ ಭಗವತ್ಪಾದರು (ಕೃತಯುಗದ ಆದಿ)
ಶ್ರೀ ಜಗದ್ಗುರು ಏಕವಕ್ತ್ರ ಶಿವಾಚಾರ್ಯ ಭಗವತ್ಪಾದರು (ತ್ರೇತಾಯುಗದ ಆದಿ)
ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯ ಭಗವತ್ಪಾದರು (ದ್ವಾಪರಯುಗದ ಆದಿ)

೧. ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯ ಭಗವತ್ಪಾದರು (ಕಲಿಯುಗ)
೨. ಶ್ರೀ ಜಗದ್ಗುರು ರುದ್ರಮುನೀಶ್ವರ ಶಿವಾಚಾರ್ಯರು
೩. ಶ್ರೀ ಜಗದ್ಗುರು ಮುಕ್ತಿಮುನೀಶ್ವರ ಶಿವಾಚಾರ್ಯರು
೪. ಶ್ರೀ ಜಗದ್ಗುರು ದಿಗಂಬರ ಮುಕ್ತಿಮುನೀಶ್ವರ ಶಿವಾಚಾರ್ಯರು
೫. ಶ್ರೀ ಜಗದ್ಗುರು ತ್ರಿಲೋಚನ ಶಿವಾಚಾರ್ಯರು
೬. ಶ್ರೀ ಜಗದ್ಗುರು ಯೋಗಿನಾಥ ಶಿವಾಚಾರ್ಯರು
೭. ಶ್ರೀ ಜಗದ್ಗುರು ಮೃತ್ಯುಂಜಯ ಶಿವಾಚಾರ್ಯರು
೮. ಶ್ರೀ ಜಗದ್ಗುರು ರುದ್ರಮುನಿ ಶಿವಾಚಾರ್ಯರು
೯. ಶ್ರೀ ಜಗದ್ಗುರು ಗುರುಪಾದ ಶಿವಾಚಾರ್ಯರು
೧೦. ಶ್ರೀ ಜಗದ್ಗುರು ಷಣ್ಮುಖ ಶಿವಾಚಾರ್ಯರು
೧೧. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೧೨. ಶ್ರೀ ಜಗದ್ಗುರು ನಿತ್ಯಾನಂದ ಶಿವಾಚಾರ್ಯರು
೧೩. ಶ್ರೀ ಜಗದ್ಗುರು ಮುಕ್ತಿನಾಥ ಶಿವಾಚಾರ್ಯರು
೧೪. ಶ್ರೀ ಜಗದ್ಗುರು ಷಡಕ್ಷರ ಶಿವಾಚಾರ್ಯರು
೧೫. ಶ್ರೀ ಜಗದ್ಗುರು ಗುರುಸಿದ್ಧ ಶಿವಾಚಾರ್ಯರು
೧೬. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೧೭. ಶ್ರೀ ಜಗದ್ಗುರು ನೀಲಕಂಠ ಶಿವಾಚಾರ್ಯರು
೧೮. ಶ್ರೀ ಜಗದ್ಗುರು ಕೈವಲ್ಯನಾಥ ಶಿವಾಚಾರ್ಯರು
೧೯. ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು

೨೦. ಶ್ರೀ ಜಗದ್ಗುರು ಸರ್ವೇಶ್ವರ ಶಿವಾಚಾರ್ಯರು
೨೧. ಶ್ರೀ ಜಗದ್ಗುರು ಶಂಭುದೇವ ಶಿವಾಚಾರ್ಯರು
೨೨. ಶ್ರೀ ಜಗದ್ಗುರು ಕಾಲಾಂತಕ ಶಿವಾಚಾರ್ಯರು
೨೩. ಶ್ರೀ ಜಗದ್ಗುರು ಶಾಂತವೀರ ಶಿವಾಚಾರ್ಯರು
೨೪. ಶ್ರೀ ಜಗದ್ಗುರು ಮುಕ್ತಿನಾಥ ಶಿವಾಚಾರ್ಯರು
೨೫. ಶ್ರೀ ಜಗದ್ಗುರು ಶಂಕರಸ್ವಾಮಿ ಶಿವಾಚಾರ್ಯರು
೨೬. ಶ್ರೀ ಜಗದ್ಗುರು ಸದಾಶಿವ ಶಿವಾಚಾರ್ಯರು
೨೭. ಶ್ರೀ ಜಗದ್ಗುರು ಮಹಾದೇವ ಶಿವಾಚಾರ್ಯರು
೨೮. ಶ್ರೀ ಜಗದ್ಗುರು ಗುರುಲಿಂಗ ಶಿವಾಚಾರ್ಯರು
೨೯. ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು
೩೦. ಶ್ರೀ ಜಗದ್ಗುರು ಪಶುಪತಿ ಶಿವಾಚಾರ್ಯರು
೩೧. ಶ್ರೀ ಜಗದ್ಗುರು ಶಂಭುಲಿಂಗ ಶಿವಾಚಾರ್ಯರು
೩೨. ಶ್ರೀ ಜಗದ್ಗುರು ಗುರುಪಾದ ಶಿವಾಚಾರ್ಯರು
೩೩. ಶ್ರೀ ಜಗದ್ಗುರು ಶ್ರೀಕಂಠಮೂರ್ತಿ ಶಿವಾಚಾರ್ಯರು
೩೪. ಶ್ರೀ ಜಗದ್ಗುರು ಸಿದ್ಧನಾಥ ಶಿವಾಚಾರ್ಯರು
೩೫. ಶ್ರೀ ಜಗದ್ಗುರು ಮೃತ್ಯುಂಜಯ ಶಿವಾಚಾರ್ಯರು
೩೬. ಶ್ರೀ ಜಗದ್ಗುರು ನೀಲಕಂಠ ಶಿವಾಚಾರ್ಯರು
೩೭. ಶ್ರೀ ಜಗದ್ಗುರು ಸೋಮಶೇಖರ ಶಿವಾಚಾರ್ಯರು
೩೮. ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯರು
೩೯. ಶ್ರೀ ಜಗದ್ಗುರು ಜಗನ್ನಾಥ ಶಿವಾಚಾರ್ಯರು
೪೦. ಶ್ರೀ ಜಗದ್ಗುರು ಪಂಚಾನನ ಶಿವಾಚಾರ್ಯರು
೪೧. ಶ್ರೀ ಜಗದ್ಗುರು ಕೆಂಜೆಡೆ ರಾಜಶೇಖರ ಶಿವಾಚಾರ್ಯರು
೪೨. ಶ್ರೀ ಜಗದ್ಗುರು ನಗರಾರಂಭ ಶಿವಾಚಾರ್ಯರು
೪೩. ಶ್ರೀ ಜಗದ್ಗುರು ಸಿದ್ಧನಾಥ ಶಿವಾಚಾರ್ಯರು
೪೪. ಶ್ರೀ ಜಗದ್ಗುರು ರುದ್ರಮುನೀಶ್ವರ ಶಿವಾಚಾರ್ಯರು
೪೫. ಶ್ರೀ ಜಗದ್ಗುರು ಕಲ್ಯಾಣಸುಂದರ ಶಿವಾಚಾರ್ಯರು
೪೬. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೪೭. ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು
೪೮. ಶ್ರೀ ಜಗದ್ಗುರು ಚಿದಂಬರದೇವ ಶಿವಾಚಾರ್ಯರು
೪೯. ಶ್ರೀ ಜಗದ್ಗುರು ಶಿವಪ್ರಸಾದ ಶಿವಾಚಾರ್ಯರು
೫೦. ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯರು
೫೧. ಶ್ರೀ ಜಗದ್ಗುರು ಶಿವಾನಂದ ಶಿವಾಚಾರ್ಯರು
೫೨. ಶ್ರೀ ಜಗದ್ಗುರು ಅವಿಮುಕ್ತ ಶಿವಾಚಾರ್ಯರು
೫೩. ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು
೫೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೫೫. ಶ್ರೀ ಜಗದ್ಗುರು ಪಶುಪತಿ ಶಿವಾಚಾರ್ಯರು
೫೬. ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು
೫೭. ಶ್ರೀ ಜಗದ್ಗುರು ಪ್ರಮಥನಾಥ ಶಿವಾಚಾರ್ಯರು
೫೮. ಶ್ರೀ ಜಗದ್ಗುರು ಗುರುದೇವ ಶಿವಾಚಾರ್ಯರು
೫೯. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೬೦. ಶ್ರೀ ಜಗದ್ಗುರು ನಂದಿನಾಥ ಶಿವಾಚಾರ್ಯರು
೬೧. ಶ್ರೀ ಜಗದ್ಗುರು ಮುಕ್ತಿಮುನೀಶ್ವರ ಶಿವಾಚಾರ್ಯರು
೬೨. ಶ್ರೀ ಜಗದ್ಗುರು ಶಂಭುದೇವ ಶಿವಾಚಾರ್ಯರು
೬೩. ಶ್ರೀ ಜಗದ್ಗುರು ತಾಂಡವಾಲೆ ಶಿವಾಚಾರ್ಯರು
೬೪. ಶ್ರೀ ಜಗದ್ಗುರು ಗುರುದೇವ ಶಿವಾಚಾರ್ಯರು
೬೫. ಶ್ರೀ ಜಗದ್ಗುರು ಜಟಾವೀರಭದ್ರ ಶಿವಾಚಾರ್ಯರು
೬೬. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೬೭. ಶ್ರೀ ಜಗದ್ಗುರು ವಿರೂಪಾಕ್ಷ ಶಿವಾಚಾರ್ಯರು
೬೮. ಶ್ರೀ ಜಗದ್ಗುರು ಶ್ರೀಕಂಠ ಶಿವಾಚಾರ್ಯರು
೬೯. ಶ್ರೀ ಜಗದ್ಗುರು ಅಘೋರ ಶಿವಾಚಾರ್ಯರು
೭೦. ಶ್ರೀ ಜಗದ್ಗುರು ಗುರುಪಾದ ಶಿವಾಚಾರ್ಯರು
೭೧. ಶ್ರೀ ಜಗದ್ಗುರು ಈಶಾನದೇವ ಶಿವಾಚಾರ್ಯರು
೭೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೭೩. ಶ್ರೀ ಜಗದ್ಗುರು ಚರಲಿಂಗ ಶಿವಾಚಾರ್ಯರು
೭೪. ಶ್ರೀ ಜಗದ್ಗುರು ಪುಣ್ಯಶ್ಲೋಕ ಶಿವಾಚಾರ್ಯರು
೭೫. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೭೬. ಶ್ರೀ ಜಗದ್ಗುರು ಸೋಮನಾಥ ಶಿವಾಚಾರ್ಯರು
೭೭. ಶ್ರೀ ಜಗದ್ಗುರು ಪೃಥ್ವಿಜ ಶಿವಾಚಾರ್ಯರು
೭೮. ಶ್ರೀ ಜಗದ್ಗುರು ವೀರೇಶ್ವರ ಶಿವಾಚಾರ್ಯರು
೭೯. ಶ್ರೀ ಜಗದ್ಗುರು ಘಂಟಾಸಿದ್ಧ ಶಿವಾಚಾರ್ಯರು
೮೦. ಶ್ರೀ ಜಗದ್ಗುರು ವೃಷಭೇಂದ್ರ ಶಿವಾಚಾರ್ಯರು
೮೧. ಶ್ರೀ ಜಗದ್ಗುರು ಸದಾನಂದ ಶಿವಾಚಾರ್ಯರು
೮೨. ಶ್ರೀ ಜಗದ್ಗುರು ಗುರುಲಿಂಗ ಶಿವಾಚಾರ್ಯರು
೮೩. ಶ್ರೀ ಜಗದ್ಗುರು ರುದ್ರಮುನೀಶ್ವರ ಶಿವಾಚಾರ್ಯರು
೮೪. ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯರು
೮೫. ಶ್ರೀ ಜಗದ್ಗುರು ಗಣನಾಥ ಶಿವಾಚಾರ್ಯರು

೮೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೮೭. ಶ್ರೀ ಜಗದ್ಗುರು ಶಕ್ತಿಧರ ಶಿವಾಚಾರ್ಯರು
೮೮. ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು
೮೯. ಶ್ರೀ ಜಗದ್ಗುರು ಚಿತ್ಪ್ರಕಾಶ ಶಿವಾಚಾರ್ಯರು
೯೦. ಶ್ರೀ ಜಗದ್ಗುರು ಶಂಭುದೇವ ಶಿವಾಚಾರ್ಯರು
೯೧. ಶ್ರೀ ಜಗದ್ಗುರು ರುದ್ರಮುನೀಶ್ವರ ಶಿವಾಚಾರ್ಯರು
೯೨. ಶ್ರೀ ಜಗದ್ಗುರು ಸಾರಂಗಧರ ಶಿವಾಚಾರ್ಯರು
೯೩. ಶ್ರೀ ಜಗದ್ಗುರು ಕುಮಾರದೇವ ಶಿವಾಚಾರ್ಯರು
೯೪. ಶ್ರೀ ಜಗದ್ಗುರು ಶಿವಪ್ರಸಾದ ಶಿವಾಚಾರ್ಯರು
೯೫. ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯರು
೯೬. ಶ್ರೀ ಜಗದ್ಗುರು ಚನ್ನವೀರದೇವವಾಮದೇವ ಶಿವಾಚಾರ್ಯರು
೯೭. ಶ್ರೀ ಜಗದ್ಗುರು ವಾಮದೇವ ಶಿವಾಚಾರ್ಯರು
೯೮. ಶ್ರೀ ಜಗದ್ಗುರು ನೀಲಕಂಠದೇವ ಶಿವಾಚಾರ್ಯರು
೯೯. ಶ್ರೀ ಜಗದ್ಗುರು ರೇವಣಸಿದ್ಧ ಶಿವಾಚಾರ್ಯರು
೧೦೦. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೧೦೧. ಶ್ರೀ ಜಗದ್ಗುರು ಚಿದ್ಘನದೇವ ಶಿವಾಚಾರ್ಯರು
೧೦೨. ಶ್ರೀ ಜಗದ್ಗುರು ನಾಗನಾಥ ಶಿವಾಚಾರ್ಯರು
೧೦೩. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೧೦೪. ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯರು
೧೦೫. ಶ್ರೀ ಜಗದ್ಗುರು ಪೂರ್ಣಜ್ಞಾನ ಶಿವಾಚಾರ್ಯರು
೧೦೬. ಶ್ರೀ ಜಗದ್ಗುರು ಶಂಭುಲಿಂಗ ಶಿವಾಚಾರ್ಯರು
೧೦೭. ಶ್ರೀ ಜಗದ್ಗುರು ಚನ್ನವೃಷಭಲಿಂಗ ಶಿವಾಚಾರ್ಯರು
೧೦೮. ಶ್ರೀ ಜಗದ್ಗುರು ಜಟಾವೃಷಭಲಿಂಗ ಶಿವಾಚಾರ್ಯರು
೧೦೯. ಶ್ರೀ ಜಗದ್ಗುರು ಶಾಂತದೇವ ಶಿವಾಚಾರ್ಯರು
೧೧೦. ಶ್ರೀ ಜಗದ್ಗುರು ಗುರುವೃಷಭರಾಜೇಂದ್ರ ಶಿವಾಚಾರ್ಯರು
೧೧೧. ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು
೧೧೨. ಶ್ರೀ ಜಗದ್ಗುರು ಗುರುಸಿದ್ಧಸ್ವಾಮಿ ಶಿವಾಚಾರ್ಯರು
೧೧೩. ಶ್ರೀ ಜಗದ್ಗುರು ಚಂದ್ರರಾಜೇಂದ್ರ ಶಿವಾಚಾರ್ಯರು
೧೧೪. ಶ್ರೀ ಜಗದ್ಗುರು ಚಂದ್ರಶೇಖರದೇಶಿಕೇಂದ್ರ ಶಿವಾಚಾರ್ಯರು
೧೧೫. ಶ್ರೀ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯರು
೧೧೬. ಶ್ರೀ ಜಗದ್ಗುರು ವೃಷಭರಾಜೇಂದ್ರ ಶಿವಾಚಾರ್ಯರು
೧೧೭. ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು
೧೧೮. ಶ್ರೀ ಜಗದ್ಗುರು ಅಭಿನವರೇಣುಕ ಶಿವಾನಂದ ಶಿವಾಚಾರ್ಯರು
೧೧೯. ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯರು
೧೨೦. ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರ ರುದ್ರಮುನಿದೇವ ಶಿವಾಚಾರ್ಯರು
೧೨೧. ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯರು

ವಿ.ಸೂಚನೆ : ಶ್ರೀ ರಂಭಾಪುರಿ ಈ ಜಗದ್ಗುರು ಪರಂಪರೆಯ ಹೆಸರುಗಳನ್ನು ಶ್ರೀ ಟಿ.ಬಿ.ಬಸವರಾಜಯ್ಯನವರು ಬರೆದ "ರತ್ನಗರ್ಭ ಗಣಪತಿ ಮತ್ತು ಚಂದ್ರಮೌಳೀಶ್ವರ ಲಿಂಗ" ಎಂಬ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

ವೀರಶೈವ ಹಾಗೂ ವೀರಶೈವ ಧರ್ಮದ ಪ್ರಮುಖ ಲಕ್ಷಣಗಳು

(ತತ್ತ್ವತ್ರಯಗಳು)

ಅಷ್ಟಾವರಣವೇ ಅಂಗವಾಗಿ, ಪಂಚಾಚಾರಗಳೇ ಪ್ರಾಣವಾಗಿ,
ಷಟಸ್ಥಲವೇ ಆತ್ಮವಾಗಿರುವವನೇ ವೀರಶೈವನು.

ಅಷ್ಟಾವರಣಗಳು

ಗುರು,ಲಿಂಗ, ಜಂಗಮ, ಪಾದೋದಕ, ಪ್ರಸಾದ
ವಿಭೂತಿ, ರುದ್ರಾಕ್ಷಿ, ಮಂತ್ರ

ಪಂಚಾಚಾರಗಳು

ಲಿಂಗಾಚಾರ, ಸದಾಚಾರ, ಶಿವಾಚಾರ, ಗಣಾಚಾರ, ಭತ್ಯಾಚಾರ

ಷಟಸ್ಥಲಗಳು

ಭಕ್ತ, ಮಾಹೇಶ, ಪ್ರಸಾದಿ, ಪ್ರಾಣಲಿಂಗ, ಶರಣ, ಐಕ್ಯ

ಶ್ರೀ ಉಜ್ಜಯಿನಿ ಪೀಠದ ಪರಂಪರೆ

೨. ಶ್ರೀ ಜಗದ್ಗುರು ಮರುಳಾರಾಧ್ಯರು :

ಶಿವನ ವಾಮದೇವಮುಖ ಸಂಜಾತರಾದ ಶ್ರೀ ಜಗದ್ಗುರು ಮರುಳಾರಾಧ್ಯರು ಶಿವನ ಅಪ್ಪಣೆಯ ಮೇರೆಗೆ ವೀರಶೈವ ಮತ ಸಂಸ್ಥಾಪನೆಗಾಗಿ ಕ್ಷಿಪ್ರಾನದಿಯ ತಟದಲ್ಲಿರುವ ವಟಕ್ಷೇತ್ರದ ಶ್ರೀ ಸಿದ್ಧೇಶ್ವರ ಲಿಂಗದಿಂದ ಪ್ರತಿಯೊಂದು ಯುಗದಲ್ಲೂ ಅವತರಿಸುತ್ತಾ ಬಂದಿದ್ದಾರೆ. ಕೃತಯುಗದಲ್ಲಿ ದ್ವ್ಯಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ದ್ವಿವಕ್ತ್ರ ಶಿವಾಚಾರ್ಯ, ದ್ವಾಪರಯುಗದಲ್ಲಿ ಶ್ರೀದಾರುಕ ಶಿವಾಚಾರ್ಯ ಮತ್ತು ಕಲಿಯುಗದಲ್ಲಿ ಶ್ರೀ ಮರುಳಾರಾಧ್ಯ ಶಿವಾಚಾರ್ಯ ಎಂಬ ಹೆಸರುಗಳು ಇವರಿಗೆ ಇದ್ದುದಾಗಿ (ಸುಪ್ರಭೇದಾಗಮಾಂತರ್ಗತ ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣ, ಪುಟ–೨) (ವೀರಶೈವ ಸದಾಚಾರ ಸಂಗ್ರಹ ೧/೩೭–೩೯); (ಹಿಂದುತ್ವ, ಪುಟ–೬೫) ಗ್ರಂಥಾಧಾರಗಳಿಂದ ತಿಳಿದುಬರುತ್ತದೆ.

ಈ ಪೀಠದ ದ್ವಾಪರಯುಗದ ಆಚಾರ್ಯರಾದ ಶ್ರೀ ಜಗದ್ಗುರು ದಾರುಕಾಚಾರ್ಯರು ನೈಮಿಷಾರಣ್ಯದಲ್ಲಿ ವಾಸಮಾಡುತ್ತಿರುವ ಶ್ರೀ ದಧೀಚಿ ಮಹರ್ಷಿಗಳಿಗೆ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ ಸಕಲ ಶಿಷ್ಯಸಮೇತರಾದ ಅವರನ್ನು ಕೃತಾರ್ಥರನ್ನಾಗಿ ಮಾಡಿದರು.

ತದ್ವನ್ಮರುಳಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶಲಿಂಗಾಜ್ಜನನಂ ಸ್ಥಾನಮುಜ್ಜಯಿನೀಪುರೇ ॥

ಸ್ವಾಯಂಭುವಾಗಮದ ಈ ವಚನಾನುಸಾರವಾಗಿ ಕಲಿಯುಗದ ಆಚಾರ್ಯರಾದ ಶ್ರೀ ಜಗದ್ಗುರು ಮರುಳಾರಾಧ್ಯರು, ಅಂದು ಮಾಳವ ದೇಶವೆಂದು ಪ್ರಸಿದ್ಧವಾದ ಇಂದಿನ ಮಧ್ಯಪ್ರದೇಶದ ಕ್ಷಿಪ್ರಾ ನದಿಯ ದಡದಲ್ಲಿರುವ ಮಹಾಕಾಲ ಉಜ್ಜಯಿನಿಯ ವಟಕ್ಷೇತ್ರದ ಸುಪ್ರಸಿದ್ಧವಾದ ಶ್ರೀ ಸಿದ್ಧೇಶ್ವರ ಮಹಾಲಿಂಗದಿಂದ ಪ್ರಾದುರ್ಭವಿಸಿ, ವೀರಶೈವ ಧರ್ಮೋಪದೇಶಕ್ಕಾಗಿ ಒಂದು ಪೀಠವನ್ನು ಸಂಸ್ಥಾಪಿಸಿದರು. ಅದುವೇ ಸದ್ಧರ್ಮ ಸಿಂಹಾಸನವೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಪಡೆಯಿತು.

ಕಾಲಕಾಲನಾದ ಮಹಾಕಾಲೇಶ್ವರ ಜ್ಯೋತಿರ್ಲಿಂಗದಿಂದಲೂ, ಭಕ್ತರ ಪಾಪವನ್ನು ಕ್ಷಿಪ್ರದಲ್ಲಿಯೇ ನಾಶಪಡಿಸುವ ಮಹಿಮೆಯಿಂದ ಕೂಡಿದ ಕ್ಷಿಪ್ರಾ ನದಿಯಿಂದಲೂ, ಸದ್ಧರ್ಮವನ್ನು ಉಪದೇಶಿಸುವ ಈ ಗುರುಪೀಠದಿಂದಲೂ ಪರಮ ಪವಿತ್ರವಾದ ಈ ಉಜ್ಜಯಿನಿಯಲ್ಲಿ ಶ್ರೌತಪಾಲ ಮತ್ತು ಭಾನುಮತಿ ಎಂಬ ರಾಜದಂಪತಿಗಳು ಪ್ರಜಾಪಾಲನೆಯನ್ನು ಮಾಡುತ್ತಿದ್ದರು.

ಒಂದು ಸಾರಿ ಶ್ರೀ ಶ್ರೌತಪಾಲ ರಾಜನು ಸ್ವರ್ಗದ ಅಭಿಲಾಷೆಯಿಂದ ಅಶ್ವಮೇಧ ಯಾಗವನ್ನು ಮಾಡಲುದ್ಯುಕ್ತನಾದಾಗ, ಯಜ್ಞದಲ್ಲಿ ಸಂಭವಿಸಬಹುದಾದ ಪ್ರಾಣಿಹಿಂಸೆ, ಮಾಂಸಭಕ್ಷಣ, ಸುರಾಪಾನ ಮತ್ತು ವ್ಯಭಿಚಾರಾದಿಗಳ ಬಗ್ಗೆ ರಾಜನಿಗೆ ಅರಿವನ್ನುಂಟುಮಾಡಿದ ಶ್ರೀ ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ಮರುಳಾರಾಧ್ಯರು ರಾಜದಂಪತಿಗಳಿಗೆ ಶಿವದೀಕ್ಷೆಯನ್ನು ಅನುಗ್ರಹಿಸಿ, ಸಾತ್ವಿಕ ಪೂಜಾವಿಧಾನವನ್ನು ತಿಳಿಸಿ, ಅವರಿಗೆ ವೀರಶೈವ ಧರ್ಮದ ಪ್ರಮುಖ ತತ್ತ್ವಗಳಾದ ಅಷ್ಟಾವರಣ, ಪಂಚಾಚಾರ ಮತ್ತು ಷಟ್‌ಸ್ಥಲಗಳ ಅರಿವನ್ನು ಮಾಡಿಕೊಟ್ಟರು.

ನಂತರ ಹಿಮಾಲಯದ ಗಂಗಾ-ಯಮುನಾ ನದಿಗಳ ಮಧ್ಯಭಾಗದಲ್ಲಿ ವಿರಾಜಿಸುವ ದಾರುಕವನಕ್ಕೆ ದಯಮಾಡಿಸಿ ಅಲ್ಲಿಯ ಋಷಿಮುನಿಗಳಿಗೆಲ್ಲ ಶಿವಾದ್ವೈತ ಸಿದ್ಧಾಂತವನ್ನು ಬೋಧಿಸಿ, ಅಲ್ಲಿಂದ ಕಾಶೀಕ್ಷೇತ್ರಕ್ಕೆ ದಯಮಾಡಿಸುತ್ತಾರೆ. ಕಾಶಿಯಲ್ಲಿ ಶ್ರೀ ಜಗದ್ಗುರು ವಿಶ್ವಾರಾಧ್ಯರನ್ನು ಸಂದರ್ಶಿಸಿ ಕಾಶಿಯಲ್ಲಿಯೇ ೪೦೦ ವರ್ಷಗಳವರೆಗೆ ಯೋಗಸಮಾಧಿಯಲ್ಲಿ ಲೀನರಾಗುತ್ತಾರೆ. ಶಿವಯೋಗ ಸಮಾಧಿಯಿಂದ ಎಚ್ಚರಾದ ಬಳಿಕ, ಶ್ರೀ ಜಗದ್ಗುರು ವಿಶ್ವಾರಾಧ್ಯರ ಅಪ್ಪಣೆಯನ್ನು ಪಡೆದು ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯಕ್ಕೆ ಹೋಗಿ ಅಲ್ಲಿಯ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಪಂಡಿತಾರಾಧ್ಯರೊಡನೆ ಧಾರ್ಮಿಕ ಪರ್ಯಾಲೋಚನೆಯನ್ನು ಮಾಡಿ ಅಲ್ಲಿಯ ಅನೇಕ ಋಷಿಮುನಿಗಳಿಗೆ ಶಿವಾದ್ವೈತ ತತ್ತ್ವವನ್ನು ಉಪದೇಶಿಸಿ ಕಾಶ್ಮೀರಕ್ಕೆ ದಯಮಾಡಿಸುತ್ತಾರೆ. ಅಲ್ಲಿ ಶ್ರೀ ಸರಸ್ವತೀ ಪೀಠವೆಂಬ ಮಠವನ್ನು ಸಂಸ್ಥಾಪಿಸಿ ಶಿವಭಕ್ತಿಯ ಪ್ರಚಾರವನ್ನು ಗೈಯುತ್ತಾರೆ. ಇವರ ಈ ಉಪದೇಶದ ಕಾರಣದಿಂದಾಗಿಯೇ ಕಾಶ್ಮೀರದಲ್ಲಿ ಶಿವಭಕ್ತಿಯು ವಿಶೇಷವಾಗಿ ಪ್ರಚಾರವಾಯಿತು.

ಮುಂದೆ ಶ್ರೀ ಜಗದ್ಗುರು ಮರುಳಾರಾಧ್ಯರು ತಮ್ಮ ಅವತಾರದ ಸಮಾಪ್ತಿಯ ಸಮಯವು ಸನ್ನಿಹಿತವಾಗಿರುವುದನ್ನು ಅರಿತು, ಶ್ರೀ ಕೇದಾರ ಕ್ಷೇತ್ರಕ್ಕೆ ದಯಮಾಡಿಸಿ, ಅಲ್ಲಿಯ ಶ್ರೀ ವೈರಾಗ್ಯ ಸಿಂಹಾಸನಾಧೀಶ್ವರರಾದ ಶ್ರೀ ಜಗದ್ಗುರು ಏಕೋರಾಮಾರಾಧ್ಯರನ್ನು ಸಂದರ್ಶಿಸುತ್ತಾರೆ. ನಂತರ ಈರ್ವರೂ ಸ್ನಾನಕ್ಕಾಗಿ ಗೌರೀಕುಂಡಕ್ಕೆ ಬಂದು, ಆ ಕುಂಡದಲ್ಲಿ ಮಿಂದು ಹೊರಬರುವಷ್ಟರಲ್ಲಿ ದಿವ್ಯಶಕ್ತಿಯೊಂದು ಆ ಕುಂಡದಿಂದ ಉದ್ಭವಿಸಿತು. ಆಗ ಉಭಯರೂ ಆ ದಿವ್ಯ ವಟುವನ್ನು ನೋಡಿ ಪರಮಾನಂದಗೊಂಡರು. ಆಗ ಏಕೋರಾಮರು "ಶ್ರೀ ನಂದೀಶ್ವರನೇ ಈ ರೂಪದಿಂದ ಅವತರಿಸಿರುವನು. ಈ ವಟುವಿಗೆ "ಮುಕ್ತಿಮುನಿ" ಎಂದು ನಾಮಕರಣವನ್ನು ಮಾಡುತ್ತೇವೆ. ಈತನೇ ಉಜ್ಜಯಿನಿ ಸದ್ಧರ್ಮ ಪೀಠಕ್ಕೆ ಉತ್ತರಾಧಿಕಾರಿಯಾಗಲಿ" ಎಂಬುದಾಗಿ ಅಪ್ಪಣೆ ಕೊಡಿಸಿದರು.

ನಂತರ ಎಲ್ಲರೂ ಉಜ್ಜಯಿನಿ ಕ್ಷೇತ್ರಕ್ಕೆ ದಯಮಾಡಿಸಿ, ಅಕ್ಷಯ ತೃತೀಯ ಶುಭಮುಹೂರ್ತದಲ್ಲಿ ಶ್ರೀ ಮುಕ್ತಿಮುನಿಗಳಿಗೆ ಪಟ್ಟಾಧಿಕಾರವನ್ನು ವಹಿಸಿ, ಶ್ರೀ ಜಗದ್ಗುರು ಮರುಳಾರಾಧ್ಯರು ಪುನಃ ವಟಕ್ಷೇತ್ರದ ಶ್ರೀ ಸಿದ್ಧೇಶ್ವರ ಲಿಂಗದಲ್ಲಿಯೇ ಲೀನರಾದರು.

ಶ್ರೀ ಜಗದ್ಗುರು ಮುಕ್ತಿಮುನಿಗಳು ಪಟ್ಟಾಧಿಕಾರವನ್ನು ಹೊಂದಿ ೩೦೦ ವರ್ಷಗಳ ಪರ್ಯಂತ ಸದ್ಧರ್ಮ ಪೀಠವನ್ನು ಅಲಂಕರಿಸಿ, ವೀರಶೈವ ಮತವನ್ನು ಸಾಕಷ್ಟು ಪ್ರಚಾರಗೊಳಿಸಿ, ತಮ್ಮ ಅಂತಿಮ ಸಮಯದಲ್ಲಿ ಶ್ರೀ ಜಗದ್ಗುರು ಸಿದ್ಧಮುನಿಗಳಿಗೆ ಪೀಠಾಧಿಕಾರವನ್ನು ಒಪ್ಪಿಸಿ ಲಿಂಗೈಕ್ಯರಾದರು.

ಹೀಗೆ ಈ ಪೀಠ ಪರಂಪರೆಯಲ್ಲಿ ಶ್ರೀ ಜಗದ್ಗುರು ಸಿದ್ಧಮುನಿಗಳು ೨೦೦ ವರ್ಷ, ಶ್ರೀ ಜಗದ್ಗುರು ಶಿವಮುನೀಂದ್ರ ಸ್ವಾಮಿಗಳು ೧೨೫ ವರ್ಷ, ಶ್ರೀ ಜಗದ್ಗುರು ಶಾಂತಮುನಿಗಳು ೭೦ ವರ್ಷ, ಶ್ರೀ ಜಗದ್ಗುರು ಭವಭೂತಿ ಮುನಿಗಳು ೧೦೦ ವರ್ಷ ಸಿಂಹಾಸನಾರೂಢರಾಗಿದ್ದರು. ಶ್ರೀ ಜಗದ್ಗುರು ಭವಭೂತಿ ಮುನಿಗಳು ಮಹಾತಪಸ್ವಿಗಳೂ, ಘನ ವಿದ್ವಾಂಸರೂ ಆಗಿದ್ದರು. ಉಜ್ಜಯಿನಿಯ ಭೋಜರಾಜ ಹಾಗೂ ಅವನ ಆಸ್ಥಾನ ಕವಿಗಳಾದ ಕಾಳಿದಾಸಾದಿಗಳಿಂದ ಇವರು ಮನ್ನಣೆಯನ್ನು ಪಡೆದವರಾಗಿದ್ದರು. ತಮ್ಮ ತರುವಾಯ ಶ್ರೀ ಜಗದ್ಗುರು ಇಮ್ಮಡಿ ಮುಕ್ತಿಮುನಿಗಳಿಗೆ ಪೀಠಾಧಿಕಾರವನ್ನು ಕೊಟ್ಟು ಲಿಂಗೈಕ್ಯರಾದರು.

ಇದೇ ಪ್ರಕಾರ ಶ್ರೀ ಜಗದ್ಗುರು ಇಮ್ಮಡಿ ಮುಕ್ತಿಮುನಿಗಳು ೫೦ ವರ್ಷ, ಶ್ರೀಜಗದ್ಗುರು ಶಕ್ತಿಮುನಿಗಳು ೨೦೦ವರ್ಷ. ಶ್ರೀ ಜಗದ್ಗುರು ಇಮ್ಮಡಿ ಸಿದ್ಧಮುನಿಗಳು ೪೦ ವರ್ಷ, ಶ್ರೀ ಜಗದ್ಗುರು ಇಮ್ಮಡಿ ಶಾಂತಮುನಿಗಳು ೬೦ ವರ್ಷ, ಶ್ರೀ ಜಗದ್ಗುರು ಮುಮ್ಮಡಿ ಸಿದ್ಧಮುನಿಗಳು ೫೫ ವರ್ಷ, ಶ್ರೀ ಜಗದ್ಗುರು ಸಾಂಬಮುನಿಗಳು ೧೦೦ ವರ್ಷ, ಶ್ರೀ ಜಗದ್ಗುರು ಇಮ್ಮಡಿ ಶಿವಮುನಿಗಳು ೩೦ ವರ್ಷ ಮತ್ತು ಶ್ರೀ ಜಗದ್ಗುರು ಈಶಾನ್ಯಮುನಿಗಳು ೭೫ ವರ್ಷ ಧರ್ಮ ಸಿಂಹಾಸನಾಸೀನರಾಗಿ ಮಧ್ಯಪ್ರದೇಶದಲ್ಲಿ ವೀರಶೈವ ಧರ್ಮವನ್ನು ಬಹಳಷ್ಟು ಪ್ರಚಾರಗೊಳಿಸಿದರು.

ಇವರ ತರುವಾಯ ಶ್ರೀ ಜಗದ್ಗುರು ಶಂಭುಮುನಿಗಳು ಈ ಪೀಠ ಪರಂಪರೆಯಲ್ಲಿ ೧೫ನೆಯ ಪೀಠಾಧಿಪತಿಗಳಾಗಿ ಅಧಿಕಾರವನ್ನು ಸ್ವೀಕರಿಸಿದ್ದಾರೆ. ಇಷ್ಟು ಹೊತ್ತಿಗೆ ಜೈನಧರ್ಮವು ಬಹಳಷ್ಟು ಪ್ರಚಾರದಲ್ಲಿತ್ತು. ಆಗ ಜೈನಧರ್ಮದವನಾದ ಶ್ರೀ ವೀರಸೇನ ರಾಜನು ವೀರಶೈವ ಧರ್ಮವನ್ನು ನಾಶಗೊಳಿಸಲು ಪಣತೊಟ್ಟವನಾಗಿದ್ದನು. ಶ್ರೀ ಜಗದ್ಗುರು ಶಂಭುಮುನಿಗಳು "ಶಠೇ ಶಾಠ್ಯಂ ಸಮಾಚರೇತ್" ಎಂಬ ನೀತಿಗನುಸಾರವಾಗಿ, ರಾಜನೊಡನೆ ಪ್ರತಿಭಟಿಸಲು ಸೈನ್ಯವನ್ನು ಸಂಗ್ರಹಿಸಿ ಕೊನೆಗೆ ವೀರಸೇನ ರಾಜನೊಡನೆ ಹೋರಾಡಿ ವಿಜಯವನ್ನು ಸಂಪಾದಿಸಿದರು.

ಈ ಯುದ್ಧದಲ್ಲಿ ವಿಜಯವನ್ನು ಸಂಪಾದಿಸಿದರೂ ಶ್ರೀ ಜಗದ್ಗುರು ಶಂಭುಮುನಿಗಳಿಗೆ

ಸಮಾಧಾನವಾಗಲಿಲ್ಲ. ಆಗ ಅವರು ಈ ತರಹದ ಕಲಹವೇ ಬೇಡವೆಂದು ಭಾವಿಸಿ, ಉಜ್ಜಯಿನಿಯನ್ನು ಬಿಟ್ಟು ಅಡವಿಯಲ್ಲಿ ಪ್ರಶಾಂತ ಸ್ಥಳದಲ್ಲಿ ಪರ್ಣಕುಟೀರವನ್ನು ನಿರ್ಮಿಸಿಕೊಂಡು ೭೦ ವರ್ಷಗಳವರೆಗೆ ಧರ್ಮಕಾರ್ಯವನ್ನು ಮಾಡಿ ಕೊನೆಗೆ ತಮ್ಮ ಪ್ರೀತಿಯ ಶಿಷ್ಯರಾದ ಶ್ರೀ ಮರುಳಸಿದ್ಧರಿಗೆ ಜಗದ್ಗುರು ಪಟ್ಟಾಧಿಕಾರವನ್ನು ವಹಿಸಿ ಲಿಂಗೈಕ್ಯರಾದರು.

ಶ್ರೀ ಸದ್ಧರ್ಮ ಪೀಠದ ಸ್ಥಳಾಂತರ :

ಶ್ರೀ ಜಗದ್ಗುರು ಶಂಭುಮುನಿಗಳು ಲಿಂಗೈಕ್ಯರಾದ ನಂತರ ಶ್ರೀ ಜಗದ್ಗುರು ಮರುಳಸಿದ್ಧರು ಜೈನರಾಜರ ಉಪದ್ರವಕ್ಕಾಗಿ ಮಧ್ಯಪ್ರದೇಶದ ಉಜ್ಜಯಿನಿಯ ಪರಿಸರವನ್ನು ತ್ಯಾಗಮಾಡಿ ಶಿಷ್ಯ ಸಮೇತರಾಗಿ ಮಹಾರಾಷ್ಟ್ರದ ವಿಭಿನ್ನ ಸ್ಥಾನಗಳಲ್ಲಿ ಸಂಚರಿಸುತ್ತ ಅಲ್ಲಲ್ಲಿಯ ಭಕ್ತರ ಸಹಯೋಗ, ಸಹಕಾರಗಳಿಂದ ಮಠಗಳನ್ನು ನಿರ್ಮಿಸಿ, ಅಲ್ಲಲ್ಲಿ ಒಬ್ಬೊಬ್ಬ ಶಿಷ್ಯರನ್ನು ಇರಿಸುತ್ತ, ಪರಳಿ ಮುಂತಾದ ಜ್ಯೋತಿರ್ಲಿಂಗಗಳ ಸ್ಥಾನವನ್ನು ಸಂದರ್ಶಿಸಿ, ಕೊಲ್ಹಾಪುರ ಸಮೀಪದ "ಸಿದ್ಧಗಿರಿ" ಎಂಬ ಸ್ಥಾನಕ್ಕೆ ದಯಮಾಡಿಸುತ್ತಾರೆ. ಶ್ರೀ ಜಗದ್ಗುರು ಮರುಳಸಿದ್ಧರು ಹೀಗೆ ಮಹಾರಾಷ್ಟ್ರದ ಅನೇಕ ಭಾಗಗಳಲ್ಲಿ ಸಂಚರಿಸಿದುದರಿಂದ ಮಹಾರಾಷ್ಟ್ರದಲ್ಲಿ ಉಜ್ಜಯಿನೀ ಶಾಖಾಮಠಗಳು ಅಧಿಕವಾಗಿರುತ್ತವೆ.

ಶ್ರೀ ಜಗದ್ಗುರು ಮರುಳಸಿದ್ಧರು ಸಿದ್ಧಗಿರಿಗೆ ಆಗಮಿಸಿದಾಗ ಅಲ್ಲಿ ಶ್ರೀ ಜಗದ್ಗುರು ರೇವಣಸಿದ್ಧರ ಸಂದರ್ಶನವಾಗುತ್ತದೆ. ಇಂದಿನ ಈ ಸಿದ್ಧಗಿರಿಮಠವು ರಂಭಾಪುರಿ ಶಾಖಾಮಠವಾಗಿರುತ್ತದೆ. ಶ್ರೀ ಜಗದ್ಗುರು ಮರುಳಸಿದ್ಧರ ಮಹಾಕಾಲ ಉಜ್ಜಯಿನಿಯ ಸದ್ಧರ್ಮ ಪೀಠಕ್ಕೆ ಬಂದೊದಗಿದ ವಿಪತ್ತನ್ನರಿತ ಶ್ರೀ ಜಗದ್ಗುರು ರೇವಣಸಿದ್ಧರು ಶ್ರೀ ಜಗದ್ಗುರು ಮರುಳಸಿದ್ಧರಿಗೆ ಸಾಂತ್ವನವನ್ನು ಹೇಳಿ ಕರ್ನಾಟಕ ಪ್ರದೇಶದ ಕೊಟ್ಟೂರು ಬಳಿಯಲ್ಲಿಯೇ ಉಜ್ಜಯಿನಿ ಎಂಬ ಹೊಸ ಪಟ್ಟಣವನ್ನು ನಿರ್ಮಾಣಗೊಳಿಸಿ ಅಲ್ಲಿಯೇ ಸದ್ಧರ್ಮ ಪೀಠವನ್ನು ಪುನಃ ಸ್ಥಾಪಿಸಲು ಸಲಹೆಯನ್ನು ಕೊಡುತ್ತಾರೆ.

ಶ್ರೀ ಜಗದ್ಗುರು ರೇವಣಸಿದ್ಧರ ಆದೇಶದಂತೆ ಶ್ರೀ ಜಗದ್ಗುರು ಮರುಳಸಿದ್ಧರು ಕೊಲ್ಹಾಪುರದ ಶ್ರೀ ಮಾಯಾದೇವಿಯ ಗರ್ವಾಪಹರಣವನ್ನು ಮಾಡಿ ಅಪಾರ ಕೀರ್ತಿಯನ್ನು ಸಂಪಾದಿಸಿದರು. ಅಲ್ಲದೇ ಅಲ್ಲಿಯ ಕರಟಾಸುರನಿಗೆ ಮತ್ತು ಅವನ ಪರಿವಾರದವರಿಗೆಲ್ಲ ಶಿವದೀಕ್ಷೆಯನ್ನು ಮಾಡಿ ಅನುಗ್ರಹಿಸಿದರು. ನಂತರ ಓರಂಗಲ್ಲಿಗೆ ಹೋಗಿ ಅಲ್ಲಿಯ ಕಾಕತೀಯ ರಾಜವಂಶದ ಗಣಪತಿ ರಾಜನನ್ನು ಮತ್ತು ಹೊಸ ಕಲ್ಯಾಣದ ಶ್ರೀ ಸೋಮೇಶ್ವರ ರಾಜನನ್ನು ಕಂಡರು. ಅವರ ಸಹಾಯದಿಂದ ಶ್ರೀ ಜಕ್ಕಣಚಾರ್ಯರ ಶಿಲ್ಪಸೇವೆಯಿಂದ ಹೊಸದಾಗಿ ಸ್ಥಾಪಿಸಲ್ಪಟ್ಟ ಉಜ್ಜಯಿನಿಯಲ್ಲಿ ಸದ್ಧರ್ಮ ಪೀಠವನ್ನು ನಿರ್ಮಾಣಗೊಳಿಸಿ, ಆ ಪೀಠದಲ್ಲಿ ಮೂಲ ಮರುಳಾರಾಧ್ಯರ ತರುವಾಯದ ಹದಿನಾಲ್ಕು ಜನ ಗುರುಪರಂಪರೆಯ ಮೂರ್ತಿಗಳನ್ನು ಮತ್ತು ಮೂಲ ಮರುಳಾರಾಧ್ಯರ ಒಂದು ಲಿಂಗವನ್ನೂ ಸಂಸ್ಥಾಪಿಸಿದರು. ಈ ಪೀಠದಲ್ಲಿಯ ಒಳಭಾಗವು ಅನೇಕ ಕಲಾಕೃತಿಯಿಂದ ಕೂಡಿಕೊಂಡಿದೆ. ಅಂತೆಯೇ "ಹಂಪೆಯ ಗುಡಿ ಹೊರಗೆ ನೋಡಬೇಕು, ಉಜ್ಜಯಿನಿಯ ಮಠದ ಒಳಗೆ ನೋಡಬೇಕು" ಎಂಬುದು ಇಂದಿಗೂ ಗಾದೆಯ ಮಾತಿನಂತಿದೆ.

ಹೀಗೆ ವಿನೂತನವಾಗಿ ನಿರ್ಮಾಣಗೊಂಡ ಕರ್ನಾಟಕದ ಉಜ್ಜಯಿನೀ ಸದ್ಧರ್ಮ ಸಿಂಹಾಸನಕ್ಕೆ ಶ್ರೀ ಜಗದ್ಗುರು ಮರುಳಸಿದ್ಧರನ್ನು ಪೀಠಾಧ್ಯಕ್ಷರನ್ನಾಗಿ ಮಾಡಲಾಯಿತು ಈ ಮಂಗಲಕಾರ್ಯಕ್ಕೆ ಶ್ರೀ ಜಗದ್ಗುರು ರೇವಣಸಿದ್ಧರು, ಶ್ರೀ ಜಗದ್ಗುರು ಪಂಡಿತಾರಾಧ್ಯರು ದಯಮಾಡಿಸಿದರು ಹಾಗೂ ರಾಷ್ಟ್ರಕೂಟ, ಓರಂಗಲ್ ಪುರಿಗಳ ಭೂಪಾಲರೂ ಆಗಮಿಸಿ ತಮ್ಮ ಭಕ್ತಿಕಾಣಿಕೆಯನ್ನು ಸಮರ್ಪಿಸಿದರಲ್ಲದೇ ಭುವನೈಕಮಲ್ಲ ಶ್ರೀ ಸೋಮೇಶ್ವರನು ಸಮ್ಮಾನಪೂರ್ವಕವಾಗಿ ೧೨೦ ಮಠಗಳನ್ನು ತನ್ನ ರಾಜ್ಯದಲ್ಲಿಯೇ ಉಂಬಳಿಯಾಗಿ ಕೊಟ್ಟನು.

ಈ ರೀತಿಯಾಗಿ ವೈಭವದ ಅಧಿಕಾರವನ್ನು ಹೊಂದಿದ ನಂತರ ಭಕ್ತವೃಂದದ ಮತ್ತು ಅನೇಕ ಮಹಾರಾಜರ ಬಯಕೆಗಳನ್ನು ಈಡೇರಿಸುತ್ತ ಓರಂಗಲ್ಲ, ಹಂಪೆ, ಕೂಡಲಸಂಗಮ, ಕಪ್ಪತಗುಡ್ಡ, ಹರಪುರಿ ಮುಂತಾದ ಸ್ಥಳಗಳಲ್ಲಿ ಸಂಚರಿಸಿ ವೀರಶೈವ ಧರ್ಮೋಪದೇಶವನ್ನು ಮಾಡುತ್ತಿರುವಾಗ ಬಹಳಷ್ಟು ಜೈನ ಧರ್ಮೀಯರು ಇವರಿಂದ ಲಿಂಗದೀಕ್ಷೆಯನ್ನು ಪಡೆದರು. ಶ್ರೀ ಜಗದ್ಗುರು ಮರುಳಸಿದ್ಧರು ೧೭೦ ವರ್ಷಗಳವರೆಗೆ ಉಜ್ಜಯಿನಿಯ ಸದ್ಧರ್ಮ ಸಿಂಹಾಸನಾಧಿಪತಿಗಳಾಗಿದ್ದು ಕೊನೆಗೆ ಶ್ರೀ ಸಿದ್ಧಪಂಡಿತರಿಗೆ ಪಟ್ಟವನ್ನು ವಹಿಸಿ ತಾವು ಲಿಂಗೈಕ್ಯರಾದರು.

ವಿನೂತನವಾದ ಈ ಉಜ್ಜಯಿನೀ ಪೀಠದ ಗುರುಪರಂಪರೆಯಲ್ಲಿ ಶ್ರೀ ಜಗದ್ಗುರು ಸಿದ್ಧಲಿಂಗಾಚಾರ್ಯರು ೪೫ ವರ್ಷ, ಜಗದ್ಗುರು ಸಿದ್ಧೇಶ್ವರಾಚಾರ್ಯರು ೮೦ ವರ್ಷ ಮತ್ತು ಶ್ರೀ ಜಗದ್ಗುರು ಸಿದ್ಧನಾಥಾರಾಧ್ಯರು ೩೦ ವರ್ಷ – ಹೀಗೆ ಸಿಂಹಾಸನಾಸೀನರಾಗಿ ಪೀಠದ ಘನತೆಯನ್ನು ಬೆಳೆಸಿದರು. ಶ್ರೀ ಜಗದ್ಗುರು ಸಿದ್ಧನಾಥಾರಾಧ್ಯರು ತಮ್ಮ ಅಂತ್ಯಕಾಲದಲ್ಲಿ ಹೂಲಿಯ ಸಿದ್ಧನಂಜೇಶ್ವರ ವಂಶದ ಮರುಳಾರಾಧ್ಯರಿಗೆ ಪಟ್ಟವನ್ನು ಕಟ್ಟಿ ಲಿಂಗೈಕ್ಯರಾದರು.

ಪಟ್ಟಕ್ಕೆ ಬಂದ ಶ್ರೀ ಜಗದ್ಗುರು ಮರುಳಾರಾಧ್ಯರು ಯೋಗಸಾಮರ್ಥ್ಯ ಉಳ್ಳವರಾದ್ದರಿಂದ ಅನೇಕ ಭಕ್ತರ ಬಯಕೆಗಳನ್ನು ಸಹಜವಾಗಿ ಈಡೇರಿಸುತ್ತಿದ್ದರು. ಇವರ ಅನುಗ್ರಹದಿಂದಲೇ ಕಗ್ಗಲಿಪುರದ ಗೌಡನಿಗೆ ಪುತ್ರಸಂತಾನ ಪ್ರಾಪ್ತವಾಯಿತು. ಅದರಂತೆ ತರೀಕೆರೆಯ ಸೋಮಣ್ಣನೆಂಬ ಕುರುಬಗೌಡನಿಗೂ ಪುತ್ರಪ್ರಾಪ್ತಿಯಾಯಿತು. ಈ ಕೂಸಿಗೆ ಅಮೋಘಸಿದ್ಧನೆಂದು ನಾಮಕರಣ ಮಾಡಿದರು. ಇವನಿಗೆ ಶಿವದೀಕ್ಷೆಯನ್ನು ಕೊಟ್ಟು ಹೂಲಿಗೆ ಕರೆತಂದು ಅಲ್ಲಿ ಹಿರಿಯ ಕುಂಭಿಯ ವೀರಶೈವ ಕುರುಬರಿಗೆ ಶ್ರೀ ಅಮೋಘಸಿದ್ಧನನ್ನೇ ಗುರುವನ್ನಾಗಿ ಮಾಡಿದರು. ಅನಂತರ ಕಗ್ಗಲಿಪುರದಲ್ಲಿ ಮರುಳಸಿದ್ಧ ಮೂರ್ತಿಯನ್ನು ಸಂಸ್ಥಾಪಿಸಿ, ಬೇತೂರು, ಆನೇಗೋಡುಗಳಲ್ಲಿ ಪ್ರಯಾಣ ಮಾಡುತ್ತ ಶ್ರೀ ಸಿದ್ಧಮಹೇಶ್ವರ ಎಂಬವರಿಗೆ ಪೀಠದ ಉತ್ತರಾಧಿಕಾರವನ್ನು ವಹಿಸಿ, ತಾವು ಹೂಲಿಯಲ್ಲಿಯೇ ಲಿಂಗೈಕ್ಯರಾದರು.

ಶ್ರೀ ಜಗದ್ಗುರು ಸಿದ್ಧಮಲ್ಲೇಶ್ವರರು ತಮ್ಮ ತಪೋಬಲದಿಂದ ಬರಗಾಲದಲ್ಲಿ ಮಳೆ ತರಿಸಿದ್ದರಿಂದ "ಮಳೆಮಲ್ಲೇಶ್ವರ"ರೆಂತಲೂ, ಸಂತಾನ ಇಲ್ಲದವರಿಗೆ ಸಂತಾನ ಕರುಣಿಸಿದ್ದರಿಂದ "ಸಂತಾನಮಲ್ಲೇಶ್ವರ"ರೆಂತಲೂ ಪ್ರಸಿದ್ಧರಾದರು. ಇವರು "ಸಾವಿರಕ್ಕೊಂದು ಸಂತಾನ" ಎಂದು ಸಾರಿದ್ದರಿಂದ ಬಹಳಷ್ಟು ಜನರು ಸಾವಿರಹೊನ್ನು ಕೊಟ್ಟು ಸಂತಾನವನ್ನು ಪಡೆದರು. ಇವರಲ್ಲಿ ಉಜ್ಜಯಿನಿಯ ಬಿಜ್ಜೇಗೌಡ, ಬಾಗಳಿ ಬಸವನಾಯಕ, ಓಂಕಾರನಾಯಕ, ಹರಪುರಿಯ ಬುಳ್ಳ ನೃಪಾಲ ಮತ್ತು ವಿಜಯನಗರದ ಶ್ರೀ ಪ್ರೌಢರಾಯರು ಮುಖ್ಯರಾಗಿದ್ದಾರೆ. ಶ್ರೀ ಪ್ರೌಢರಾಯನಿಗೆ ಸಂತಾನವಾದ ನಂತರ ವಿಜಯನಗರದಲ್ಲಿ ಶ್ರೀ ಜಗದ್ಗುರು ಸಿದ್ಧಮಲ್ಲೇಶ ಯೋಗಿಗಳ

ತಪಃಪ್ರಭಾವದಿಂದ ಶಿವಭಕ್ತಿಯ ಪ್ರಚಾರವಾಯಿತು. ಅಂತೆಯೇ ಪ್ರೌಢರಾಯನ ಅಮಾತ್ಯನಾದ ಲಕ್ಕಣ್ಣ ದಂಡೇಶನು "ಶಿವತತ್ತ್ವ ಚಿಂತಾಮಣಿ" ಎಂಬ ಗ್ರಂಥವನ್ನು ಬರೆದು ಗುರುಗಳ ಅನುಗ್ರಹಕ್ಕೆ ಪಾತ್ರನಾದನು.

ಮುಂದೆ ಒಮ್ಮೆ ಸಿಂದೋಗಿಪುರದ ಗೌಡನು ಸಾವಿರಹೊನ್ನು ಕೊಟ್ಟು ಸಂತಾನ ಪಡೆದದ್ದನ್ನು ಕಂಡು ಆತನ ಆಳುಮಗನಾದ ಹೊಲೆಯ ಜಾತಿಯ ಮಾರನೂ ಸಂತಾನಾಪೇಕ್ಷಿಯಾಗಿ ಗುರುಗಳನ್ನು ಬೇಡಿಕೊಂಡಾಗ ಗುರುವಾನುಗ್ರಹದಿಂದ ಮಾರನಿಗೂ ಗಂಡುಸಂತಾನವಾಯಿತು. ಈ ಮಾರನಿಗೆ ಸಾವಿರಹೊನ್ನು ಕೊಡುವದಾಗದ್ದರಿಂದ ಸಾವಿರ ಕುಳ್ಳುಗಳನ್ನು ಕೊಟ್ಟು ದಾಸೋಹ ಸೇವೆಯನ್ನು ಮಾಡಿ ಗುರುಕೃಪೆಯನ್ನು ಪಡೆದನು. ಸಿಂದೋಗಿಯ ಮಾರನಿಗೆ ಹುಟ್ಟಿದ ಆ ಕೂಸಿಗೆ ಮರುಳಸಿದ್ಧನೆಂದು ಹೆಸರಿಟ್ಟರು. ಮುಂದೆ ಶ್ರೀ ಗುರುಗಳು ಈತನ ಪೂಜೆಗಾಗಿ ಸಿಂದೋಗಿಯ ಮಾದಿಗ ಕೇರಿಯಲ್ಲಿಯೇ ಭವ್ಯವಾದ ಮರುಳಸಿದ್ಧ ದೇವಾಲಯವನ್ನು ಕಟ್ಟಿಸಿ, ಅಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ಅದರ ಪೂಜೆಯ ಭಾರವನ್ನು ಈ ಮರುಳಸಿದ್ಧನಿಗೇ ಒಪ್ಪಿಸಿದರು. ಈತನೇ ಮುಂದೆ ಒಬ್ಬ ಶರಣನಂತೆ ಬಾಳಿ ಬೆಳಗಿದನು.

ಸಿಂದೋಗಿಯ ಹರಳನು ತಾನೂ ಮರುಳಸಿದ್ಧ ಮಂದಿರದಲ್ಲಿ ಪೂಜಿಸುವುದಾಗಿ ಬೇಡಿಕೊಂಡಾಗ ಶ್ರೀ ಗುರುಗಳು ಇವನನ್ನು ಉಜ್ಜಯಿನಿಗೆ ಕರೆದುಕೊಂಡು ಹೋಗಿ ಅಲ್ಲಿಯ ಮಾದಿಗ ಕೇರಿಯಲ್ಲಿ ಒಂದು ಮಂದಿರವನ್ನು ಕಟ್ಟಿಸಿ ಅಲ್ಲಿ ಪೂಜೆಗಾಗಿ ಈ ಹರಳನನ್ನು ನೇಮಿಸಿದರು.

ಹೀಗೆ ಶ್ರೀ ಜಗದ್ಗುರು ಸಿದ್ಧಮಲ್ಲೇಶ್ವರರು ಭಕ್ತೋದ್ಧಾರ ಮಾಡುತ್ತ ೮೦ ವರ್ಷ ಕಾಲ ಜೀವಿಸಿ ಕೊನೆಗೆ ಶ್ರೀ ಜಗದ್ಗುರು ಸಿದ್ಧನಾಥಾಚಾರ್ಯರಿಗೆ ಪಟ್ಟವನ್ನು ಕಟ್ಟಿ ಶಿವರಾತ್ರಿಯ ದಿವಸ ಲಿಂಗೈಕ್ಯರಾದರು. ಆ ಸಮಯಕ್ಕೇನೇ ಇವರ ಶಿಷ್ಯರಾದ ಉಜ್ಜಯಿನಿಯ ಹರಳ ಮತ್ತು ಸಿಂದೋಗಿಯ ಮರುಳಸಿದ್ಧರಿಬ್ಬರೂ ಗುರುಧ್ಯಾನ ಮಾಡುತ್ತ ಶಿವಾಧೀನರಾದರು.

ಭವ್ಯವಾದ ಈ ಉಜ್ಜಯಿನೀ ಪೀಠ ಪರಂಪರೆಯಲ್ಲಿ ಶ್ರೀ ಜಗದ್ಗುರು ಸಿದ್ಧನಾಥರು ೬೫ ವರ್ಷ, ಶ್ರೀ ಜಗದ್ಗುರು ಸಿದ್ಧೇಶ್ವರರು ೯೫ ವರ್ಷ – ಹೀಗೆ ಪೀಠಾಧಿಕಾರವನ್ನು ನಡೆಸಿದ ನಂತರ ಶ್ರೀ ಗುರುಸಿದ್ಧ ವಟುಗಳಿಗೆ ಅಧಿಕಾರ ಪ್ರಾಪ್ತವಾಗುತ್ತದೆ.

(ವಿಶೇಷ ವಿಚಾರ : ಶ್ರೀ ಉಜ್ಜಯಿನೀ ಪೀಠದ ಈ ಭವ್ಯ ಪರಂಪರೆ ಹೂಲಿಯ ಪಂಚವಣ್ಣಿಗೆಯ ನಂದೀಶ ಶಿವಕವಿ ವಿರಚಿತ 'ಶ್ರೀ ಜಗದ್ಗುರು ಮರುಳಾರಾಧ್ಯ ವಿಜಯ'ವೆಂಬ ಕಾವ್ಯದ ಗದ್ಯಾನುವಾದ ರೂಪವಾದ ಪಂ॥ ಕವಲಿ ಚೆನ್ನಬಸಪ್ಪ, ವೇ॥ ಮಠದ ಮರಿದೇವ ಸ್ವಾಮಿಗಳಿಂದ ಸಂಪಾದಿತವಾಗಿ ೧೯೪೯ರಲ್ಲಿ ಪ್ರಕಟವಾದ "ಶ್ರೀ ಮರುಳ ಸಿದ್ಧಾಂಕ" ಎಂಬ ಗ್ರಂಥದ ಆಧಾರದ ಮೇಲಿಂದ ಬರೆಯಲಾಗಿದೆ.)

೧೯೩೮ರಲ್ಲಿ ಕಾಶಿಯಲ್ಲಿ ಪ್ರಕಾಶಿತವಾದ ಶ್ರೀ ರಾಮದಾಸ ಗೌಡರಿಂದ ವಿರಚಿತವಾದ "ಹಿಂದುತ್ವ" ಎಂಬ ಹಿಂದೀ ಭಾಷೆಯ ಪುಸ್ತಕದ ೬೯೫ನೇ ಪುಟದಲ್ಲಿ

"ಅವಂತಿಕಾಪುರೀ ಕೇ ಸಿದ್ಧೇಶ್ವರಲಿಂಗ ಸೇ, ಜೋ ಭಗವಾನ್ ಕೇ ವಾಮದೇವರೂಪ ಹೈ, ಭಗವಾನ್ ಮರುಲಾರಾಧ್ಯಜೀ ಪ್ರಕಟ್ ಹುಯೇ। ಕಹತೇ ಹೈ ಕೀ ವೇ ಅವಂತಕೀಕೇ ರಾಜಾಸೇ ಅನಬನ ಹೋ ಜಾನೇಕೇ ಕಾರಣ್, ಬಲ್ಲರೀ ಜಿಲೇಕೇ ಏಕ್ ಗಾಂವ್ ಮೇ ಆಕರ್ ಬಸ್ ಗಯೇ। ಉನಕೇ ಬಸನೇ ಸೇ ಉಸ್ ಗಾಂವ್‌ಕಾ ನಾಮ್ ಭೀ ಉಜ್ಜಯಿನೀ ಪಡ್‌ಗಯಾ । ಅವಂತೀ ಮೇ ಭೀ ಇಸ್‌ಕೀ ಏಕ ಶಾಕಾಮಠ ಅಬ್ತಕ್ ಮೌಜೂದ್ ಹೈ॥"

ಇದರ ಅರ್ಥವೇನೆಂದರೆ–

"ಪರಮಾತ್ಮನ ವಾಮದೇವಮೂರ್ತಿ ಸ್ವರೂಪವಾದ ಅವಂತಿಕಾಪುರಿಯ ಶ್ರೀ ಸಿದ್ಧೇಶ್ವರ ಲಿಂಗದಿಂದ ಶ್ರೀ ಮರುಳಾರಾಧ್ಯರು ಪ್ರಕಟವಾದರು. ಕಾಲಾಂತರದಲ್ಲಿ ಅವಂತಿಕಾ ರಾಜರಿಂದ ಮನಸ್ತಾಪ ಉಂಟಾದಾಗ ಆ ಸ್ಥಾನವನ್ನು ತ್ಯಜಿಸಿ ಬಳ್ಳಾರಿ (ಕರ್ನಾಟಕ)ಜಿಲ್ಲೆಯ ಒಂದು ಊರಿನಲ್ಲಿ ಬಂದು ವಾಸಮಾಡಿದರು. ಅಂದಿನಿಂದ ಆ ಊರಿಗೆ "ಉಜ್ಜಯಿನಿ" ಎಂದೇ ಹೆಸರಾಯಿತು. ಅವಂತಿಕಾದಲ್ಲಿ ಈಗಲೂ ಇವರ ಒಂದು ಮಠವು ಇದೆ" ಎಂದು ಹೇಳಲ್ಪಟ್ಟಿದೆ. ಶ್ರೀ ರಾಮದಾಸ ಗೌಡರ ಈ ಮಾತಿನಿಂದ ಇತ್ತೀಚಿನವರೆಗೆ ಮಧ್ಯಪ್ರದೇಶದ ಉಜ್ಜಯಿನಿಯಲ್ಲಿ ಶ್ರೀ ಜಗದ್ಗುರು ಮರುಳಾರಾಧ್ಯರ ಸದ್ಧರ್ಮ ಸಿಂಹಾಸನ ಮಠವು ಅಸ್ತಿತ್ವದಲ್ಲಿ ಇತ್ತೆಂಬುದು ತಿಳಿದುಬರುತ್ತದೆ. ಕಾಳ ಗತಿಸಿದಂತೆ ನಮ್ಮವರು ಯಾರೂ ಅಲ್ಲಿ ವಾಸಮಾಡದ ಪರಿಣಾಮವಾಗಿ ಇಂದು ಆ ಸ್ಥಾನವು ಅನ್ಯರಿಂದ ಆಕ್ರಮಿಸಲ್ಪಟ್ಟಿರುವುದು ವೀರಶೈವ ಧರ್ಮದ ದುರ್ದೈವವೆಂದೇ ಹೇಳಬೇಕಾಗುವುದು೧.

ಈ ಉಜ್ಜಯಿನಿ ಪೀಠದ ಆದ್ಯ ಮರುಳಾರಾಧ್ಯರನ್ನು ಮೊದಲ್ಗೊಂಡು ಇಂದು ಪೀಠಸ್ಥರಾಗಿರುವ ಶ್ರೀ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರೆಗೆ ಶ್ರೀ ಪೀಠದ ಪಟ್ಟವಲ್ಲರಿಯ ಪ್ರಕಾರ ೧೧೧ ಜನ ಮಹಾಸ್ವಾಮಿಗಳವರು ಶ್ರೀ ಉಜ್ಜಯಿನಿ ಸದ್ಧರ್ಮ ಸಿಂಹಾಸನದ ಅಧಿಪತಿಗಳಾಗಿದ್ದಾರೆ. ಇವರಲ್ಲಿ ಬಹಳಷ್ಟು ಪೀಠಾಧಿಪತಿಗಳ ಜೀವನ ಚರಿತ್ರೆಗಳು ಕಾಲಗರ್ಭದಲ್ಲಿ ಅಡಗಿಹೋಗಿವೆ.

---

೧. ವೀರಶೈವ ಪಂಚಪೀಠಗಳಲ್ಲೊಂದಾದ ಉಜ್ಜಯಿನಿ ಪೀಠದ ಮೂಲ ಆಚಾರ್ಯರಾದ ಶ್ರೀ ಜಗದ್ಗುರು ದಾರುಕಾಚಾರ್ಯರು ಸಿದ್ಧೇಶ್ವರ ಲಿಂಗದಿಂದ ಉದ್ಭವರಾಗಿ ಸದ್ಧರ್ಮ ಪೀಠ ಸ್ಥಾಪಿಸಿದ ಮಧ್ಯಪ್ರದೇಶದ ಉಜ್ಜಯಿನಿಯಲ್ಲಿರುವ ಭೈರವಗಡ ಸಿದ್ಧ ವಟಕ್ಷೇತ್ರದ ಪವಿತ್ರ ಪರಿಸರದಲ್ಲಿ 'ಶ್ರೀ ಜಗದ್ಗುರು ಸಿದ್ಧೇಶ್ವರ ಸದ್ಧರ್ಮ ಕಾರ್ಯ ಸೇವಾ ಸಮಿತಿ' ಎಂಬ ಟ್ರಸ್ಟ್ ಅಸ್ತಿತ್ವಕ್ಕೆ ಬಂದಿದೆ.

ಹತ್ತು ಸಾವಿರ ವರ್ಷಗಳ ಪೂರ್ವದಲ್ಲಿ ಋಷಿಗಳು ಬರೆದಿಟ್ಟ ಸ್ಕಂದ ಪುರಾಣದ ಉಲ್ಲೇಖದಂತೆ ಮತ್ತು ಶೈವಾಗಮಗಳಲ್ಲಿಯ ವರ್ಣನೆಯಂತೆ ಇಂದಿಗೂ ಸಕಲ ಮಾನವಕುಲಕ್ಕೆ ಪವಿತ್ರ ಪೂಜನೀಯ ಯಾತ್ರಾಸ್ಥಳವಾಗಿರುವ ಸಿದ್ಧೇಶ್ವರನಿಗೆ ಮತ್ತು ಸಿದ್ಧವಟಿ ವೃಕ್ಷಕ್ಕೆ ಜಲ ಎರೆದು ಪೂಜೆ ಮಾಡಿ ಭಕ್ತಿಯನ್ನು ಸಲ್ಲಿಸಲು ದೇಶದ ನಾನಾ ಭಾಗಗಳಿಂದ ಆಗಮಿಸುತ್ತಿರುವ ಲಕ್ಷಾಂತರ ಭಕ್ತ ಗಣಕ್ಕೆ ಅನುಕೂಲತೆ ಒದಗಿಸಿಕೊಡುವುದು ಮತ್ತು ಮೂಲಪೀಠದ ಪರಿಸರದಲ್ಲಿ ಜಗದ್ಗುರು ದಾರುಕಾಚಾರ್ಯರ ಹಾಗೂ ಪಂಚಪೀಠಗಳ ಕುರಿತು ಜನಜಾಗೃತಿ ಮೂಡಿಸುವುದು, ಮೂರ್ತಿ ಪ್ರತಿಷ್ಠಾಪನೆ, ಸಂಸ್ಕೃತ ಪಾಠಶಾಲೆ, ಧರ್ಮಶಾಲೆ, ಆಯುರ್ವೇದ ಚಿಕಿತ್ಸಾಲಯ ಮುಂತಾದ ಅನೇಕ ಜನಪರ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಟ್ರಸ್ಟ್ ಉದ್ದೇಶ ಹೊಂದಿದೆ.

ಮೂರು ವರ್ಷಗಳ ಹಿಂದೆ ಸಿದ್ಧವಟಿ ಕ್ಷೇತ್ರದ ಪರಿಸರದಲ್ಲಿಯ ಎರಡು ಎಕರೆ ಸ್ಥಳವನ್ನು ಖರೀದಿ ಮಾಡಿಕೊಂಡಿದ್ದು, ಈಗಾಗಲೇ ಮೂರು ಕೋಣೆಗಳನ್ನು ಯಾತ್ರಿಕರಿಗಾಗಿ ಕಟ್ಟಿಸಲಾಗಿದೆ ಮತ್ತು ಕೆಲವು ಕೆಲಸಗಳು ಪ್ರಾರಂಭವಾಗಿದ್ದು ಇನ್ನಷ್ಟು ಕೆಲಸಗಳನ್ನು ಸಕ್ರಿಯಗೊಳಿಸಲು ದಿನಾಂಕ ೨೨–೧೧–೧೯೯೯ರ ಶುಭದಿನದಂದು ಐದು ಜನರನ್ನೊಳಗೊಂಡ ಟ್ರಸ್ಟ್ ಕಮೀಟಿಯನ್ನು ಉಜ್ಜಯಿನಿ ಜಿಲ್ಲಾ

ನೋಂದಣಾಧಿಕಾರಿಗಳವರ ಕಛೇರಿಯಲ್ಲಿ ನೋಂದಾಯಿಸಲಾಯಿತು. ಕರ್ನಾಟಕದ ಉಜ್ಜಯಿನಿ ಪೀಠದ ಶ್ರೀ ೧೦೦೮ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಸಂಸ್ಥಾಪಕ ಸಂರಕ್ಷಕರಾಗಿದ್ದು ಅವರ ಆದೇಶ ಹಾಗೂ ಇಚ್ಛೆಯಂತೆ ನೂತನವಾಗಿ ಅಸ್ತಿತ್ವಕ್ಕೆ ಬಂದಿರುವ ಟ್ರಸ್ಟ್ ತನ್ನ ಕಾರ್ಯ ನಿರ್ವಹಿಸುತ್ತಲಿದೆ.

ಶ್ರೀ ಜಗದ್ಗುರು ಸಿದ್ಧಲಿಂಗವರೇಣ್ಯರು :

ಈ ಪೀಠದ ಪಟ್ಟವಲ್ಲರಿಯ ಪ್ರಕಾರ ೧೦೮ನೆಯ ಪೀಠಾಧ್ಯಕ್ಷರಾದ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಪೀಠದ ಉನ್ನತಿಗಾಗಿ ಬಹಳಷ್ಟು ಶ್ರಮಿಸಿದರು. ಪೂಜ್ಯರು ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲ್ಲೂಕಿನ ಬಂಗಾರನಾಯಕನ ಹಳ್ಳಿ ಎಂಬ ಗ್ರಾಮದ ಗುರುಸ್ಥಲಮಠದ ಶ್ರೀ ಚೆನ್ನಬಸವಾರ್ಯ ಮತ್ತು ಸೌ॥ ಗುರುಸಿದ್ಧಾಂಬಾ ಎಂಬ ದಂಪತಿಗಳ ಪವಿತ್ರ ಗರ್ಭದಲ್ಲಿ ೧೮೯೦ನೆಯ ಇಸವಿ ಶಾ.ಶ. ೧೮೧೨ನೆಯ ವಿಕೃತಿನಾಮ ಸಂವತ್ಸರ ಮಾಘ ಬಹುಳ ಸಪ್ತಮಿ ಭಾನುವಾರ ಸಂಧ್ಯಾ ಸಮಯದಲ್ಲಿ ಜನಿಸಿದರು. ಇವರಿಗೆ ಶ್ರೀ ಸಿದ್ಧಲಿಂಗಾರ್ಯ ಎಂದು ನಾಮಕರಣವಾಯಿತು.

ಉಜ್ಜಯಿನೀ ಪೀಠದ ೧೦೭ನೇ ಪೀಠಾಧಿಕಾರಿಗಳಾಗಿದ್ದ ಶ್ರೀ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯರು ಈ ಬಾಲಕನ ಭವಿತವ್ಯವನ್ನು ಅರಿತು ಶಾ.ಶ. ೧೮೨೮ನೆಯ(೧೯೦೬ನೆಯ ಇಸವಿ) ಪರಾಭವನಾಮ ಸಂವತ್ಸರ ವೈಶಾಖ ಬ॥ ಪಂಚಮಿ ಭಾನುವಾರ ಉದಯ ಶುಭಮೂಹೂರ್ತದಲ್ಲಿ ಪೀಠಾಧಿಕಾರವನ್ನು ಅನುಗ್ರಹಿಸಿ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳೆಂದು ನಾಮಕರಣವನ್ನು ಮಾಡಿದರು.

ಅತಿ ಚಿಕ್ಕವಯಸ್ಸಿನಲ್ಲಿ, ಹದಿಹರೆಯದರಲ್ಲಿಯೇ ಜಗದ್ಗುರುತ್ವವನ್ನು ಪಡೆದ ಇವರು ತಮ್ಮ ಆಸ್ಥಾನ ವಿದ್ವಾಂಸರಾದ ಪಂ. ಶ್ರೀ ಉಮಚಗಿ ಶಂಕರ ಶಾಸ್ತ್ರಿಗಳವರಿಂದ ತರ್ಕ, ವ್ಯಾಕರಣಾದಿ ಶಾಸ್ತ್ರಗಳ ಜೊತೆಗೆ ವೀರಶೈವ ಧರ್ಮಗ್ರಂಥವಾದ "ಶ್ರೀ ಸಿದ್ಧಾಂತ ಶಿಖಾಮಣಿ"ಯನ್ನು ಚೆನ್ನಾಗಿ ಅಭ್ಯಸಿಸಿ ಅದರ ಆಚರಣೆಯನ್ನು ನಿತ್ಯಜೀವನದಲ್ಲಿ ಅಳವಡಿಸಿಕೊಂಡರು.

ತಪೋಬಲವನ್ನು ಬೆಳೆಸಿಕೊಂಡ ಇವರು ಶಿವಯೋಗಸಿದ್ಧಿಯ ಬಲದಿಂದ ಸಂಸಾರಿಗಳ ಸಂತಾಪವನ್ನು ದೂರೀಕರಿಸುತ್ತಿದ್ದರು. ಇವರು ತಮ್ಮ ಪೀಠದಲ್ಲಿ ನಂದೆ, ಭದ್ರೆ, ಸುರಭಿ, ಸುಶೀಲೆ ಮತ್ತು ಸುಮನೆ ಎಂಬ ಪಂಚವರ್ಣಗಳ ಗೋವುಗಳನ್ನು ಸಂರಕ್ಷಿಸಿ ಅವುಗಳ ಪಂಚಾಮೃತದಿಂದ ಲಿಂಗಾಭಿಷೇಕವನ್ನು ಮಾಡುವುದರ ಜೊತೆಗೆ ಗೋಮಯದಿಂದ ಪರಿಶುದ್ಧವಾದ ವಿಭೂತಿಯನ್ನು ತಯಾರಿಸಿ ತಾವು ಧರಿಸುವುದರ ಜೊತೆಗೆ ಅನ್ಯರಿಗೂ ಸಹ ಗೋಮಯದಿಂದಲೇ ಸಿದ್ಧವಾದ ಶುದ್ಧ ಭಸ್ಮ ಧರಿಸುವಂತೆ ಉಪದೇಶಿಸುತ್ತಿದ್ದರು.

ಬಳ್ಳಾರಿ ಪ್ರಾಂತ್ಯದಲ್ಲಿ ಒಮ್ಮೆ ಭೀಕರ ಬರಗಾಲ ಬಂದೊದಗಿದಾಗ ವಿಶೇಷ ಪೂಜಾನುಷ್ಠಾನ, ಅನ್ನಸಂತರ್ಪಣೆ-ಮುಂತಾದವನ್ನು ಮಾಡಿಸಿ ೪-೮-೧೯೨೧ರಿಂದ ಮೂರು-ನಾಲ್ಕು ದಿವಸ ಸತತ ಸುವೃಷ್ಟಿಯನ್ನು ಬರಿಸಿದ ಇವರ ಮಹಿಮೆಯು ಅಗಾಧವಾದುದು.

ಧರ್ಮಜಾಗೃತಿಗಾಗಿ ದೇಶದ ನಾನಾ ಭಾಗಗಳಲ್ಲಿ ಇವರು ಸಂಚರಿಸಿ ಜನರಲ್ಲಿ ಧರ್ಮಜಾಗೃತಿಯನ್ನುಂಟು ಮಾಡಿದರು. ೧೯೧೨ರಲ್ಲಿ ಗುಲಬರ್ಗಾದ (ಕಲಬುರ್ಗಿ) ಶ್ರೀ ಶರಣ ಬಸವೇಶ್ವರ ಸಂಸ್ಥಾನದ ದೊಡ್ಡಪ್ಪ ಅಪ್ಪಾ ಅವರ ಆಮಂತ್ರಣದ ಮೇರೆಗೆ ದಯಮಾಡಿಸಿ ಅದ್ದೂರಿಯಿಂದ ನಡೆದ ಅಡ್ಡಪಲ್ಲಕ್ಕಿ ಉತ್ಸವದ ನಂತರ ಆ ನಾಡಿನ ಸಮಸ್ತ ಜನರಿಗೆ ಧರ್ಮಬೋಧನೆಯನ್ನು ಮಾಡಿ ಶ್ರೀ ಶರಣಬಸವೇಶ್ವರ ಸಂಸ್ಥಾನದ ಕ್ರಿಯಾಮೂರ್ತಿಗಳಾದ ಶ್ರೀ ಸಿದ್ಧಲಿಂಗ ದೇಶಿಕರಿಗೆ ಮುಗಳನಾಗಾಯಿ ಹಿರೇಮಠದ ಪಟ್ಟಾಧಿಕಾರ ಪ್ರದಾನ ಮಾಡಿದರು.

೧೯೧೮ರಲ್ಲಿ ಕಾಶಿಯಲ್ಲಿ ನಡೆದ ಪಂಚಾಚಾರ್ಯ ಸಮ್ಮೇಳನದಲ್ಲಿ ಪಾಲ್ಗೊಂಡು ಧರ್ಮಪ್ರಚಾರದ ದೃಷ್ಟಿಯಿಂದ ಹದಿಮೂರು ಠರಾವುಗಳನ್ನು ಮಂಡಿಸಿದರು. ಅವುಗಳಲ್ಲಿ ಪಂಚಾಚಾರ್ಯ ಸಮ್ಮೇಳನದ ಸ್ಮಾರಕವಾಗಿ ಕಾಶಿಯ "ಶ್ರೀ ವಿಶ್ವಾರಾಧ್ಯಗುರುಕುಲ"ದ ಸ್ಥಾಪನೆಯು ಮಹತ್ವಪೂರ್ಣವಾದದ್ದು. ಅಂದು ಸ್ಥಾಪಿತಗೊಂಡ ಈ ಗುರುಕುಲದಲ್ಲಿ ಪ್ರಾಯಃ ಕಾಶಿಗೆ ಅಧ್ಯಯನಕ್ಕೆ ಬಂದ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಹಾಗೂ ಇನ್ನಿತರ ಭಾಗಗಳಲ್ಲಿ ಮಠಾಧಿಪತಿಗಳಾಗಿರುವ ಪ್ರತಿಯೊಬ್ಬ ಸ್ವಾಮಿಗಳೂ ಆಶ್ರಯ ಪಡೆದ ವಿದ್ಯಾರ್ಥಿಗಳೇ ಆಗಿರುತ್ತಾರೆ.

ಧರ್ಮಪ್ರಚಾರದ ದೃಷ್ಟಿಯಿಂದ ಬಳ್ಳಾರಿ (೧೨-೧೨-೧೯೩೦), ಬಾರಸಿ, ಸೊಲ್ಲಾಪುರ (೧೨-೭-೧೯೩೩), ಪಂಢರಪುರ (೨೩-೧೦-೧೯೩೩), ಜಗಳೂರು (೯-೧೨-೧೯೨೮) ಮತ್ತು ಬೀರೂರು ಮುಂತಾದ ಅನೇಕ ಊರುಗಳಲ್ಲಿ ಜಗದ್ಗುರುಗಳವರ ಅಡ್ಡಪಲ್ಲಕ್ಕಿ ಉತ್ಸವಗಳು ಅತ್ಯಂತ ವೈಭವಪೂರ್ಣವಾಗಿ ಜರುಗಿದುದು ಐತಿಹಾಸಿಕ ಸಂಗತಿಯಾಗಿದೆ.

೨೭-೧೨-೧೯೧೯ರಂದು ಬೀರೂರಿನಲ್ಲಿ ನಡೆದ ೯ನೆಯ ವೀರಶೈವ ಮಹಾಸಭೆಗೆ ರಂಭಾಪುರಿಯ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು, ಕೇದಾರದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರು ದಯಮಾಡಿಸಿದಂತೆ ಉಜ್ಜಯಿನಿಯ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು ದಯಮಾಡಿಸಿ ತಮ್ಮ ಅಮೋಘವಾದ ತಪೋವಾಣಿಯಿಂದ ಸಕಲರನ್ನೂ ಸಂತೃಪ್ತಿಪಡಿಸಿದರು.

೨೫-೧೨-೧೯೨೬ರಂದು ಉಜ್ಜಯಿನಿ ಪೀಠದಲ್ಲಿಯೇ ನಾಗನೂರು ಬೃಹನ್ಮಠಾಧ್ಯಕ್ಷ ಶ್ರೀ ವೇ। ಪಂ। ಕಾಶೀನಾಥ ಶಾಸ್ತ್ರಿಗಳ ಕಾರ್ಯದರ್ಶಿತ್ವದಲ್ಲಿ ೫ನೆಯ ಪಟ್ಟ-ಚರಾಧಿಕಾರಿಗಳ ಸಮ್ಮೇಳನವನ್ನು ನಡೆಸಿ ಪಟ್ಟ-ಚರಾಧಿಕಾರ ವರ್ಗಕ್ಕೆ ಸನ್ಮಾರ್ಗೋಪದೇಶ ಮಾಡಿದರು.

ಕೇದಾರದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಕರ್ನಾಟಕಕ್ಕೆ ಆಗಮಿಸಿದಾಗ ಅನಾರೋಗ್ಯದಿಂದ ೧೫-೭-೧೯೨೦ರಂದು ಉಜ್ಜಯಿನೀ ಪೀಠದಲ್ಲಿಯೇ ಲಿಂಗೈಕ್ಯರಾದ ಕಾರಣ, ಆ ಪೀಠದ ಉತ್ತರಾಧಿಕಾರದ ಭಾರವು ತಮ್ಮ ಮೇಲೆ ಉಳಿದದ್ದನ್ನು ತಿಳಿದ ಶ್ರೀಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಪ್ರಯತ್ನಮಾಡಿ ಮೊದಲೇ ವಟುವೆಂದು ನಿರ್ಣಯಗೊಂಡ ಶ್ರೀ ನೀಲಕಂಠಲಿಂಗರಿಗೆ ಕಾಶೀ ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಅಮೃತಹಸ್ತದಿಂದ ಕೇದಾರ ಜಗದ್ಗುರು ಪಟ್ಟಾಧಿಕಾರವನ್ನು ೧-೧೦-೧೯೨೧ರಂದು ನೆರವೇರಿಸಿ ಆ ಪೀಠವನ್ನು ಉದ್ಧರಿಸಿದರು.

ಇದರಂತೆ ರಂಭಾಪುರೀ ಪೀಠದ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಉತ್ತರಾಧಿಕಾರಿಯನ್ನು ನೇಮಿಸದೇ ೮-೨-೧೯೨೨ರಂದು ಲಿಂಗೈಕ್ಯರಾದರು. ಮುಂದೆ ಈ ಪೀಠವು ಮೂರುವರ್ಷ ಕಾಲ ಅನಾಥವಾಗಿಯೇ ಉಳಿಯಿತು. ಆ ಸಮಯದಲ್ಲಿ ಬುಕ್ಕಾಂಬುಧಿಯ ಗುಹೆಯಲ್ಲಿ ಶಿವಯೋಗಾನುಷ್ಠಾನವನ್ನು ಮಾಡಿ ತಮ್ಮ ಸಂಕಲ್ಪದಂತೆ ಹಾಗೂ ಸಕಲ ಭಕ್ತರ ಅಪೇಕ್ಷೆಯ ಮೇರೆಗೆ ರಂಭಾಪುರೀ ಪೀಠಕ್ಕೆ ಪಂ॥

ಸದಾಶಿವ ಶಾಸ್ತ್ರಿಗಳೆಂಬ ನಾಮದಿಂದ ಕಾಶೀ ಪೀಠದಲ್ಲಿ ಸೇವೆ ಸಲ್ಲಿಸಿದ ವಿದ್ವತ್‌ವಟುವಿಗೆ ಶಾ.ಶ. ೧೮೪೭ ಕ್ರೋಧನನಾಮ ಸಂವತ್ಸರ ಮಾರ್ಗಶೀರ್ಷ ಶು॥೭ ಭಾನುವಾರ ಧನುರ್ಲಗ್ನದಲ್ಲಿ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ರಂಭಾಪುರೀ ಪೀಠದ ಜಗದ್ಗುರುತ್ವವನ್ನು ದಯಪಾಲಿಸಿ ಶ್ರೀ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯರೆಂಬ ಅಭಿಧಾನವನ್ನು ದಯಪಾಲಿಸಿದರು.

ಪೀಠದ ಜೀರ್ಣೋದ್ಧಾರ ಃ

ಹೀಗೆ ವೀರಶೈವ ಧರ್ಮಾಚಾರ್ಯರ ಕೀರ್ತಿಯನ್ನು ಭರತಖಂಡದಲ್ಲೆಲ್ಲ ಪ್ರಸಾರ ಮಾಡಿ ಕೃತಕೃತ್ಯರಾದ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಉಜ್ಜಯಿನೀ ಪೀಠದ ಜೀರ್ಣೋದ್ಧಾರ ಕಾರ್ಯದಲ್ಲಿ ತತ್ಪರರಾಗಿ ೧೦೧ ಗೋರಕ್ಷಣೆಯಾಗುವ ಮಹಾ ಗೋಶಾಲೆಯನ್ನೂ, ಪಂಚಾಚಾರ್ಯರ ಸಭಾಮಂಟಪವನ್ನೂ, ದಾಸೋಹಕ್ಕಾಗಿ ಮಹಾಪಾಕಶಾಲೆ ಮತ್ತು ಶಿವಾರ್ಚನೆಗಾಗಿ ಶಿವಪೂಜಾ ಮಂದಿರವನ್ನೂ ನಿರ್ಮಿಸಿ ಮಹತ್ಕಾರ್ಯವನ್ನು ಮಾಡಿದ್ದಾರೆ.

ವಿದ್ಯಾದಾನ ಃ

ವಿದ್ಯಾಪ್ರೇಮಿಗಳೂ, ವಿದ್ವಾಂಸರೂ ಆದ ಪೂಜ್ಯ ಜಗದ್ಗುರುಗಳವರು ತಮ್ಮ ಪೀಠದಲ್ಲಿ ಶ್ರೀ ದಾರುಕಾಚಾರ್ಯ ಸಂಸ್ಕೃತ ಪಾಠಶಾಲೆಯನ್ನು ಸಂಸ್ಥಾಪಿಸಿ, ಅದರ ಪ್ರಾಧ್ಯಾಪಕರೂ, ಸದ್ಧರ್ಮ ಪೀಠದ ಆಸ್ಥಾನ ವಿದ್ವಾಂಸರೂ ಆದ ಪಂ॥ ಶ್ರೀ ಉಮಚಿಗಿ ಶಂಕರ ಶಾಸ್ತ್ರಿಗಳವರಿಂದ ಈಶ–ಕೇನ–ಕಠ–ಮುಂಡಕ–ಸಿದ್ಧಾಂತ ಶಿಖೋಪನಿಷತ್ ಮತ್ತು ಬ್ರಹ್ಮಸೂತ್ರಗಳ ಮೇಲೆ ವೀರಶೈವ ಸಿದ್ಧಾಂತ ಪರವಾದ ಶಾಂಕರೀ ವೃತ್ತಿಯನ್ನೂ, ಸಿದ್ಧಾಂತ ಸುಧಾಕರವೇ ಮೊದಲಾದ ಗ್ರಂಥಗಳನ್ನು ಬರೆಯಿಸಿ ಪ್ರಕಾಶಪಡಿಸಿದರು. ಇವರ ಈ ಎಲ್ಲ ಗ್ರಂಥಗಳೂ ಕಾಶಿಯ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ೧೯೮೩ರಿಂದ ಪ್ರಾರಂಭವಾದ "ಶಕ್ತಿವಿಶಿಷ್ಟಾದ್ವೈತ ವೇದಾಂತ ಶಾಸ್ತ್ರ" ಮತ್ತು "ಆಚಾರ್ಯ ಪರೀಕ್ಷೆ"ಗೆ ಪಠ್ಯಗ್ರಂಥಗಳಾಗಿ ಸ್ವೀಕರಿಸಲ್ಪಟ್ಟಿರುತ್ತವೆ. ಪೂಜ್ಯ ಜಗದ್ಗುರುಗಳವರು ಇಂತಹ ಗ್ರಂಥ ಪ್ರಕಾಶನಕ್ಕೋಸ್ಕರವಾಗಿ "ಜ್ಞಾನಗುರು ವಿದ್ಯಾಪೀಠ" ಎಂಬ ಸಂಸ್ಥೆಯನ್ನು ಸಂಸ್ಥಾಪಿಸಿದರು. ಈ ವಿದ್ಯಾಪೀಠವು ಇಂದಿನವರೆಗೂ ತನ್ನ ಕಾರ್ಯವನ್ನು ಅವ್ಯಾಹತವಾಗಿ ನಡೆಸುತ್ತ ಬಂದಿದೆ.

ಪೂಜ್ಯ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಬಳ್ಳಾರಿ ವಿಭಾಗದ ಸಮಸ್ತ ವೀರಶೈವರ ವಿದ್ಯಾಭಿವೃದ್ಧಿಗೋಸ್ಕರ ೧೬–೧೦–೧೯೧೬ರಂದು "ಮದ್ರಾಸ್ ವೀರಶೈವ ವಿದ್ಯಾವರ್ಧಕ ಸಂಘ" ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಿ ಅದಕ್ಕೆ ಪೂಜ್ಯರು ರೂ. ೫೦೦೦/– (ಐದುಸಾವಿರ) ಮೂಲನಿಧಿಯನ್ನು ಆಶೀರ್ವದಿಸಿದರು. ಪೂಜ್ಯರ ಆಶೀರ್ವಾದ ಬಲದಿಂದ ಆ ಸಂಸ್ಥೆಯು "ವೀರಶೈವ ವಿದ್ಯಾವರ್ಧಕ ಸಂಘ, ಬಳ್ಳಾರಿ" ಎಂಬ ಹೆಸರಿನಿಂದ ಬೆಳೆದು ಪ್ರಾಥಮಿಕ ಶಾಲೆಯಿಂದ ಪ್ರಾರಂಭಿಸಿ ಎಲ್ಲ ವಿಷಯಗಳ ಕಾಲೇಜುಮಟ್ಟದ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಲಿದೆ.

ಶಾ.ಶ. ೧೮೮೦ರಲ್ಲಿ (೧೮೭೮ನೆಯ ಇಸವಿ) ಸೊಲ್ಲಾಪುರದ ವಾರದ ಮಲ್ಲಪ್ಪನವರು ಶ್ರೀಮದ್ವೀರಶೈವ ವಾರದ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ, ವೀರಶೈವ ವಟುಗಳಿಗೆ ಉಚಿತವಾಗಿ ವಸತಿ, ವಸ್ತ್ರ, ಭೋಜನಾದಿಗಳ ವ್ಯವಸ್ಥೆಯನ್ನು ಮಾಡಿ, ಸಂಸ್ಕೃತ ಶಿಕ್ಷಣವನ್ನು ಕೊಡುತ್ತಿದ್ದರಲ್ಲದೇ, "ವೀರಶೈವಲಿಂಗೀ ಬ್ರಾಹ್ಮಣ ಗ್ರಂಥಮಾಲೆ"ಯನ್ನು ಪ್ರಾರಂಭಿಸಿ, ಅದರ ಮುಖಾಂತರ ನೂರಾರು ಸಂಸ್ಕೃತ ಧರ್ಮಗ್ರಂಥಗಳನ್ನು ಪ್ರಕಾಶಗೊಳಿಸಿದರು. ಅವರು ಲಿಂಗೈಕ್ಯರಾದ ನಂತರ ಪಾಠಶಾಲೆಯ ಸ್ಥಿತಿಯು ಅವನತಿಗೆ ಬಂದದ್ದನ್ನರಿತ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಸೊಲ್ಲಾಪುರಕ್ಕೆ ಬಂದಾಗ ೩೧–೮–೧೯೩೩ರಂದು ಪಾಠಶಾಲೆಗೆ ದಯಮಾಡಿಸಿ ಈ ಮಹಾ ಪಾಠಶಾಲೆಯು ಚಿರಕಾಲ ನಡೆಯಲೆಂಬ ಸದುದ್ದೇಶದಿಂದ ಶ್ರೀಮಂತ ವಾರದ ಮಲ್ಲಪ್ಪ ಮಹೋದಯರ ಸ್ಮಾರಕವಾಗಿ ರೂ. ೫೦೦೦/– (ಐದು ಸಾವಿರ) ಆಶೀರ್ವದಿಸಿ ಸದರೀ ಪಾಠಶಾಲೆಯನ್ನು ಸಾರ್ವಜನಿಕಸಂಸ್ಥೆಯನ್ನಾಗಿ ಮಾಡಿದರು. ಪೂಜ್ಯರ ಆಶೀರ್ವಾದ ಬಲದಿಂದ ಬಹುದಿನಗಳವರೆಗೆ ಸುಚಾರರೂಪವಾಗಿ ನಡೆದು ಸಂಚಾಲಕ ವರ್ಗದ ದಕ್ಷ ಆಡಳಿತ ಇಲ್ಲದ್ದರಿಂದಲೂ, ಸಂಸ್ಕೃತವನ್ನು ಓದುವ ವಿದ್ಯಾರ್ಥಿಗಳ ಅಭಾವದಿಂದಲೂ ಇಂದು ಈ ಪಾಠಶಾಲೆಯು ಬಹಳ ದಯನೀಯ ಸ್ಥಿತಿಯಲ್ಲಿದೆ ಎಂದು ಹೇಳಲು ಖೇದವಾಗುತ್ತದೆ.

ವರಪ್ರದಾನ ಃ

ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ತಪಃಪ್ರಭಾವದಿಂದ ಅನೇಕ ಲೀಲೆಗಳನ್ನು ಮಾಡಿ ಅನೇಕ ಜನರಿಗೆ ವರಪ್ರದಾನವನ್ನು ಮಾಡಿದ್ದಾರೆ. ಇವರ ಅನುಗ್ರಹಕ್ಕೆ ಪಾತ್ರರಾದ ಹೊಟಗಿ ಪಟ್ಟಾಧ್ಯಕ್ಷರಾದ ಶ್ರೀ ಚೆನ್ನವೀರ ಶಿವಾಚಾರ್ಯರು ಪರಮ ತಪಸ್ವಿಗಳಾಗಿ ಕೀರ್ತಿಶಾಲಿಗಳಾದರು. ಅವರಂತೆ ಅಂದು ಪಾಲಿಕೊಪ್ಪದ ಪಟ್ಟಾಧ್ಯಕ್ಷರಾದ ಶ್ರೀಗಳು ಮುಂದೆ ರಂಭಾಪುರೀ ಪೀಠಕ್ಕೆ ಅಧಿಪತಿಗಳಾಗಿ ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳೆಂದು ಹೆಸರುವಾಸಿಯಾದುದು ಸರ್ವರಿಗೂ ತಿಳಿದ ವಿಷಯವಾಗಿದೆ.

ನೈಷ್ಠಿಕ ಬ್ರಹ್ಮಚಾರಿಗಳಾಗಿ ಪಂಚಾಚಾರ್ಯರ ಸೇವಾನಿರತರಾಗಿದ್ದ ಕಾಶೀನಾಥ ಶಾಸ್ತ್ರಗಳವರ ಮೇಲೆ ಪೂಜ್ಯ ಜಗದ್ಗುರುಗಳ ಕೃಪಾದೃಷ್ಟಿಯು ಸಂಪೂರ್ಣವಾಗಿತ್ತು. ಅಂತೆಯೇ ೧೬–೫–೧೯೨೭ರಂದು (ಶಾ.ಶ. ೧೮೪೮ ಪ್ರಭವನಾಮ ಸಂವತ್ಸರ ವೈಶಾಖ ಶು॥ ಪಂಚಮಿ) ದಾರುಕಾಚಾರ್ಯರ ಜಯಂತಿಯ ದಿನ ಪೂಜ್ಯ ಜಗದ್ಗುರುಗಳು ರೂ. ೫೦೦೦/– (ಐದು ಸಾವಿರ)ಗಳನ್ನು ಆಶೀರ್ವದಿಸಿ ಮೈಸೂರಿನಿಂದ ಶ್ರೀ ಶಾಸ್ತ್ರಿಗಳವರ ನೇತೃತ್ವದಲ್ಲಿ "ಪಂಚಾಚಾರ್ಯ ಪ್ರಭಾ" ಎಂಬ ಧಾರ್ಮಿಕ ಪತ್ರಿಕೆಯು ಅವ್ಯಾಹತವಾಗಿ ನಡೆಯುವಂತೆ ಅನುಗ್ರಹಿಸಿದರು. ಪೂಜ್ಯರ ಅನುಗ್ರಹದಿಂದ ಈ ಪತ್ರಿಕೆಯು ಇಂದಿನವರೆಗೂ ಅವಿರತವಾಗಿ ಸಾಗಿಬಂದಿದೆ. ಹೀಗೆ ತಮ್ಮ ಜೀವಾವಧಿಯವರೆಗೆ ಧರ್ಮಕ್ಕಾಗಿ ಶ್ರಮಿಸಿ ಶಾ.ಶ. ೧೮೫೭ನೆಯ ಯುವನಾಮ ಸಂ॥ ಪುಷ್ಯ ಬಹುಳ ೪ ದಿ॥ ೧೨–೧–೧೯೩೬ನೆಯ ಭಾನುವಾರ ಉದಯಕಾಲದಲ್ಲಿ ಲಿಂಗೈಕ್ಯರಾದರು. ಪ್ರಾಜ್ಞ ಓದುಗರು ಒಂದು ಅಂಶವನ್ನು ಗಮನಿಸಿದರೆ ಈ ಮಹಾತ್ಮನ ಮಹತಿ ತಿಳಿಯುವುದು. ಅವರು ಜನಿಸಿದ್ದು ಭಾನುವಾರ, ಜಗದ್ಗುರುತ್ವ ಸ್ವೀಕರಿಸಿದ್ದು ಭಾನುವಾರ ಮತ್ತು ಲಿಂಗೈಕ್ಯರಾದದ್ದೂ ಸಹ ಭಾನುವಾರವೇ! ಅವರ ಜೀವನ ತ್ರಿಪುಟ!

ಶ್ರೀ ಸಿದ್ಧೇಶ್ವರ ಜಗದ್ಗುರುಗಳು ಃ

ಪೂಜ್ಯ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ಚಿತ್ರದುರ್ಗ ಜಿಲ್ಲಾ ಮೊಳಕಾಲ್ಮೂರು ತಾಲ್ಲೂಕು ಆನೇಸಿದ್ಧಾಪುರ ಬೃಹನ್ಮಠದ ಶ್ರೀ ಷ

ಬ್ರ ತ್ರಿಲೋಚನ ಶಿವಾಚಾರ್ಯರು ಉತ್ತರಾಧಿಕಾರಿಗಳೆಂದು ನೇಮಿತರಾದರು. ಯುವನಾಮ ಸಂವತ್ಸರ ಮಾಘ ಶು॥ ದಶಮಿ ದಿ॥ ೨-೨-೧೯೩೬ನೆಯ ಭಾನುವಾರ ದಿವಸ ಶ್ರೀಮದ್ರಂಭಾಪುರೀ ವೀರ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳ ಮತ್ತು ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ನೀಲಕಂಠ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯ ಸನ್ನಿಧಾನದಲ್ಲಿ ಅಧಿಕಾರಗ್ರಹಣ ಮಾಡಿದರು. ಆಗ ಇವರಿಗೆ ಶ್ರೀ ೧೦೦೮ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನಾಮಕರಣ ಮಾಡಲ್ಪಟ್ಟಿತು.

ಶ್ರೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಸುಮಾರು ೬೦ ವರ್ಷಕ್ಕೂ ಮಿಕ್ಕಿ ಪೀಠೋದ್ಧಾರದ ಕಾರ್ಯವನ್ನು ಮಾಡಿದರು. ಇವರು ಅಧಿಕಾರಕ್ಕೆ ಬಂದ ನಂತರ ಪೂರ್ವದ ಜಗದ್ಗುರುಗಳ ಸಂಕಲ್ಪದ ಕೆಲ ಅಪೂರ್ಣವಾದ ಗೋಶಾಲೆ ಮುಂತಾದ ಕಟ್ಟಡಗಳ ಕೆಲಸಗಳನ್ನು ಪೂರ್ಣಮಾಡುವುದರ ಜೊತೆಗೆ "ಜ್ಞಾನಗುರು ವಿದ್ಯಾಪೀಠ"ವನ್ನು ನೋಂದಣಿ ಮಾಡಿಸಿ ತಮ್ಮ ಪೂಜ್ಯ ಗುರುಗಳ ಸಂಕಲ್ಪವನ್ನು ಸಾಕಾರಗೊಳಿಸಿದ್ದಾರೆ. ಈ ಸಂಸ್ಥೆಗಾಗಿ ಭೂಮಿ ಹಾಗೂ ಧನವನ್ನು ಸಂಗ್ರಹಿಸಿಟ್ಟಿದ್ದಾರೆ. ಇದರ ಜೊತೆಗೆ ಚಿತ್ರದುರ್ಗ, ಗದಗ, ತುರುವನೂರು, ಉಜ್ಜಯಿನಿಗಳಲ್ಲಿ ಪ್ರಸಾದ ನಿಲಯಗಳನ್ನು, ಐದು ಸಂಸ್ಕೃತ ಪಾಠಶಾಲೆಗಳನ್ನೂ, ಉಜ್ಜಯಿನಿ, ಯಲಿವಾಳ, ಹರಪನಹಳ್ಳಿ, ಯಶವಂತನಗರ, ಹೊಳಗುಂದಿ ಮುಂತಾದ ಗ್ರಾಮಗಳಲ್ಲಿ ಪ್ರೌಢಶಾಲೆ, ಕಾಲೇಜುಗಳನ್ನೂ ಸ್ಥಾಪಿಸಿದ್ದಾರೆ. ಧರ್ಮಪ್ರಚಾರಕ್ಕಾಗಿ "ಸದ್ಧರ್ಮ ಪ್ರಭಾ" ಎಂಬ ತ್ರೈಮಾಸಿಕ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು.

ಇವರು ಬಹಳ ವಯೋವೃದ್ಧರಾದ ಕಾರಣ ಮೈಸೂರು ಅರಮನೆ ಜಪದಕಟ್ಟೆ ಬೃಹನ್ಮಠದ ಶ್ರೀ ಷ॥ಬ್ರ॥ ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳಿಗೆ ಶ್ರೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಸದ್ಧರ್ಮ ಪೀಠದ ಪ್ರಾಚೀನ ಪದ್ಧತಿಯಂತೆ ದಿ॥೨೮-೮-೧೯೮೫ ಕ್ರೋಧನನಾಮ ಸಂವತ್ಸರದ ಶ್ರಾವಣ ಶುದ್ಧ ತ್ರಯೋದಶಿ ಶ್ರವಣ ನಕ್ಷತ್ರ ಬುಧವಾರ ಶುಭಮುಹೂರ್ತದಲ್ಲಿ ಸದ್ಧರ್ಮ ಸಿಂಹಾಸನದ ಪೀಠದಲ್ಲಿ ಪಂಚಮುದ್ರಾ ಪೂರ್ವಕ ಕಿರೀಟಧಾರಣೆಯನ್ನು ಮಾಡಿ ಚರಪಟ್ಟಾಧಿಕಾರವನ್ನು ಅನುಗ್ರಹಿಸಿ ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನೂತನ ನಾಮಕರಣವನ್ನು ಮಾಡಿದರು.

ಹಳ್ಳಿಯ ಹೊಳಪು :

ಹಳ್ಳಿಗಳಲ್ಲಿ ಒಳ್ಳೆಯವರು ಜನಿಸುವುದು ಸಾಮಾನ್ಯವೆಂಬುದು ಅನೇಕ ಮಹಾಪುರುಷರ ಚರಿತ್ರೆಗಳಿಂದ ತಿಳಿದುಬರುತ್ತದೆ. ಉಜ್ಜಯಿನಿ ಸದ್ಧರ್ಮ ಪೀಠದ ೧೧೦ನೆಯ ಪೀಠಾಚಾರ್ಯರಾಗಿದ್ದ ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಜನಿಸಿದುದು ಚಿತ್ರದುರ್ಗ ಜಿಲ್ಲೆಯ ಕಂದಗಲ್ಲು ಎಂಬ ಪುಟ್ಟ ಗ್ರಾಮದಲ್ಲಿ. ಅಂತಹ ಹಳ್ಳಿಯಲ್ಲಿ ಜನಿಸಿದ ಅವರು ಕಂತುಹರನ ಕೃಪೆಯಿಂದ ಮಹಂತರ ಸಾಲಿನಲ್ಲಿ ಮೆರೆದುಹೋದರು.

ಆಚಾರ ಸಂಪನ್ನರಾದ, ವಿಚಾರಶೀಲ ವೀರಮಾಹೇಶ್ವರರಾಗಿದ್ದ ಶ್ರೀ ವೇ। ಚೆನ್ನಬಸವಯ್ಯನವರ ಸಹಧರ್ಮಿಣಿ ಶರಣೆ ಶ್ರೀಮತಿ ಕೊಟ್ರಮ್ಮನವರ ಸತ್ಪುತ್ರನಾಗಿ ೧೯೩೬ರಲ್ಲಿ ಜನಿಸಿದ ಶಿವಪ್ರಕಾಶನು ತಮ್ಮ ಮೂಲಮಠವಾದ ಉಜ್ಜಯಿನಿ ಪೀಠದ ಶಾಖಾಮಠವೂ ಆದ ಚಿತ್ರದುರ್ಗದ ಉಜ್ಜಯಿನಿ ಮಠದಲ್ಲಿ ಇದ್ದು, ಪ್ರಾಥಮಿಕ ಶಿಕ್ಷಣವನ್ನು ಪಡೆದರು. ಅದು ಪುತ್ರವರ್ಗ ಮಠವಾದುದರಿಂದ ಅನಿವಾರ್ಯವಾಗಿ ಹದಿವಯದಲ್ಲೇ ಪಟ್ಟಾಧ್ಯಕ್ಷರಾಗಬೇಕಾಯಿತು. ಅವರಿಗೆ ಶ್ರೀ ಷ॥ಬ್ರ॥ ಶಿವಪ್ರಕಾಶ ಶಿವಾಚಾರ್ಯ ಸ್ವಾಮಿಗಳೆಂಬ ಅಭಿಧಾನವು ಪ್ರಾಪ್ತವಾಯಿತು. ವಿದ್ಯೆಯ ಹಸಿವು ಇದ್ದುದರಿಂದ ಶ್ರೀಗಳವರು ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಸಂಸ್ಕೃತ ಮಹಾವಿದ್ಯಾಲಯದಲ್ಲಿ ಸತತವಾಗಿ ೧೨ ವರ್ಷಗಳವರೆಗೆ ಅಧ್ಯಯನ ಮಾಡಿ ೧೯೫೪ರಲ್ಲಿ "ಶಕ್ತಿವಿಶಿಷ್ಟಾದ್ವೈತ ವೇದಾಂತ ವಿದ್ವತ್" ಪದವೀಭೂಷಿತರಾದರು. ವ್ಯಕ್ತಿತ್ವವನ್ನು ಗುರುತಿಸಿ ಗುರುತರ ಹೊಣೆ ಹೊರಿಸುವ ಕಲಾನಿಪುಣರಾದ ಶ್ರೀಮದ್ ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯದೃಷ್ಟಿಗೆ ಶ್ರೀಗಳು ಪಾತ್ರರಾದರು. ೧೨ ವರ್ಷಗಳಿಂದ ಬೆಂಗಳೂರಿನ ಶ್ರೀ ಮಹಂತರ ಮಠದಲ್ಲಿ ಇರುವಾಗಲೇ ತಪೋನಿಧಿ ವೀರವಿರಾಗಿ, ಧರ್ಮಸಿಂಹರೆನಿಸಿದ್ದ ಶ್ರೀಮದ್ ರಂಭಾಪುರೀ ಜಗದ್ಗುರು ವೀರಗಂಗಾಧರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರ ಅನುಗ್ರಹಕ್ಕೂ ಪಾತ್ರರಾಗಿದ್ದರು. ಹೀಗಾಗಿ ಅರಿವು-ಆಚಾರ-ವಿಚಾರಗಳ ತ್ರಿವೇಣಿ ಸಂಗಮದಂತೆ ಶ್ರೀಗಳವರ ಬದುಕು ರೂಪುಗೊಂಡಿತು.

ಗುರುಕಾರುಣ್ಯ :

ವಿದ್ಯಾಭ್ಯಾಸ ಮುಗಿಸಿಕೊಂಡು ಚಿತ್ರದುರ್ಗಕ್ಕೆ ಬಂದ ನಂತರ ಉಜ್ಜಯಿನಿ ಜಗದ್ಗುರುಗಳವರು ಇವರ ಕರ್ತೃತ್ವ ಶಕ್ತಿಯನ್ನು ಮೆಚ್ಚಿ ಧರ್ಮ ಹಾಗೂ ಸಮಾಜಸೇವೆಗೆ ತೊಡಗುವಂತೆ ಆದೇಶಿಸಿದರು. ಜ್ಞಾನಗುರು ವಿದ್ಯಾಪೀಠವು ಆಗಲೇ ನೋಂದಾಯಿಸಲ್ಪಟ್ಟಿತ್ತು. ಅದರ ಅಧ್ಯಕ್ಷತೆಯನ್ನು ಜಗದ್ಗುರುಗಳವರು ಇವರಿಗೆ ದಯಪಾಲಿಸಿದರು. ಹೀಗಾಗಿ ವಿದ್ಯಾಕ್ಷೇತ್ರದ ವಿಸ್ತರಣೆಗೆ ವಿಶೇಷ ಗಮನಕೊಡಲು ಸಾಧ್ಯವಾಯಿತು. ಚಿತ್ರದುರ್ಗದಲ್ಲಿ ಶ್ರೀ ಸಿದ್ಧೇಶ್ವರ ಪ್ರಸಾದ ನಿಲಯ, ಸಂಸ್ಕೃತ, ವೇದ ಪಾಠಶಾಲೆ - ಅಂಬಳಿ, ಹೊಸಳ್ಳಿ, ಅರಸೀಕೆರಿ, ಜಗಳೂರು, ಲಕ್ಷ್ಮೇಶ್ವರ, ಗದಗ, ಯಲಿವಾಳ ಮುಂತಾದ ಹಳ್ಳಿಪಟ್ಟಣಗಳಲ್ಲಿ ಪ್ರೌಢಶಾಲೆಗಳನ್ನು, ಪ್ರಸಾದ ನಿಲಯಗಳನ್ನು ಪ್ರಾರಂಭಿಸಿದರು. ಹಿರಿಯ ಜಗದ್ಗುರುಗಳು ಪ್ರಾರಂಭಿಸಿದ್ದ 'ಸದ್ಧರ್ಮ ಪ್ರಭಾ' ತ್ರೈಮಾಸಿಕದ ಸಂಪಾದಕತ್ವವನ್ನು ವಹಿಸಿಕೊಂಡು ಸೈದ್ಧಾಂತಿಕ ಹಾಗೂ ಧಾರ್ಮಿಕ ವಿಚಾರಗಳನ್ನೊಳಗೊಂಡ ವಿಶಿಷ್ಟ ಪತ್ರಿಕೆಯನ್ನಾಗಿ ಪ್ರಸಾರಗೊಳಿಸಿದರು. ಅದರ ಪ್ರಭಾವಲಯ ಇನ್ನಷ್ಟು ವ್ಯಾಪಕವಾಯಿತು.

ಉಜ್ಜಯಿನಿ ಸದ್ಧರ್ಮ ಪೀಠವನ್ನು ಆಳಿದ ಮಹಾಮಂತ್ರ ಸ್ವರೂಪರೆಂದೆನಿಸಿದ್ದ ಶ್ರೀ ಜಗದ್ಗುರು ಗುರುಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯರು ಮೈಸೂರು ಪ್ರಾಂತದಲ್ಲಿ ಸಂಚರಿಸುವಾಗ ಶಂಭುಲಿಂಗ ಬೆಟ್ಟವು ಅವರನ್ನು ಆಕರ್ಷಿಸಿತು. ಆ ಗುಹೆಯಲ್ಲಿ ಲಿಂಗ ಪೂಜಾನುಷ್ಠಾನ ತತ್ಪರರಾದರು. ಅವರ ಮಹಿಮೆಯನ್ನು ಕೇಳಿದ ಆಗಿನ ಮೈಸೂರು ಮಹಾರಾಜರಾಗಿದ್ದ ಶ್ರೀ ಮುಮ್ಮಡಿ ಕೃಷ್ಣರಾಜರು ಉಜ್ಜಯಿನಿ ಜಗದ್ಗುರುಗಳ ದರ್ಶನಕ್ಕೆ ಆಗಮಿಸಿದರು. ಅವರ ತೇಜಸ್ಸು - ಓಜಸ್ಸುಗಳ ಪ್ರಭಾವಕ್ಕೆ ಒಳಗಾದ ಮಹಾರಾಜರು ಅರಮನೆಗೆ ದಯಮಾಡಿಸಲು ಅರಿಕೆ ಮಾಡಿಕೊಂಡರು. ರಾಜರು ಭೋಗಿಗಳು ಎಂಬ ಭಾವನೆಯಿಂದ ಕೂಡಲೇ ದಯಮಾಡಿಸಲು ಒಪ್ಪದ ಸನ್ನಿಧಿಯವರು ಮಹಾರಾಜರ ಬಗ್ಗೆ ತಿಳಿದುಕೊಂಡು ಕೆಲದಿನಗಳ

ನಂತರ ಮೈಸೂರು ಸಂಸ್ಥಾನದ ಸಕಲ ಬಿರುದಾವಳಿಗಳೊಂದಿಗೆ ಉತ್ಸವಪೂರ್ವಕವಾಗಿ ಅರಮನೆಗೆ ದಯಮಾಡಿಸಿದರು. ಅರಸರು ಲಿಂಗಾಂಗಿಗಳೆಂದು ಅರಿತ ಜಗದ್ಗುರುಗಳವರು ಶಿವತತ್ತ್ವೋಪದೇಶ ಮಾಡಿ ಅನುಗ್ರಹಿಸಿದರು. ಮಹಾರಾಜರ ಮನವಿಯಂತೆ ರಾಜರು ಕೊಟ್ಟ ಕಟ್ಟಡಗಳಲ್ಲಿ ಗುರುಮಠವೊಂದನ್ನು ಸ್ಥಾಪಿಸಿ, ಓರ್ವ ಗುರುವನ್ನು ನಿಯುಕ್ತಗೊಳಿಸಿ, ಕೆಲಕಾಲ ಶಿವಪೂಜಾದಿ ಅನುಷ್ಠಾನ ಕಾರ್ಯಗೈದು ಪೀಠಕ್ಕೆ ಮರಳಿದರು. ಅಂದಿನಿಂದ ಅದು "ಅರಮನೆ ಜಪದಕಟ್ಟೆ ಮಠ"ವೆಂದು ಪ್ರಸಿದ್ಧಿ ಪಡೆಯಿತು. ಅದು ಉಜ್ಜಯಿನಿ ಪೀಠದ ಶಾಖಾಮಠವಾಗಿ ಇಂದಿಗೂ ರಾರಾಜಿಸುತ್ತಿದೆ.

ಅರಮನೆಯ ಜಪದಕಟ್ಟೆ ಮಠವು ಕೆಲವರುಷಗಳಿಂದ ಅನಾಥವಾಗಿತ್ತು. ಗುರುಗಳು ಇಲ್ಲದಿದ್ದುದನ್ನು ಗಮನಿಸಿದ ಹಿರಿಯ ಜಗದ್ಗುರುಗಳು ಶ್ರೀ ಶಿವಪ್ರಕಾಶ ಶಿವಾಚಾರ್ಯರನ್ನೇ ನೇಮಿಸಿ "ಶ್ರೀ ಇಮ್ಮಡಿ ಸದಾಶಿವ ಶಿವಾಚಾರ್ಯ"ರೆಂದು ನಾಮಕರಣ ಮಾಡಿದರು. ೧೯೬೦ರಿಂದ ಮೈಸೂರಿನ ಅರಮನೆ ಜಪದಕಟ್ಟೆ ಮಠಾಧ್ಯಕ್ಷರಾಗಿ ಅನುಪಮ ಕಾರ್ಯವೆಸಗಿದರು. ಸದ್ಧರ್ಮ ಪೀಠದ ಆಸ್ಥಾನ ವಿದ್ವಾಂಸರಾಗಿದ್ದ ಉಮಚಗಿ ಶ್ರೀ ಶಂಕರ ಶಾಸ್ತ್ರಗಳಿಂದ ರಚಿಸಲ್ಪಟ್ಟ ವೀರಶೈವ ಸಿದ್ಧಾಂತ ಪರವಾದ ಶಾಂಕರೀ ವ್ಯಾಖ್ಯಾನದಿಂದ ಒಡಗೂಡಿದ ಈಶ, ಕೇಶ, ಮುಂಡಕ, ಸಿದ್ಧಾಂತ, ಶಿಖೋಪನಿಷತ್ತುಗಳನ್ನು, ಬ್ರಹ್ಮಸೂತ್ರದ ಶಾಂಕರೀ ವೃತ್ತಿಯನ್ನು ಪ್ರಕಟಿಸಿದರು. ಡಾ। ಎಂ. ಶಿವಕುಮಾರಸ್ವಾಮಿಯವರು ಶ್ರೀ ಸಿದ್ಧಾಂತ ಶಿಖಾಮಣಿಯನ್ನಾಧರಿಸಿ ಇಂಗ್ಲೀಷನಲ್ಲಿ ಭಾಷಾಂತರಿಸಿದ 'ಶ್ರೀ ರೇಣುಕ ಗೀತಾ' ಎಂಬ ಗ್ರಂಥವನ್ನು ಪ್ರಕಟಿಸಿದರು. ಹೀಗೆ ಸಿದ್ಧಾಂತ ಗ್ರಂಥಗಳ ಪ್ರಕಟಣೆಗೆ ಅಪೂರ್ವ ಕೊಡುಗೆ ನೀಡಿದ ಶ್ರೀಗಳವರು ಲಕ್ಷ್ಮೇಶ್ವರದಲ್ಲಿ ಸತತವಾಗಿ ೩ ತಿಂಗಳವರೆಗೆ ಶ್ರೀ ಸಿದ್ಧಾಂತ ಶಿಖಾಮಣಿ ಕುರಿತು ೧೯೫೮ರಲ್ಲಿ ಪ್ರವಚನ ನೀಡಿದುದು ಒಂದು ದಾಖಲೆಯಾಗಿದೆ. ಇತ್ತ ಮೈಸೂರಿನಲ್ಲಿ ವ್ಯಾಜ್ಯದಲ್ಲಿ ಸಿಲುಕಿದ ಅರಮನೆ ಜಪದಕಟ್ಟೆ ಮಠದ ಉಳಿವಿಗಾಗಿ ಅಹೋರಾತ್ರಿ ಶ್ರಮಿಸಿ ಅಂತ್ಯಕಾಲದಲ್ಲಿ ಯಶಸ್ಸು ಪಡೆದರು. ಅಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ಮಂಗಲ ಮಂದಿರವನ್ನು ಭಕ್ತ ಸಮುದಾಯದ ಸಹಕಾರದೊಂದಿಗೆ ನಿರ್ಮಾಣಗೊಳಿಸಿದರು. ಅದೇರೀತಿ ಚಿತ್ರದುರ್ಗದಲ್ಲೂ ಶ್ರೀ ಜಗದ್ಗುರು ಪಂಚಾಚಾರ್ಯ ಮಂಗಲ ಮಂದಿರವನ್ನು ಕಟ್ಟಿಸಿದ ಕೀರ್ತಿಗೆ ಪಾತ್ರರಾದರು.

ಸದ್ಧರ್ಮ ಪೀಠೇಶ :

ಇವರ ವಿದ್ವತ್, ಕರ್ತೃತ್ವಶಕ್ತಿ, ಸೌಜನ್ಯಗಳನ್ನು ಮೆಚ್ಚಿದ ಉಜ್ಜಯಿನಿ ಹಿರಿಯ ಜಗದ್ಗುರುಗಳವರು ಇವರಿಗೆ ೨೮–೮–೮೫ನೆಯ ಇಸವಿಯಲ್ಲಿ (ಕ್ರೋಧನನಾಮ ಸಂವತ್ಸರ, ಶ್ರಾವಣ ಶುದ್ಧ ತ್ರಯೋದಶಿ, ಬುಧವಾರ) ಚರಪಟ್ಟಾಧಿಕಾರವನ್ನು ಸದ್ಧರ್ಮ ಪೀಠದ ಪದ್ಧತಿಯಂತೆ ಅನುಗ್ರಹಿಸಿದರು. ಪಂಚಮುದ್ರಾ ಪೂರ್ವಕ ಕಿರೀಟಧಾರಣ ಮಾಡಿ "ಶ್ರೀ ೧೦೦೮ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು" ಎಂದು ನಾಮಕರಣ ಮಾಡಿ ಆಶೀರ್ವದಿಸಿದರು. ಗುರುತರ ಹೊಣೆ ಹೊತ್ತುಕೊಂಡ ಸನ್ನಿಧಿಯವರು ಎಲ್ಲಾ ಪಂಚಪೀಠಾಚಾರ್ಯರ ಜೊತೆ ಜೊತೆಯಲ್ಲಿ ಸುಮಾರು ೧೦ ವರ್ಷಗಳ ಕಾಲ ದೇಶಾದ್ಯಂತ ಸಂಚರಿಸಿ ಸದ್ಧರ್ಮ ಪ್ರಭೆಯನ್ನು ಉದ್ದೀಪನಗೊಳಿಸಿದರು. ಉಜ್ಜಯಿನಿ ಪೀಠದ ಜೀರ್ಣೋದ್ಧಾರಕ್ಕೆ ಮತ್ತು ಕೆಲವು ನೂತನ ಕಟ್ಟಡಗಳಿಗೆ ಶ್ರಮವಹಿಸಿ ಧನ ಸಂಗ್ರಹಿಸಿ ನವನಿರ್ಮಾಣ ಕಾರ್ಯ ಮಾಡಿದರು. ಸಂಸ್ಥಾನದ ಘನತೆಗೆ ತಕ್ಕಂತೆ ಆನೆ ಇರಬೇಕೆಂಬ ಅಭಿಲಾಷೆಯಿಂದ ಸರಕಾರದಿಂದ ಆನೆಯೊಂದನ್ನು ಪಡೆದು ಘನತೆ–ಗೌರವ ಹೆಚ್ಚಿಸಿದರು. ಅತಿರುದ್ರ ಹೋಮ, ಜಪ–ತಪ ಮುಂತಾದ ಧರ್ಮಕಾರ್ಯಗಳಿಂದ ಲೋಕಕಲ್ಯಾಣಕ್ಕಾಗಿ ಶ್ರಮಿಸುತ್ತಿರುವಾಗಲೇ ದಿ॥೩–೪–೧೯೯೫ರಂದು ಈ ಲೋಕದಿಂದ ಅಗಲಿ ಶಿವಲೋಕವನ್ನು ಸೇರಿದರು. ತಮ್ಮ ಬದುಕನ್ನು ಸಾರ್ಥಕಗೊಳಿಸಿಕೊಂಡರು.

ವಯೋವೃದ್ಧರೂ, ಜ್ಞಾನವೃದ್ಧರೂ ಆದ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರು ದಣಿವ ಲೆಕ್ಕಿಸದೆ ಸದ್ಧರ್ಮ ಪೀಠದ ಸಂರಕ್ಷಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡು ಮುನ್ನಡೆದರು. ಆದರೆ ಶತಮಾನದಂಚಿನಲ್ಲಿದ್ದ ಮುಪ್ಪಾದ ಶರೀರಕ್ಕೆ ವಿಶ್ರಾಂತಿ ಬೇಕಾಯಿತು. ಸದ್ಧರ್ಮ ಪೀಠದ ಸದಭಿಮಾನಿ ಭಕ್ತರ ಕೋರಿಕೆ ಹಾಗೂ ಸಮಾನ ಪೀಠಾಚಾರ್ಯರ ಆಗ್ರಹಕ್ಕೆ ಒಳಗಾಗಿ ಸ್ವ ಇಚ್ಛೆಯಿಂದ ನೂತನ ಪೀಠಾಚಾರ್ಯರನ್ನು ತಮ್ಮ ಜೀವಿತಕಾಲದಲ್ಲೇ ನಿಯುಕ್ತಿಗೊಳಿಸಲು ನಿರ್ಧರಿಸಿದರು. ಅವರ ದಿವ್ಯದೃಷ್ಟಿಗೆ ಸಿರಿಗೆರೆಯ ಹಿರಿಯಮಠದ ಶ್ರೀ ಷ॥ ಬ್ರ। ಮರುಳಸಿದ್ಧ ಶಿವಾಚಾರ್ಯರು ಸೂಕ್ತವ್ಯಕ್ತಿ ಎಂದು ಗೋಚರವಾಯಿತು. ಆಗಲೇ ಆದೇಶ ಪತ್ರ ಕಳಿಸಿ ಶ್ರೀ ಪೀಠಕ್ಕೆ ಬರಮಾಡಿಕೊಂಡರು. ಪೀಠಾಭಿಮಾನಿಗಳಿಂದ ತುಂಬಿದ ಸಭೆಯಲ್ಲಿ ಸಿರಿಗೆರೆಯ ಮರುಳಸಿದ್ಧ ಶಿವಾಚಾರ್ಯರೇ ತಮ್ಮ ಉತ್ತರಾಧಿಕಾರಿ ಎಂದು ಉದ್ಘೋಷಿಸಿದರು. ಜಯಘೋಷದೊಂದಿಗೆ ಭಕ್ತಸಂದೋಹ ಶ್ರೀಗಳವರನ್ನು ತಮ್ಮ ಭಾವೀ ಜಗದ್ಗುರುಗಳೆಂದು ಸ್ವೀಕರಿಸಿತು. ಮುಂದೆ ಪೀಠ ಪರಂಪರೆಯಂತೆ ಸಮಾನ ಪೀಠಾಚಾರ್ಯರಾದ ಶ್ರೀಮದ್ರಂಭಾಪುರಿ, ಶ್ರೀಮತ್ ಹಿಮವತ್ಕೇದಾರ, ಶ್ರೀಮತ್ ಶ್ರೀಶೈಲ, ಹಾಗೂ ಶ್ರೀಮತ್ ಕಾಶಿ ಜಗದ್ಗುರುಗಳವರ ದಿವ್ಯಸನ್ನಿಧಾನದಲ್ಲಿ ಬಹು ವಿಜೃಂಭಣೆಯಿಂದ ಸದ್ಧರ್ಮ ಪೀಠಾರೋಹಣ ಕಾರ್ಯ ನೆರವೇರಿಸಿ ಸಂತೃಪ್ತರಾದರು, ತದನಂತರ ಶಿವನಲ್ಲಿ ಲೀನರಾದರು (೧೬–೧೨–೧೯೯೯).

ಸದ್ವಂಶದ ಸತ್ಪುತ್ರ :

ಮಾಮರವು ಫಲಿತು ರಸವತ್ತಾದ ಮಾವಿನ ಹಣ್ಣನ್ನೇ ನೀಡೀತಲ್ಲದೆ, ಬೇವಿನ ಹಣ್ಣನ್ನು ಕೊಡಲಾರದು. ಹಾಗೆಯೇ ಡಿ. ಹಿರೇಹಾಳು ಗ್ರಾಮದ ಮಳೆಯಮಠವು ನಾಡಿಗೆ ಸತ್ಪುತ್ರರನ್ನು ನೀಡೀತಲ್ಲದೆ, ಕುಪುತ್ರರನ್ನಲ್ಲ. ಇಂದು ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗ ತಾಲೂಕಿನಲ್ಲಿರುವ ಡಿ. ಹಿರೇಹಾಳು ಗ್ರಾಮವು ಎಂದೆಂದಿಗೂ ಕರ್ನಾಟಕ ನುಡಿ –ನಡವಳಿಕೆಯ ತವರೂರಾಗಿದೆ. ಅದು ಬಳ್ಳಾರಿ ನಗರದ ಸಮೀಪದ ಗ್ರಾಮ ಎಂಬುದು ಇದಕ್ಕೆ ಕಾರಣವಿರಬಹುದು. ಅಲ್ಲದೇ ಪ್ರಾತಃಸ್ಮರಣೀಯರೂ, ಪಂಚಪೀಠಗಳ ಪ್ರಾಣಸ್ವರೂಪರೂ, ವಿದ್ವಾಂಸರೂ, ಸ್ಫುರದ್ರೂಪಿಗಳೂ ಮತ್ತು ಪಾವನ ಚರಿತರೂ ಆಗಿದ್ದ ಶ್ರೀಮದ್ ರಂಭಾಪುರಿ ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಲಿಂ। ಶಿವಾನಂದ ರಾಜದೇಶಿಕೇಂದ್ರ ಭಗವತ್ಪಾದರಂಥವರು ಆ ಗ್ರಾಮದಲ್ಲಿ ಜನಿಸಿದುದು ಇನ್ನೊಂದು ಕಾರಣವಿರಬಹುದು. ಮತ್ತೊಂದು ಕಾರಣವೆಂದರೆ ಶ್ರೀ ಗವಿಸಿದ್ಧೇಶ್ವರ ಕ್ಷೇತ್ರವು ಈ ಗ್ರಾಮದ ಪಕ್ಕದಲ್ಲೇ ಇದ್ದು ಆ ಮಹಾದೇವನೊಲಿದು ಪಾದವನ್ನಿಟ್ಟ ನೆಲವಾದುದರಿಂದ ಇದೊಂದು ಪವಿತ್ರ ಕ್ಷೇತ್ರವೆನಿಸಿದೆ. ಇಲ್ಲಿಯ ಜಲ, ತೀರ್ಥವೆನಿಸಿದೆ. ಕಂತುಹರನ, ಜಗದ್ಗುರುವರೇಣ್ಯರ ಕೃಪಾಕಟಾಕ್ಷಕ್ಕೆ ಒಳಗಾದ ಪುಣ್ಯಭೂಮಿ ಈ ಹಿರೇಹಾಳು ಗ್ರಾಮ. ಈ ಗ್ರಾಮದ ಮಳೆಯಮಠದ ಆಚಾರ–ವಿಚಾರ ಸಂಪನ್ನರಾದ ಶ್ರೀ ವೇ॥ ಸಿದ್ಧಯ್ಯನವರು

ಮತ್ತವರ ಸಹಧರ್ಮಿಣಿ ಶ್ರೀಮತಿ ಚೆನ್ನಬಸಮ್ಮನವರ ಉದರಾಂಬುಧಿಯಲ್ಲಿ ಜನಿಸಿದ ಜಂಗಮ ಪುಂಗವನೇ ಈ ಬಸವರಾಜ.

ದುಂಡುಮೊಗದ, ತುಸು ಗಿಣಿಮೂಗಿನ, ತುಂಬುಗಲ್ಲದ, ನಿಂಬೆಹಣ್ಣಿನ ಬಣ್ಣದ ಈ ಬಸವರಾಜ ಹುಟ್ಟಿನಿಂದಲೇ ದಿಟ್ಟಿ (ದೃಷ್ಟಿ)ಯಾಗುವಂಥ ಸ್ಫುರದ್ರೂಪಿ! ನೋಡಿದವರೆಲ್ಲ ಎತ್ತಿ ಮುದ್ದಾಡದೆ ಇರುತ್ತಿರಲಿಲ್ಲ. ದೃಷ್ಟಿ ತಾಗೀತೆಂದು ಕಪ್ಪು ಬೊಟ್ಟು ಇಟ್ಟು ಆ ಹಡೆದವ್ವ ಈ ಹುಡುಗನನನ್ನು ಬಚ್ಚಿಡುತ್ತಿದ್ದಳು. ಆದರೆ ಬೆಳಕನ್ನು ಗಡಿಗೆಯಲ್ಲಿ ಮುಚ್ಚಿಟ್ಟರೂ ಆ ಗಡಿಗೆಯ ತುಂಬ ಬೆಳಕು ಚೆಲ್ಲುವುದಲ್ಲವೇ? ಎಷ್ಟು ದಿನ ಬಚ್ಚಿಡಲು ಸಾಧ್ಯ! ೧೯೬೫ರಲ್ಲಿ ಜನಿಸಿದ ಬಸವರಾಜ ತನ್ನ ೬ನೆಯ ವಯಸ್ಸಿನಲ್ಲಿ ತನ್ನೂರಿನಲ್ಲಿಯೇ ಪ್ರಾಥಮಿಕ ಶಿಕ್ಷಣವನ್ನು ಪ್ರಾರಂಭಿಸಿದನು. ಸಹಪಾಠಿಗಳು ಸದಾ ಸುತ್ತುವರಿದು ಭಕ್ತಿ ಗೌರವ ಸಲ್ಲಿಸುತ್ತಿದ್ದರು. ಅವನ ಹಿಂದೊಂದು ತಂಡ ಸದಾ ಸುತ್ತುವರಿಯುತ್ತಿತ್ತು. ಸುಶೀಲನಾದ ಈ ಬಾಲಕನು ತನ್ನ ಓದನ್ನು ಮುಂದುವರಿಸುತ್ತಿದ್ದನು. ಆಗ ಸಿರಿಗೆರೆ ಹಾಗೂ ಹಿರೇಹಾಳು ಮಠದ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಷ|ಬ್ರ| ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳವರ ಪರುಷದೃಷ್ಟಿ ಈ ಪುಟ್ಟ ಬಾಲಕನ ಮೇಲೆ ಬಿತ್ತು. ಮೊದಲೇ ಚಿನ್ನ! ಅದಕ್ಕೆ ಪರುಷ ದೃಷ್ಟಿಪಾತವಾದ ಬಳಿಕ ಕೇಳಬೇಕೆ? ಅದು ಇನ್ನೂ ಲಕಲಕ ಹೊಳೆಯತೊಡಗಿತು, ಚಿನ್ನಕ್ಕೆ ಪುಟವಿಟ್ಟಂತಾಯಿತು.

೧೯೭೭ರಲ್ಲಿ ವೀರತಪಸ್ವಿ ಶ್ರೀಮದ್ ರಂಭಾಪುರಿ ಜಗದ್ಗುರು ವೀರಗಂಗಾಧರ ರಾಜದೇಶೀಕೇಂದ್ರ ಶಿವಾಚಾರ್ಯ ಮಹಾಸನ್ನಿಧಾನಂಗಳವರ ಸಹಸ್ರ ಕುಂಭಾಭಿಷೇಕ, ಮಹಾಪೂಜಾದಿ ಮಂಗಲ ಕಾರ್ಯಗಳು ಬಳ್ಳಾರಿ ಮಹಾನಗರದಲ್ಲಿ ವೈಭವಪೂರ್ಣವಾಗಿ ನೆರವೇರುತ್ತಲಿದ್ದವು. ಆಗ ಅದಕ್ಕೆಲ್ಲ ಶ್ರೀ ವಿರೂಪಾಕ್ಷ ಶಿವಾಚಾರ್ಯರದೇ ಮಾರ್ಗದರ್ಶನ; ಅವರದೇ ಅಗ್ರಪಂಕ್ತಿಯ ಸೇವೆ. ಆ ಸಮಯವನ್ನು ಸಾಧಿಸಿ ಶ್ರೀಗಳವರು ತಮ್ಮ ಪೂರ್ವಾಶ್ರಮದ ಹಿರೇಹಾಳು ಮಳೆಮಠಕ್ಕೆ ಸಂಬಂಧಿಸಿದ ೮ ವಟುಗಳನ್ನು ಬಳ್ಳಾರಿಗೆ ಕರೆಸಿದರು. ಶ್ರೀ ರಂಭಾಪುರಿ ಮಹಾಸನ್ನಿಧಾನದಲ್ಲಿ ಸಾಲಾಗಿ ನಿಲ್ಲಿಸಿದರು. ಇವರಲ್ಲಿ ಓರ್ವ ಯೋಗ್ಯ ವಟುವನ್ನು ಆಯ್ಕೆಮಾಡಿ ಅನುಗ್ರಹಿಸಬೇಕೆಂದು ಕೋರಿದರು. ರೋಗಿ ಬಯಸಿದ್ದೂ, ವೈದ್ಯ ಹೇಳಿದ್ದೂ ಒಂದೇ ಆಗಬೇಕೆ! ಆ ಮಹಾಸನ್ನಿಧಾನವು ಬಸವರಾಜನನ್ನೇ ಆಯ್ಕೆಮಾಡಿ ಕರುಣಾಪೂರಿತ ದಿವ್ಯದೃಷ್ಟಿ ಬೀರಿ ಆಶೀರ್ವದಿಸಿದರು. ಆದರೆ ತಾಯಿ-ತಂದೆ, ಚಿಕ್ಕಪ್ಪ, ಅಣ್ಣ ಹಾಗೂ ಮಾವ ಇದಕ್ಕೆ ಒಪ್ಪಲಿಲ್ಲ, ದೊಡ್ಡ ಪಂಚಾಯಿತಿಯೇ ನಡೆಯಿತು. ಆಗ ಶ್ರೀ ವಿರೂಪಾಕ್ಷ ಶಿವಾಚಾರ್ಯರು ಅವರೆಲ್ಲರ ಸಮಕ್ಷಮದಲ್ಲಿ ಬಾಲಕ ಬಸವರಾಜನನ್ನು ಕರೆದು, "ಲೇ ತಮ್ಮ, ನೀನು ಸ್ವಾಮಿ ಆಗಾಕ ಒಪ್ಪತಿ ಏನಲೇ?" ಎಂದು ಕೇಳಿದರು. ತಕ್ಷಣವೇ ಆ ಬಾಲಕ ಒಪ್ಪಿ ಸಾಷ್ಟಾಂಗವೆರಗಿದನು. ಎಲ್ಲರೂ ಅವಾಕ್ಕಾದರು. ಕಟ್ಟೆಯ ಕಲ್ಲು ಕಟ್ಟೆಗೆ ಸೇರಿತು ಎಂದು ಕೆಲವರು ಹಿರಿಹಿರಿ ಹಿಗ್ಗಿದರು, ಒಬ್ಬಿಬ್ಬರು ಕರುಬಿದರು. ಇದಾವುದರ ಪರಿವೆಯೂ ಗುರುಗಳಿಗಾಗಲೀ, ಶಿಷ್ಯರಿಗಾಗಲೀ ಇರಲಿಲ್ಲ. ಬಸವರಾಜನು ಮನೆ- ಮಠ ತೊರೆದು ಗುರುವಿನ ಗುಲಾಮನಾಗಿ ಬಸವರಾಜ ದೇವರು ಎನಿಸಿಕೊಂಡನು. 'ಶುಭಸ್ಯ ಶೀಘ್ರಂ' ಎಂಬಂತೆ ಶ್ರೀಮದುಜ್ಜಯಿನಿ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಾನದಲ್ಲಿ ದಿ|೨೬-೬-೧೯೮೦ರಲ್ಲಿ ಪಟ್ಟಾಭಿಷೇಕವು ನೆರವೇರಿತು. ಬಸವರಾಜ ಕಾವಿ ಕಾಷಾಯಾಂಬರ ಉಟ್ಟು, ಹಳೆಯ ಬಟ್ಟೆ ಬಿಟ್ಟು ೧೫ರ ಹರೆಯದಲ್ಲಿಯೇ ಶ್ರೀ ಷ|ಬ್ರ| ಮರುಳಸಿದ್ಧ ಶಿವಾಚಾರ್ಯರಾದರು.

ಸಂಸ್ಕೃತ, ವೈದಿಕ, ಜ್ಯೋತಿಷ್ಯಗಳಂತಹ ಆರ್ಷೇಯ ವಿದ್ಯೆಗಳು ಮಠಾಧಿಪತಿಗಳಿಗೆ ಮತ್ತು ಪೀಠಾಧಿಪತಿಗಳಿಗೆ ಅನಿವಾರ್ಯ ಹಾಗೂ ಅತ್ಯವಶ್ಯಕವೆಂದರಿತ ಶ್ರೀ ವಿರೂಪಾಕ್ಷ ಶಿವಾಚಾರ್ಯರು ತಮ್ಮ ಶಿಷ್ಯರನ್ನು ಶ್ರೀ ಸಿದ್ಧಗಂಗಾ ಮಠದ ಗುರುಕುಲಕ್ಕೆ ಸೇರಿಸಿದರು. ಅಂದು ೧೦ನೆಯ ತರಗತಿಯಿಂದ ಆರಂಭವಾದ ಅವರ ಅಧ್ಯಯನವು ಅದೇ ಗುರುಕುಲದಲ್ಲಿ ನಿರಂತರವಾಗಿ ನಡೆದು ಅವರು ಪದವೀ(ಬಿ.ಎ.) ಭೂಷಿತರಾದರು. ಇದು ಸಂಸ್ಕೃತ ವಿದ್ವತ್ ಪದವಿ ಪಡೆಯಲು ಅನುವು ಮಾಡಿಕೊಟ್ಟಿತು. ಸಿದ್ಧಗಂಗಾ ಸುಕ್ಷೇತ್ರದ ಅಧಿಪತಿಗಳಾದ ಪೂಜ್ಯ ಶ್ರೀ ಮ.ನಿ.ಪ್ರ. ಶಿವಕುಮಾರ ಮಹಾಸ್ವಾಮಿಗಳು ಇವರ ಅಧ್ಯಯನಶೀಲತೆ, ಸಚ್ಚಾರಿತ್ರ್ಯ ಹಾಗೂ ಸದ್ವಿನಯಗಳನ್ನು ಕಂಡು ಸಂಪ್ರೀತರಾಗಿ ತುಂಬುಹೃದಯದಿಂದ ಹರಸಿದರು. ಓದುವ ಕಕ್ಕುಲಾತಿ ಇರುವಾಗಲೇ ಗುರುಗಳಾದ ಶ್ರೀ ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು ೧೬-೩-೧೯೮೪ರಂದು ಶಿವಸನ್ನಿಧಿಗೆ ಸಂದರು. ತಂದೆಯಂತಿದ್ದ ಗುರುಗಳ ಅಗಲುವಿಕೆಯಿಂದ ಶ್ರೀ ಮರುಳಸಿದ್ಧರು ತಬ್ಬಲಿಯಾದರು, ಅವರ ಮನ ಘಾಸಿಗೊಂಡಿತು.

ಅಧ್ಯಯನದ ಆಸಕ್ತಿ :

ಗುರುಗಳು ಗತಿಸಿದರೂ ಗುರುಪುತ್ರರ ಗುರಿ ಮಾತ್ರ ಬದಲಾಗಲಿಲ್ಲ. ಹಿರಿಯ ಗುರುಗಳ ಕೃಪಾಪಾತ್ರರಾದ ಅಭಿಮಾನೀ ಭಕ್ತಸಮೂಹ ಹಾಗೂ ಶಿವಾಚಾರ್ಯ ಬಳಗದವರು ಇವರ ನೆರವಿಗೆ ಬಂದರು. ಶ್ರೀ ಷ|ಬ್ರ|ಡಾ| ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಅಮರೇಶ್ವರ ಮಠ, ಗುಳೇದಗುಡ್ಡ (ಇಂದಿನ ಕಾಶೀ ಜಗದ್ಗುರುಗಳವರು) ಇವರ ಪ್ರವಚನವು ಬಳ್ಳಾರಿ ನಗರದ ಶ್ರೀ ಮರಿಸ್ವಾಮಿ ಮಠದಲ್ಲಿ ಜರುಗುತ್ತಲಿತ್ತು. ಆ ಸನ್ನಿವೇಶದ ಸದುಪಯೋಗ ಮಾಡಿಕೊಂಡು ಶ್ರೀ ಷ|ಬ್ರ| ವೀರಭದ್ರ ಶಿವಾಚಾರ್ಯ ಸ್ವಾಮಿಗಳು ಕಂಬಾಳಿಮಠ ಮತ್ತು ಶ್ರೀ ಮಠದ ಶಿಷ್ಯರು, ಡಾ| ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳಲ್ಲಿ ಅರಿಕೆ ಮಾಡಿಕೊಂಡರು. ಅವರು ಶ್ರೀ ಮರುಳಸಿದ್ಧ ಶಿವಾಚಾರ್ಯರ ವ್ಯಕ್ತಿತ್ವ ಹಾಗೂ ವಿದ್ವತ್ ಅಳೆದು ನೋಡಿ "ಇದೊಂದು ಮೂರ್ತಿಯಾಗಲಿದೆ, ಅವಶ್ಯವಾಗಿ ಕಾಶೀ ಪೀಠಕ್ಕೆ ಕಳುಹಿಸಿರಿ" ಎಂದು ಅಪ್ಪಣೆ ಕೊಡಿಸಿದರು. ಅಂದೇ ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಮಹಾಸನ್ನಿಧಾನಕ್ಕೆ ಪತ್ರಮುಖೇನ ಅರಿಕೆ ಮಾಡಿಕೊಂಡು ಅನುಮತಿ ದೊರಕಿಸಿಕೊಂಡರು.

ಆ ಸಮಯದಲ್ಲಿ ಹೊನ್ನಾಳಿಯ ಹಿರೇಕಲ್ಮಠದ ಶ್ರೀ ಷ|ಬ್ರ|ಒಡೆಯರ್ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರ ಆಶ್ರಯದಲ್ಲಿ ಅಧ್ಯಯನ ಸಾಗಿಸುತ್ತಿದ್ದ ಶ್ರೀ ಸಿದ್ಧಪಾದ ಶಿವಾಚಾರ್ಯ ಸ್ವಾಮಿಗಳು, ಕಾಮನಾಳು ಅವರು ಕಾಶೀ ಶ್ರೀ ಜಂಗಮವಾಡಿ ಮಠದ ಗುರುಕುಲದಲ್ಲಿದ್ದರು. ಅವರು ಮತ್ತು ಶ್ರೀ ಮರುಳಸಿದ್ಧ ಶಿವಾಚಾರ್ಯರು ಬಾಲ್ಯಸ್ನೇಹಿತರಾಗಿದ್ದುದು ಯೋಗಾಯೋಗ! ಹೀಗಾಗಿ ಕಾಶಿಗೆ ವಿಶೇಷ ಅಧ್ಯಯನಕ್ಕೆ ತೆರಳಲು ಸಿರಿಗೆರೆಯ ಶ್ರೀಗಳವರಿಗೆ ಅತ್ಯಂತ ಸಂತೋಷವಾಯಿತು. ಇವರ ಮೊಟ್ಟಮೊದಲ ಪಯಣ ರಾಣೇಬೆನ್ನೂರಿನಿಂದ, ಅದೂ ನಮ್ಮ ಮನೆಯಿಂದ ಎಂಬುದು ನಮಗೆ ಹೆಮ್ಮೆಯನ್ನುಂಟುಮಾಡಿದೆ.

ಕಾಶೀವಾಸ ಆಯಾಸವೆನಿಸಿದರೂ ಮುಂದೆ ಗುರಿಯಿತ್ತು. ಹಿಂದೆ ಗುರು(ಡಾ| ಚಂದ್ರಶೇಖರ ಶಿವಾಚಾರ್ಯರು) ಇದ್ದುದು ಹಾಗೂ ಅಧ್ಯಯನದಲ್ಲಿ ಆಸಕ್ತಿಯಿದ್ದುದು

ಆಯಾಸವನ್ನು ಲೆಕ್ಕಿಸದಂತೆ ಮಾಡಿದವು. ಬುದ್ಧಿಶಕ್ತಿ, ಸತತ ಪರಿಶ್ರಮ ಅವರ ಬೆನ್ನಿಗಿದ್ದವು. ಹಾಗಾಗಿ ವಿಭಾಗದಲ್ಲಿ ಪ್ರಥಮ ಶ್ರೇಣಿಯಲ್ಲಿ ಪ್ರಥಮರಾಗಿ 'ವೇದಾಂತಾಚಾರ್ಯ (ಎಂ.ಎ.) ಪದವೀಭೂಷಿತರಾದರು. ಮುಂದೆ ಪಿಎಚ್.ಡಿ.ಗೆ ಹೆಸರು ದಾಖಲಿಸಿದರು. "ಶೈವಾಗಮ ಮತ್ತು ಉಪನಿಷತ್ತುಗಳಲ್ಲಿ ವೀರಶೈವ ಧರ್ಮ – ದರ್ಶನಗಳ ವಿಮರ್ಶೆ" ಎಂಬ ವಿಷಯವನ್ನು ಆಯ್ದುಕೊಂಡರು. ಹಗಲಿರುಳೂ ಅಧ್ಯಯನದಲ್ಲಿ ನಿರತರಾದರು. ಜೊತೆಗೆ ಶ್ರೀ ಜಗದ್ಗುರು ವಿಶ್ವಾರಾಧ್ಯ ಶೋಧ ಪ್ರತಿಷ್ಠಾನದ ಹೊಣೆಗಾರಿಕೆಯನ್ನೂ ಕಾಶೀ ಜಗದ್ಗುರು ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ಇವರಿಗೇ ವಹಿಸಿದರು.

ಜಗದ್ಗುರು ಪ್ರಾಪ್ತಿ :

"ಪುರುಷಸ್ಯ ಭಾಗ್ಯಂ, ಸ್ತ್ರೀಯಶ್ಚರಿತ್ರಂ ದೇವೋ ನ ಜಾನಾತಿ ಕುತೋ ಮನುಷ್ಯಃ" ಎಂಬ ಋಷಿವಾಣಿ ಹುಸಿಯಾದೀತೇ ? ಇವರ ವಿದ್ವತ್, ಚಾರಿತ್ರ್ಯ ಹಾಗೂ ವ್ಯಕ್ತಿತ್ವಕ್ಕೆ ಮಾರುಹೋದ ಅನೇಕ ಮಠಾಧಿಪತಿಗಳು ಈ ಪೂಜ್ಯರನ್ನೇ ತಮ್ಮತಮ್ಮ ಉತ್ತರಾಧಿಕಾರಿಯನ್ನಾಗಿ ಆಯ್ಕೆಮಾಡಿಕೊಂಡರು. ನಾ ಮುಂದೆ, ತಾ ಮುಂದೆ ಎಂದು ಸ್ಪರ್ಧೆಗೆ ಇಳಿದರು. ಶ್ರೀಮದುಜ್ಜಯಿನೀ ಚರಪಟ್ಟದ ಜಗದ್ಗುರು ಶ್ರೀ ಮರುಳಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಹೊಸಪೇಟೆಯಲ್ಲಿ "ಶ್ರೀ ಮರುಳಸಿದ್ಧರು ಉಜ್ಜಯಿನೀ ಪೀಠದ ಉತ್ತರಾಧಿಕಾರಿ" ಎಂದು ಸ್ವಸಂತೋಷದಿಂದ ಸ್ವಯಂಘೋಷಣೆ ಮಾಡಿದರು. ಇತ್ತ ಹಂಪೆಯ ಸಾವಿರ ದೇವರಮಠದ ಶ್ರೀ ಸಿದ್ಧಲಿಂಗ ಶಿವಾಚಾರ್ಯರು ಇವರ ಸಮ್ಮತಿಯನ್ನೂ ಕೇಳದೆ, ಒಲ್ಲೆನೆಂದರೂ ಬಿಡದೆ, ತಮ್ಮ ಉತ್ತರಾಧಿಕಾರಿಯೆಂದು ಘೋಷಿಸಿ ೫–೧೧–೧೯೯೫ಕ್ಕೆ ಪಟ್ಟಾಧಿಕಾರ ನೆರವೇರಿಸಲಾಗುವುದೆಂದು ಪ್ರಕಟಿಸಿದರು. ಶ್ರೀ ಮರುಳಸಿದ್ಧ ಶಿವಾಚಾರ್ಯರಿಗೋ ಇದಾವುದರಲ್ಲಿಯೂ ಆಸಕ್ತಿಯಿಲ್ಲ. ಅಭಿಲಾಷೆಯಂತೂ ಇಲ್ಲವೇ ಇಲ್ಲ. ತಾವಾಯಿತು, ತಮ್ಮ ಅಧ್ಯಯನವಾಯಿತು. ಬೇಗ ತಮ್ಮ ಮಹಾಪ್ರಬಂಧ ಬರೆದು ಮುಗಿಸಿ ಡಾಕ್ಟರೇಟ್ ಪಡೆಯಬೇಕು ಎಂಬುದೊಂದೇ ಅವರ ಜೀವನದ ಗುರಿಯಾಗಿತ್ತು. ಆದರೆ ಇದು ಗುರುವಿನ ಇಚ್ಛೆಯಾಗಿರಲಿಲ್ಲ, ತಾನೊಂದು ಬಗೆದರೆ ದೈವವೊಂದು ಬಗೆಯಿತು.

ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಪೀಠದಿಂದ ಓರ್ವ ದೂತನ ಕೈಯಲ್ಲಿ ಒಂದು ಪತ್ರವನ್ನು ಕಳುಹಿಸಿಕೊಟ್ಟರು. ಅದನ್ನು ಒಡೆದು ಓದಿದರೆ ಮರುಳಸಿದ್ಧರಿಗೆ ನಂಬಿಕೆಯೇ ಆಗಲಿಲ್ಲ. ಕರೆಯಬಂದ ದೂತ, "ಜಗದ್ಗುರುಗಳವರ ಅಪ್ಪಣೆಯಾಗಿದೆ; ತಾವು ಪೀಠಕ್ಕೆ ಬರಲೇಬೇಕು" ಎಂದು ಒತ್ತಾಯಪೂರ್ವಕ ಅರಿಕೆ ಮಾಡಿಕೊಂಡನು. ಸನ್ನಿಧಿಯವರ ಅಪ್ಪಣೆ ಮೀರುವಂತಿರಲಿಲ್ಲ, ಪೀಠಕ್ಕೆ ಆಗಮಿಸಿದರು. ಅಂದು ಅಮವಾಸ್ಯೆ, ಸಾವಿರಾರು ಜನರು ಶ್ರೀ ಪೀಠದ ಪ್ರಾಂಗಣದಲ್ಲಿ ಸಮ್ಮಿಳಿತರಾಗಿದ್ದು, ಒಂದು ಕಿರುಸಭೆಯೇ ಏರ್ಪಟ್ಟಿತ್ತು. ಆ ಸಭೆಯಲ್ಲಿ ಹಿರಿಯ ಸನ್ನಿಧಿಯವರು, "ಇವರೇ (ಮರುಳಸಿದ್ಧರೇ) ತಮ್ಮ ಉತ್ತರಾಧಿಕಾರಿ" ಎಂದು ಸುಗ್ರೀವಾಜ್ಞೆ ಹೊರಡಿಸಿದರು. ಮರುಮಾತಿಗೆ ಅವಕಾಶವಿರಲಿಲ್ಲ. ಆ ಅಪ್ಪಣೆ ಕೇಳಿ ಕಕ್ಕಾಬಿಕ್ಕಿಯಾದರು ಶ್ರೀ ಮರುಳಸಿದ್ಧರು. ಸನ್ನಿಧಿಯವರ ಪಾದಂಗಳಿಗೆರಗಿ ಪರಿಪರಿಯಾಗಿ ಬೇಡಿಕೊಂಡರು. "ಬುದ್ಧೀ, ನನಗಿಂತ ಹಿರಿಯರನ್ನು, ಅನುಭವಿಗಳನ್ನು, ವಿದ್ವಾಂಸರನ್ನು ಪೀಠಕ್ಕೆ ಆಯ್ಕೆ ಮಾಡಿಕೊಂಡರೆ ಒಳ್ಳೆಯದು. ನಾನು ಪಿಎಚ್.ಡಿ. ಮುಗಿಸುವ ತನಕ ಕಾಶೀ ಬಿಟ್ಟು ಬರುವಂತಿಲ್ಲ, ದಯವಿಟ್ಟು ಕ್ಷಮಿಸಿ. ನನಗೆ ಅಪ್ಪಣೆ ಕೊಡಿ" ಎಂದರು ಶ್ರೀ ಮರುಳಸಿದ್ಧರು. ಇವರ ಯಾವ ಮಾತೂ ಫಲಕಾರಿಯಾಗಲಿಲ್ಲ. ಇತ್ತ ಸೇರಿದ ಜನಸಂದಣಿ ಕಿವಿಗಡುಚಿಕ್ಕುವಂತೆ ಕರತಾಡನ ಮಾಡುತ್ತಾ ಜಯಘೋಷ ಮಾಡತೊಡಗಿದರು. ಈ ಗದ್ದಲದ ಮಧ್ಯೆಯೇ ಜಗದ್ಗುರು ಮಹಾಸನ್ನಿಧಿಯವರು ಭಾವೀ ಜಗದ್ಗುರುಗಳವರಿಗೆ ರೇಷ್ಮೆಮಡಿ ಹೊದಿಸಿ, ಆಶೀರ್ವಾದ ಮಾಲೆ ಹಾಕಿದರು. ಮುಂದೆ ದಾವಣಗೆರೆ ನಗರದಲ್ಲಿ ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ದಿವ್ಯ ಸನ್ನಿಧಾನದಲ್ಲಿ ಸೇರಿದ ಧರ್ಮಸಭೆಯಲ್ಲಿ ಉಜ್ಜಯಿನಿ ಪೀಠದ ಭಾವೀ ಜಗದ್ಗುರುಗಳವರು ಮಹಾಸಭೆಗೆ ಪರಿಚಯವಾದರು. ಐವರು ಜಗದ್ಗುರುಗಳು ಜಯಘೋಷದ ಮಧ್ಯೆ ಹೃದಯಾರೆ ಹರಸಿದರು. ೫–೧೧–೧೯೯೫ರಂದು ಉಜ್ಜಯಿನೀ ಪೀಠದಲ್ಲಿ ನೂತನ ಜಗದ್ಗುರುಗಳವರ ಪೀಠಾರೋಹಣದ ಕಾರ್ಯಕ್ರಮವು ವೈಭವಪೂರ್ಣವಾಗಿ ಜರುಗಲಿದೆ ಎಂದು ಘೋಷಣೆ ಮಾಡಲಾಯಿತು. ಜನಸಾಗರಕ್ಕೆ ಸಂತೋಷವೋ ಸಂತೋಷ! ಆದರೆ ಮರುಳಸಿದ್ಧರಿಗೆ ಸಂಕೋಚವೋ ಸಂಕೋಚ! "ಕಾಲಾಯ ತಸ್ಮೈ ನಮಃ" ಇದು ಕಾಲದ ಮಹಿಮೆ.

೧೯೯೫ನೆಯ ನವಂಬರ್ ೫ ಉಜ್ಜಯಿನಿ ಪೀಠದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ದಾಖಲಿಸಬೇಕಾದ ಅತ್ಯಂತ ಮಹತ್ವದ ದಿನವಾಯಿತು. ಹಿರಿಯ ಜಗದ್ಗುರು ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರ ಸತ್ಸಂಕಲ್ಪ ಈಡೇರಿದ ದಿನ! ದೇಶದ ವೀರಶೈವ ಧರ್ಮಾಭಿಮಾನಿಗಳ ಸಂತಸ ಮುಗಿಲು ಮುಟ್ಟಿದ ಸುದಿನ!! ಶ್ರೀಮದ್ ರಂಭಾಪುರಿ, ಶ್ರೀಮತ್ ಹಿಮವತ್ ಕೇದಾರ, ಶ್ರೀಮತ್ ಶ್ರೀಶೈಲ, ಹಾಗೂ ಶ್ರೀಮತ್ ಕಾಶೀ ಜಗದ್ಗುರು ಮಹಾಸನ್ನಿಧಿಯವರೆಲ್ಲರೂ ಸಮಾಧಾನದ ಉಸಿರುಬಿಟ್ಟ ಹಸಿರು ದಿನ. ಶಿವಾಚಾರ್ಯ ಗಣದ ಮನ ತಣಿಸಿದ ದಿನ. ಉಜ್ಜಯಿನಿ ಸದ್ಧರ್ಮ ಪೀಠವು ಹಾರ್ದಿಕವಾಗಿ ಶ್ರೀ ಮರುಳಸಿದ್ಧರನ್ನು ಸ್ವಾಗತಿಸಿದ ಸವಿದಿನ. ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಹೆಚ್. ಡಿ. ದೇವೇಗೌಡರು ಮೊದಲ್ಗೊಂಡು ಅನೇಕ ಹಿರಿ–ಕಿರಿಯ ಸಚಿವರು, ಲೋಕಸಭೆ ಹಾಗೂ ವಿಧಾನ ಮಂಡಲದ ಸದಸ್ಯರು, ರಾಜಕೀಯ ಮುಖಂಡರು, ಸರಕಾರದ ಉನ್ನತ ಅಧಿಕಾರಿಗಳು ಸಮ್ಮಿಳಿತರಾಗಿ ಸಂತಸಪಟ್ಟ ಶ್ರೇಷ್ಠ ದಿನ. ಲಕ್ಷಾಂತರ ಜನಸಮೂಹದ ಆಕಾಶಭೇದೀ ಘೋಷಣೆಗಳ ಮಧ್ಯೆ ಸದ್ಧರ್ಮ ಸಿಂಹಾಸನಾರೋಹಣವು "ನ ಭೂತೋ ನ ಭವಿಷ್ಯತಿ" ಎಂಬ ರೀತಿಯಲ್ಲಿ ವಿಜೃಂಭಣೆಯಿಂದ ನೆರವೇರಿತು. ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನದ ೧೧೧ನೆಯ ಜಗದ್ಗುರುಗಳಾಗಿ ಅಧಿಕಾರ ಸ್ವೀಕರಿಸಿದ ಇವರು "ಶ್ರೀ ೧೦೦೮ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು" ಎಂಬ ನಾಮಾಂಕಿತದಿಂದ ಸಮಾನ ಪೀಠಾಚಾರ್ಯರ ಮಧ್ಯೆ ಅತ್ಯಂತ ಕಿರಿಯ ವಯಸ್ಸಿನವರಾದರೂ ಹಿರಿಯ ಸ್ಥಾನವನ್ನಲಂಕರಿಸಿದರು. ಕೆಲವು ನೂತನ ಯೋಜನೆಗಳನ್ನು ಘೋಷಿಸಿ, ಶ್ರೀ ಪೀಠದ ಸರ್ವತೋಮುಖ ಏಳಿಗೆಗೆ ಹಾಗೂ ಸಮಸ್ತ ಮನುಕುಲದ ಒಳಿತಿಗೆ ಆಜೀವಪರ್ಯಂತ ಅವಿಶ್ರಾಂತವಾಗಿ ಶ್ರಮಿಸುವ ಸಂಕಲ್ಪಗೈದ ಸ್ಫೂರ್ತಿಯ ದಿನವದು.

ಗುರುತರ ಹೊಣೆಗಾರಿಕೆ :

ಶ್ರೀಮದುಜ್ಜಯಿನೀ ಸದ್ಧರ್ಮ ಪೀಠವನ್ನು ಅಲಂಕರಿಸಿ ೧೧ ವರ್ಷಗಳು ಕಳೆದವು.

ಹಗಲಿರುಳೂ ಧರ್ಮಪ್ರಚಾರ, ಪ್ರಸಾರ, ಉತ್ಸವ, ಸಭೆ, ಸಮ್ಮೇಳನ, ಪೂಜಾನುಷ್ಠಾನಗಳಲ್ಲಿ ಬಿಡುವಿಲ್ಲದೆ ದುಡಿಯುತ್ತಿದ್ದಾರೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶದ ಗಡಿಗಳನ್ನು ಮೀರಿ ದೇಶವ್ಯಾಪೀ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಹೆಮ್ಮೆ ಇವರದಾಗಿದೆ. ಹಾಗೆಂದ ಮಾತ್ರಕ್ಕೆ ಸದ್ಧರ್ಮ ಪೀಠವನ್ನು ಅಲಕ್ಷಿಸಿದ್ದಾರೆಂದು ಅರ್ಥವಲ್ಲ; "ನಿತ್ಯಾನ್ನ ದಾಸೋಹ"ವು ಸನ್ನಿಧಿಯವರ ಚೊಚ್ಚಲ ಕೊಡುಗೆ. ದಿನನಿತ್ಯವೂ ಯಾತ್ರಾರ್ಥಿಗಳಿಗೆ, ವಿದ್ಯಾರ್ಥಿಗಳಿಗೆ ಇಲ್ಲಿ ಪ್ರಸಾದ ವಿತರಣೆ ನಡೆಯುತ್ತಿದೆ. ಇವರು ಶ್ರೇಷ್ಠ ವಿದ್ವಾಂಸರೂ ಆಗಿರುವುದರಿಂದ ವಿದ್ಯಾಕ್ಷೇತ್ರಗಳತ್ತ ಹೆಚ್ಚು ಗಮನಹರಿಸುತ್ತಿದ್ದಾರೆ. ಜ್ಞಾನಗುರು ವಿದ್ಯಾಪೀಠದ ಅಡಿಯಲ್ಲಿಯೇ ಅನೇಕ ವಿದ್ಯಾಸಂಸ್ಥೆಗಳಿಗೆ ಇದ್ದ ಕಟ್ಟಡ, ಪೀಠೋಪಕರಣ, ಪಾಠೋಪಕರಣ, ಆಟೋಪಕರಣಗಳ ಕೊರತೆಯನ್ನು ನೀಗಿಸಿದ್ದಾರೆ. ಹರಪನಹಳ್ಳಿಯ " ಶ್ರೀ ಉಜ್ಜಯಿನೀ ಜಗದ್ಗುರು ಮರುಳಾರಾಧ್ಯ ಪದವಿಪೂರ್ವ ಮಹಾವಿದ್ಯಾಲಯ"ವು ಕಳೆದ ೧೯೯೯ನೆಯ ಇಸವಿಯಲ್ಲಿ ತನ್ನ ಬೆಳ್ಳಿಹಬ್ಬವನ್ನು ಆಚರಿಸಿಕೊಂಡಿತು. ಆ ವಿದ್ಯಾಲಯದ ಅನೇಕ ಕಟ್ಟಡಗಳ ಸಂಕೀರ್ಣವನ್ನು ನೋಡಿದಾಗ ಅಭಿಮಾನವೆನಿಸುತ್ತದೆ. ವರ್ಷದಿಂದ ವರ್ಷಕ್ಕೆ ಬೆಳೆಯುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಎಲ್ಲ ಸೌಕರ್ಯಗಳನ್ನೂ ಒದಗಿಸಲಾಗಿದೆ. "ಸದ್ಧರ್ಮ ಪ್ರಭಾ" ತ್ರೈಮಾಸಿಕವು ಹಿರಿಯ ಜಗದ್ಗುರು ಶ್ರೀ ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರು ಹುಟ್ಟುಹಾಕಿದ ಧಾರ್ಮಿಕ ಪತ್ರಿಕೆ. ಅದು ನಿಂತೇ ಹೋಗಿತ್ತು. ಅದಕ್ಕೆ ಮರುಜೀವ ಕೊಟ್ಟು ೧೯೯೯ರಿಂದ ಅದು ಸದ್ಧರ್ಮ ಪ್ರಚಾರದಲ್ಲಿ ಪ್ರಸಾರದಲ್ಲಿ ಮುನ್ನಡೆಯುವಂತೆ ಮಾಡಿದ್ದಾರೆ. ಇತ್ತೀಚೆಗೆ ಶ್ರೀ ಪೀಠದಲ್ಲಿ ಭವ್ಯ ಸುಂದರ-ಬಂಧುರ ದರ್ಶನಮಂದಿರ ನಿರ್ಮಾಣಗೊಂಡಿದೆ. ಸಮುದಾಯ ಭವನ ನಿರ್ಮಾಣ ಹಂತದಲ್ಲಿದೆ. 'ಯಾತ್ರಿನಿವಾಸ' ಎಂಬ ಹೆಸರಿನಲ್ಲಿ ಆಧುನಿಕ ಸೌಲಭ್ಯವುಳ್ಳ ವಸತಿ ಗೃಹವು ಅಂದಾಜು ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ನಿರ್ಮಾಣವಾಗುತ್ತಲಿದೆ. ಲಿಂಗೈಕ್ಯ ಜಗದ್ಗುರು ಸಿದ್ಧೇಶ್ವರ ಭಗವತ್ಪಾದರ ಕರ್ತೃಗದ್ದುಗೆ ಮಂದಿರ ನಿರ್ಮಾಣಗೊಂಡಿದ್ದು, ಅದನ್ನು ಇನ್ನೂ ವಿಸ್ತರಿಸುವ ಯೋಜನೆ ಇದೆ.

ಜ್ಞಾನಗುರು ವಿದ್ಯಾಪೀಠದಡಿಯಲ್ಲಿ ಪೂರ್ವಾಚಾರ್ಯರಾದ ಶ್ರೀ ಸಿದ್ಧೇಶ್ವರ ಜಗದ್ಗುರುಗಳವರು ಸ್ಥಾಪಿಸಿದ ಕೆಲವು ವಿದ್ಯಾಸಂಸ್ಥೆಗಳನ್ನು ಸುವ್ಯವಸ್ಥಿತವಾಗಿ ಮುನ್ನಡೆಸುವುದರೊಂದಿಗೆ ಇತ್ತೀಚೆಗೆ ಶ್ರೀ ಮರುಳಸಿದ್ಧ ಜಗದ್ಗುರುಗಳವರು ಹರಪನಹಳ್ಳಿಯಲ್ಲಿ ಮಹಿಳಾ ಪದವಿ ಮಹಾವಿದ್ಯಾಲಯ ( ಇದರಲ್ಲಿಯೇ ಬಿ.ಬಿ.ಎಂ. ವಿಭಾಗವನ್ನು ತೆರೆಯಲಾಗಿದೆ.), ಕೊಟ್ಟೂರಿನಲ್ಲಿ ಕೈಗಾರಿಕಾ ತರಬೇತಿ ಸಂಸ್ಥೆ ಮುಂತಾದವುಗಳನ್ನು ತೆರೆಯುವುದರೊಂದಿಗೆ ವೃತ್ತಿಮೂಲ ಸಂಸ್ಥೆಗಳತ್ತ ಗಮನಹರಿಸಿದ್ದಾರೆ. ಜನಕ್ಕೆ ಉಪಯುಕ್ತವಾಗುವ ಇಂತಹ ಕೆಲವು ಸಂಸ್ಥೆಗಳನ್ನು ತೆರೆಯುವ ಕನಸನ್ನು ಜಗದ್ಗುರುಗಳವರು ಕಾಣುತ್ತಿದ್ದಾರೆ. ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆಯ ಅಧ್ಯಕ್ಷಪದವಿಯ ಹೊಣೆಯೂ ಇತ್ತೀಚೆಗೆ ಇವರ ಹೆಗಲಿಗೇರಿದೆ.

ಇದೀಗ ೨೦೦೭ನೆಯ ಫೆಬ್ರುವರಿ ೩,೪,ಮತ್ತು ೫ ರಂದು ಶ್ರೀಮದ್ ಉಜ್ಜಯಿನಿ ಸದ್ಧರ್ಮ ಪೀಠದಲ್ಲಿ ಬಹು ಅದ್ದೂರಿಯ ಭಕ್ತಿಪೂರಿತ ಕಾರ್ಯಕ್ರಮವೊಂದು ಜರುಗಲಿದೆ. ಶ್ರೀ ಮರುಳಸಿದ್ಧ ಜಗದ್ಗುರುಗಳವರು ಸದ್ಧರ್ಮ ಪೀಠಾರೋಹಣ ಮಾಡಿ ಹನ್ನೊಂದು ವರ್ಷ ಪೂರೈಸಿ, ಹನ್ನೆರಡರಲ್ಲಿ ಪಾದಾರ್ಪಣೆ ಮಾಡಿದ್ದಾರೆ. ಪೀಠಾಭಿಮಾನಿಗಳು ಹಾಗೂ ಸದ್ಭಕ್ತ ಸಮುದಾಯವು ಭಕ್ತಿ- ಗೌರವದಿಂದ ಜಗದ್ಗುರುಗಳವರ ಪೀಠಾರೋಹಣ ದ್ವಾದಶ ವರ್ಧಂತಿ ಮಹೋತ್ಸವವನ್ನು ಆಚರಿಸಲು ನಿರ್ಧರಿಸಿದ್ದಾರೆ. ಸಮಾನ ಪೀಠಾಚಾರ್ಯರಾದ ಶ್ರೀಮದ್ ರಂಭಾಪುರಿ ಜಗದ್ಗುರು ವೀರಸೋಮೇಶ್ವರ ರಾಜದೇಶೀಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀ ಮತ್ ಹಿಮವತ್ ಕೇದಾರ ಜಗದ್ಗುರು ರಾವಲ್ ಶ್ರೀ ಭೀಮಶಂಕರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀಮದ್ ಗಿರಿರಾಜ ಸೂರ್ಯ ಸಿಂಹಾಸನಾಧೀಶ್ವರ ಶ್ರೀಶೈಲ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಮತ್ತು ಶ್ರೀಮತ್ ಕಾಶಿ ಜ್ಞಾನ ಸಿಂಹಾಸನಾಧೀಶ್ವರ ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ದಿವ್ಯಸಾನ್ನಿಧ್ಯ ದಯಪಾಲಿಸಲಿದ್ದಾರೆ. ಕರ್ನಾಟಕ ರಾಜ್ಯ ಹಾಗೂ ಹೊರನಾಡುಗಳಿಂದ ಅನೇಕ ಶಿವಾಚಾರ್ಯರು, ಶಿವಯೋಗಿಗಳು ಸಮ್ಮಿಲಿತರಾಗಿ ಸದ್ಧರ್ಮ ಪೀಠಾಧೀಶ್ವರರಿಗೆ ಗೌರವ ಸಲ್ಲಿಸಲಿದ್ದಾರೆ. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೇರಲಿರುವ ಭಕ್ತ ಸಂದೋಹವು ಕಣ್ಮನ ತಣಿಸುವ, ಧರ್ಮ ಜಾಗೃತಿ ಉಂಟು ಮಾಡುವ ಈ ಬೃಹತ್ ಸಮ್ಮೇಳನದಲ್ಲಿ ಪಾಲ್ಗೊಳ್ಳಲಿದೆ. ಮಂತ್ರಿ ಮಾನ್ಯರು, ಉದ್ದಾಮ ವಿದ್ವಾಂಸರು, ಸಾಹಿತಿ – ಕಲಾವಿದರು ಹೀಗೆ ವಿವಿಧ ವರ್ಗಗಳ ಮಹಾಜನತೆಯು ಸಂದರ್ಭೋಚಿತವಾಗಿ ಸೇವೆ ಸಲ್ಲಿಸಲಿದ್ದಾರೆ. ಈ ಪ್ರಸಂಗದಲ್ಲಿ ಕೆಲವು ಉತ್ತಮ ಗ್ರಂಥಗಳು ಪ್ರಕಟವಾಗಲಿವೆ. 'ಸದ್ಧರ್ಮ ವಾರಿಧಿ' ನಾಮಾಂಕಿತ ಗೌರವ ಗ್ರಂಥವು ಸನ್ನಿಧಿಗೆ ಸಮರ್ಪಿತವಾಗಲಿದೆ. ಸಮಾರಂಭದ ಭವ್ಯ – ದಿವ್ಯ ಸ್ಮರಣೆಯ ಕಿರಣಗಳನ್ನು ಬಿಂಬಿಸುವ 'ಮಳೆಮಲ್ಲಿಗೆ' ಸಂಸ್ಮರಣ ಗ್ರಂಥವು ಲೋಕಾರ್ಪಿತವಾಗಲಿದೆ. ಅಲ್ಲದೆ ಶ್ರೀ ಪೀಠದ ಆವರಣದಲ್ಲಿ ಹಾಗೂ ಉಜ್ಜಯಿನಿ ಗ್ರಾಮದಲ್ಲಿ ಪೀಠಾರೋಹಣದ ದ್ವಾದಶ ವರ್ಧಂತಿಯ ಸ್ಮಾರಕವಾಗಿ ಕೆಲವು ಕಟ್ಟಡಗಳು ನಿರ್ಮಾಣಗೊಳ್ಳುತ್ತಲಿವೆ. ಇಂತಹ ಎಲ್ಲ ಕಾರ್ಯಗಳು ಶ್ರೀ ಪೀಠದ ಅಭಿವೃದ್ಧಿಗಾಗಿ ನೆರವೇರುತ್ತಲಿರುವುದು ಸಂತಸದ ಸಂಗತಿಯಾಗಿದೆ, ಸದಭಿಮಾನದ ಸಮಾಚಾರವೆನಿಸಿದೆ.

ಭೌತಿಕ, ಬೌದ್ಧಿಕ, ಆಧ್ಯಾತ್ಮಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗಳತ್ತ ಗಮನಹರಿಸಿರುವ ಪ್ರಸ್ತುತ ಜಗದ್ಗುರುಗಳವರು ಜನಕಲ್ಯಾಣವನ್ನು ಕಡೆಗಣಿಸಿಲ್ಲ. ಪೀಠಾರೋಹಣದ ದ್ವಾದಶ ವರ್ಧಂತಿ ಮಹೋತ್ಸವದ ಸಂದರ್ಭದಲ್ಲಿ ಬಡವರಿಗೆ, ದೀನದಲಿತರಿಗೆ ಅತ್ಯಂತ ಉಪಕಾರಿಯಾದ ಸಾಮೂಹಿಕ ಧರ್ಮಾರ್ಥ ವಿವಾಹ ಸಮಾರಂಭವನ್ನು ಏರ್ಪಡಿಸಿದ್ದಾರೆ. ಇದರೊಂದಿಗೆ ೧೦೦೮ ಮುತ್ತೈದೆಯರಿಗೆ ಉಡಿ ತುಂಬಿ ಸೌಭಾಗ್ಯವನ್ನು ಅನುಗ್ರಹಿಸುವ ಕಾರ್ಯಕ್ರಮವು ನಡೆಯಲಿದೆ. ಒಳಹೊರಗಿನ ಕತ್ತಲೆಯನ್ನು ಕಳೆಯುವ ದ್ಯೋತಕವಾಗಿ ಲಕ್ಷದೀಪಗಳನ್ನು ಬೆಳಗಿಸುವ ಪರಂಜ್ಯೋತಿ ಕಾರ್ಯಕ್ರಮವು ನಡೆಯುತ್ತಲಿದೆ. ಹೀಗೆ ವೈವಿಧ್ಯಪೂರ್ಣ ಕಾರ್ಯಕ್ರಮಗಳು ಜರುಗುವ ಮೂಲಕ ಪೀಠಾರೋಹಣದ ದ್ವಾದಶ ವರ್ಧಂತಿ ಮಹೋತ್ಸವವು ಜನಮನವನ್ನು ತಣಿಸಲಿದೆ! ಸದ್ಧರ್ಮದ ಉಣಿಸನ್ನು ಉಣಿಸಲಿದೆ! ಅದನ್ನು ಅನುಭವಿಸಿಯೇ ಆನಂದಿಸಬೇಕು!

ಕಿರಿವಯದಲ್ಲಿಯೇ ಹಿರಿಯ ಹೊಣೆ ಹೊತ್ತ ಮರುಳಸಿದ್ಧ ಜಗದ್ಗುರುಗಳವರಿಗೆ ಪೂರ್ವಾಚಾರ್ಯರು ಆಯುರಾರೋಗ್ಯ ಭಾಗ್ಯಾದಿಗಳನ್ನು ಕರುಣಿಸುವುದರೊಂದಿಗೆ ಮಾನವ ಕುಲದ ಕಲ್ಯಾಣ ಕಾರ್ಯ ಮುಂದುವರೆಸುವ ಹುರುಪು – ಹುಮ್ಮಸ್ಸು ನೀಡಲೆಂದು ಭಕ್ತಿಯಿಂದ ಪ್ರಾರ್ಥಿಸೋಣ.

ಶ್ರೀ ಉಜ್ಜಯಿನಿ ಸದ್ಧರ್ಮ ಪೀಠದ ಜಗದ್ಗುರು ಪರಂಪರೆ

ಶ್ರೀ ಜಗದ್ಗುರು ದ್ವ್ಯಕ್ಷರ ಶಿವಾಚಾರ್ಯ ಭಗವತ್ಪಾದರು (ಕೃತಯುಗದ ಆರಂಭ)
ಶ್ರೀ ಜಗದ್ಗುರು ದ್ವಿವಕ್ತ್ರ ಶಿವಾಚಾರ್ಯ ಭಗವತ್ಪಾದರು (ತ್ರೇತಾಯುಗದ ಆರಂಭ)
ಶ್ರೀ ಜಗದ್ಗುರು ದಾರುಕಾಚಾರ್ಯ ಭಗವತ್ಪಾದರು (ದ್ವಾಪರಯುಗದ ಆರಂಭ)
೧. ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯ ಭಗವತ್ಪಾದರು (ಕಲಿಯುಗದ ಆರಂಭ )
೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೩. ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರು
೪. ಶ್ರೀ ಜಗದ್ಗುರು ಗುರುನಾಥ ಶಿವಾಚಾರ್ಯರು
೫. ಶ್ರೀ ಜಗದ್ಗುರು ಶಿವಯೋಗೀಂದ್ರ ಶಿವಾಚಾರ್ಯರು
೬. ಶ್ರೀ ಜಗದ್ಗುರು ತ್ರ್ಯಂಬಕ ಶಿವಾಚಾರ್ಯರು
೭. ಶ್ರೀ ಜಗದ್ಗುರು ಶಿವಾನಂದ ಶಿವಾಚಾರ್ಯರು
೮. ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರು
೯. ಶ್ರೀ ಜಗದ್ಗುರು ಅಮಿತಾನಂದ ಶಿವಾಚಾರ್ಯರು
೧೦. ಶ್ರೀ ಜಗದ್ಗುರು ನೀಲಗ್ರೀವ ಶಿವಾಚಾರ್ಯರು
೧೧. ಶ್ರೀ ಜಗದ್ಗುರು ನಂದೀಶ್ವರ ಶಿವಾಚಾರ್ಯರು
೧೨. ಶ್ರೀ ಜಗದ್ಗುರು ಗುರುರಾಜ ಶಿವಾಚಾರ್ಯರು
೧೩. ಶ್ರೀ ಜಗದ್ಗುರು ಮಹಾದೇವ ಶಿವಾಚಾರ್ಯರು
೧೪. ಶ್ರೀ ಜಗದ್ಗುರು ಮಯಾಂತ ಶಿವಾಚಾರ್ಯರು
೧೫. ಶ್ರೀ ಜಗದ್ಗುರು ಗುರುಶಾಂತ ಶಿವಾಚಾರ್ಯರು
೧೬. ಶ್ರೀ ಜಗದ್ಗುರು ವೃಷಭಧ್ವಜ ಶಿವಾಚಾರ್ಯರು
೧೭. ಶ್ರೀ ಜಗದ್ಗುರು ವೀರವೃಷಭೇಂದ್ರ ಶಿವಾಚಾರ್ಯರು
೧೮. ಶ್ರೀ ಜಗದ್ಗುರು ದ್ವಿತೀಯ ಮಲ್ಲಿಕಾರ್ಜುನ ಶಿವಾಚಾರ್ಯರು
೧೯. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೨೦. ಶ್ರೀ ಜಗದ್ಗುರು ದ್ವಿತೀಯ ಸಿದ್ಧೇಶ್ವರ ಶಿವಾಚಾರ್ಯರು
೨೧. ಶ್ರೀ ಜಗದ್ಗುರು ಲಿಂಗಾನಂದ ಶಿವಾಚಾರ್ಯರು
೨೨. ಶ್ರೀ ಜಗದ್ಗುರು ಸೋಮೇಶ್ವರ ಶಿವಾಚಾರ್ಯರು
೨೩. ಶ್ರೀ ಜಗದ್ಗುರು ಮುಕ್ತಿನಾಥ ಶಿವಾಚಾರ್ಯರು
೨೪. ಶ್ರೀ ಜಗದ್ಗುರು ವಾಮದೇವ ಶಿವಾಚಾರ್ಯರು
೨೫. ಶ್ರೀ ಜಗದ್ಗುರು ಜಗದೀಶ್ವರ ಶಿವಾಚಾರ್ಯರು
೨೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೨೭. ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯರು
೨೮. ಶ್ರೀ ಜಗದ್ಗುರು ಮಾಹೇಶ್ವರ ಶಿವಾಚಾರ್ಯರು
೨೯. ಶ್ರೀ ಜಗದ್ಗುರು ಅಘೋರ ಶಿವಾಚಾರ್ಯರು
೩೦. ಶ್ರೀ ಜಗದ್ಗುರು ಚೆನ್ನವೀರ ಶಿವಾಚಾರ್ಯರು
೩೧. ಶ್ರೀ ಜಗದ್ಗುರು ಜಟಾಸಿದ್ಧ ಶಿವಾಚಾರ್ಯರು
೩೨. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೩೩. ಶ್ರೀ ಜಗದ್ಗುರು ಸಿದ್ಧವೀರ ಶಿವಾಚಾರ್ಯರು
೩೪. ಶ್ರೀ ಜಗದ್ಗುರು ರುದ್ರೇಶ್ವರ ಶಿವಾಚಾರ್ಯರು
೩೫. ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯರು
೩೬. ಶ್ರೀ ಜಗದ್ಗುರು ವೈ॥ ನಂದೀಶ್ವರ ಶಿವಾಚಾರ್ಯರು
೩೭. ಶ್ರೀ ಜಗದ್ಗುರು ಗಂಗಾಧರ ಶಿವಾಚಾರ್ಯರು
೩೮. ಶ್ರೀ ಜಗದ್ಗುರು ಮಹಾಲಿಂಗ ಶಿವಾಚಾರ್ಯರು
೩೯. ಶ್ರೀ ಜಗದ್ಗುರು ಪಂಚಾನನ ಶಿವಾಚಾರ್ಯರು
೪೦. ಶ್ರೀ ಜಗದ್ಗುರು ಬಿಲ್ವದಳಭೂಷಣ ಶಿವಾಚಾರ್ಯರು
೪೧. ಶ್ರೀ ಜಗದ್ಗುರು ಮಾರಮರ್ದನ ಶಿವಾಚಾರ್ಯರು
೪೨. ಶ್ರೀ ಜಗದ್ಗುರು ನಾಗಭೂಷಣ ಶಿವಾಚಾರ್ಯರು
೪೩. ಶ್ರೀ ಜಗದ್ಗುರು ಶ್ಯಾಮಕಂದರ ಶಿವಾಚಾರ್ಯರು
೪೪. ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯರು
೪೫. ಶ್ರೀ ಜಗದ್ಗುರು ಗುರುಸಿದ್ಧ ಶಿವಾಚಾರ್ಯರು
೪೬. ಶ್ರೀ ಜಗದ್ಗುರು ಭವಹರ ಶಿವಾಚಾರ್ಯರು
೪೭. ಶ್ರೀ ಜಗದ್ಗುರು ಚಂಡೀಶ್ವರ ಶಿವಾಚಾರ್ಯರು
೪೮. ಶ್ರೀ ಜಗದ್ಗುರು ಅಮೃತೇಶ್ವರ ಶಿವಾಚಾರ್ಯರು
೪೯. ಶ್ರೀ ಜಗದ್ಗುರು ಸುಜ್ಞಾನಶೇಖರ ಶಿವಾಚಾರ್ಯರು
೫೦. ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು
೫೧. ಶ್ರೀ ಜಗದ್ಗುರು ಶೇಷಭೂಷಣ ಶಿವಾಚಾರ್ಯರು
೫೨. ಶ್ರೀ ಜಗದ್ಗುರು ಶಂಕರಾನಂದ ಶಿವಾಚಾರ್ಯರು
೫೩. ಶ್ರೀ ಜಗದ್ಗುರು ಮಹಾಮಲ್ಲಿಕಾರ್ಜುನ ಶಿವಾಚಾರ್ಯರು
೫೪. ಶ್ರೀ ಜಗದ್ಗುರು ಶಂಭುಲಿಂಗ ಶಿವಾಚಾರ್ಯರು
೫೫. ಶ್ರೀ ಜಗದ್ಗುರು ಶಿವಯೋಗ ಪ್ರಭಾಕರ ಶಿವಾಚಾರ್ಯರು
೫೬. ಶ್ರೀ ಜಗದ್ಗುರು ಚಿನ್ಮಹೋದಧಿ ಶಿವಾಚಾರ್ಯರು
೫೭. ಶ್ರೀ ಜಗದ್ಗುರು ಶಿವಜ್ಞಾನ ಸಂಜೀವಿನ ಶಿವಾಚಾರ್ಯರು
೫೮. ಶ್ರೀ ಜಗದ್ಗುರು ಗಣೇಂದ್ರಮಂದಾರ ಶಿವಾಚಾರ್ಯರು
೫೯. ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರು
೬೦. ಶ್ರೀ ಜಗದ್ಗುರು ಪರಸಿದ್ಧೇಶ್ವರ ಶಿವಾಚಾರ್ಯರು
೬೧. ಶ್ರೀ ಜಗದ್ಗುರು ಮಹಾಂತದೇವ ಶಿವಾಚಾರ್ಯರು

೬೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೬೩. ಶ್ರೀ ಜಗದ್ಗುರು ವೃಷ್ಟಿಶಂಕರ ಶಿವಾಚಾರ್ಯರು
೬೪. ಶ್ರೀ ಜಗದ್ಗುರು ಶಂಭುಲಿಂಗ ಶಿವಾಚಾರ್ಯರು
೬೫. ಶ್ರೀ ಜಗದ್ಗುರು ಮದನಾರಿ ಶಿವಾಚಾರ್ಯರು
೬೬. ಶ್ರೀ ಜಗದ್ಗುರು ಮಾಯಾಕೋಲಾಹಲ ಶಿವಾಚಾರ್ಯರು
೬೭. ಶ್ರೀ ಜಗದ್ಗುರು ಶಿವಲೀಲ ಶಿವಾಚಾರ್ಯರು
೬೮. ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯರು
೬೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೭೦. ಶ್ರೀ ಜಗದ್ಗುರು ಮುಕ್ತಿನಾಥ ಶಿವಾಚಾರ್ಯರು
೭೧. ಶ್ರೀ ಜಗದ್ಗುರು ಮಹಾದೇವ ಶಿವಾಚಾರ್ಯರು
೭೨. ಶ್ರೀ ಜಗದ್ಗುರು ಭರ್ಗೋದೇವ ಶಿವಾಚಾರ್ಯರು
೭೩. ಶ್ರೀ ಜಗದ್ಗುರು ಬಾಲಸಿದ್ಧೇಶ್ವರ ಶಿವಾಚಾರ್ಯರು
೭೪. ಶ್ರೀ ಜಗದ್ಗುರು ಚೆನ್ನವೃಷಭ ಶಿವಾಚಾರ್ಯರು
೭೫. ಶ್ರೀ ಜಗದ್ಗುರು ವೃದ್ಧವೃಷಭೇಂದ್ರ ಶಿವಾಚಾರ್ಯರು
೭೬. ಶ್ರೀ ಜಗದ್ಗುರು ಚೆನ್ನಮಲ್ಲಿಕಾರ್ಜುನ ಶಿವಾಚಾರ್ಯರು
೭೭. ಶ್ರೀ ಜಗದ್ಗುರು ಮುಕ್ತಿಮಲ್ಲಿಕಾರ್ಜುನ ಶಿವಾಚಾರ್ಯರು
೭೮. ಶ್ರೀ ಜಗದ್ಗುರು ಸಿದ್ಧಮಲ್ಲಿಕಾರ್ಜುನ ಶಿವಾಚಾರ್ಯರು
೭೯. ಶ್ರೀ ಜಗದ್ಗುರು ಏಕೋದೇವ ಶಿವಾಚಾರ್ಯರು
೮೦. ಶ್ರೀ ಜಗದ್ಗುರು ಆಚಾರ್ಯಭಾಸ್ಕರ ಶಿವಾಚಾರ್ಯರು
೮೧. ಶ್ರೀ ಜಗದ್ಗುರು ಮೋಕ್ಷೇಶ್ವರ ಶಿವಾಚಾರ್ಯರು
೮೨. ಶ್ರೀ ಜಗದ್ಗುರು ಸಿದ್ಧವೀರೇಶ ಶಿವಾಚಾರ್ಯರು
೮೩. ಶ್ರೀ ಜಗದ್ಗುರು ಭದ್ರೇಶ್ವರ ಶಿವಾಚಾರ್ಯರು
೮೪. ಶ್ರೀ ಜಗದ್ಗುರು ಅಮಿತಾನಂದ ಶಿವಾಚಾರ್ಯರು
೮೫. ಶ್ರೀ ಜಗದ್ಗುರು ಷಡಕ್ಷರ ಶಿವಾಚಾರ್ಯರು
೮೬. ಶ್ರೀ ಜಗದ್ಗುರು ಭಕ್ತಿವರ್ಧನ ಶಿವಾಚಾರ್ಯರು
೮೭. ಶ್ರೀ ಜಗದ್ಗುರು ಪಾಶಹರ ಶಿವಾಚಾರ್ಯರು
೮೮. ಶ್ರೀ ಜಗದ್ಗುರು ಮಹಿಮಾಕರ ಶಿವಾಚಾರ್ಯರು
೮೯. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೯೦. ಶ್ರೀ ಜಗದ್ಗುರು ನಯನತ್ರಯ ಶಿವಾಚಾರ್ಯರು
೯೧. ಶ್ರೀ ಜಗದ್ಗುರು ವಿರೂಪಾಕ್ಷ ಶಿವಾಚಾರ್ಯರು
೯೨. ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರು
೯೩. ಶ್ರೀ ಜಗದ್ಗುರು ಮಹಾಂತಮಲ್ಲಿಕಾರ್ಜುನ ಶಿವಾಚಾರ್ಯರು
೯೪. ಶ್ರೀ ಜಗದ್ಗುರು ವೃಷ್ಟಿಮಲ್ಲಿಕಾರ್ಜುನ ಶಿವಾಚಾರ್ಯರು
೯೫. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೯೬. ಶ್ರೀ ಜಗದ್ಗುರು ಬೃಹಚ್ಚೆನ್ನವೀರ ಶಿವಾಚಾರ್ಯರು
೯೭. ಶ್ರೀ ಜಗದ್ಗುರು ಪರಚೆನ್ನವೀರ ಶಿವಾಚಾರ್ಯರು
೯೮. ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು
೯೯. ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರು
೧೦೦. ಶ್ರೀ ಜಗದ್ಗುರು ಜಟಾಗುರುಸಿದ್ಧ ಶಿವಾಚಾರ್ಯರು
೧೦೧. ಶ್ರೀ ಜಗದ್ಗುರು ಚೆನ್ನವೃಷಭ ಶಿವಾಚಾರ್ಯರು
೧೦೨. ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು
೧೦೩. ಶ್ರೀ ಜಗದ್ಗುರು ಚೆನ್ನವೀರ ಶಿವಾಚಾರ್ಯರು
೧೦೪. ಶ್ರೀ ಜಗದ್ಗುರು ಚೆನ್ನವೃಷಭ ಶಿವಾಚಾರ್ಯರು
೧೦೫. ಶ್ರೀ ಜಗದ್ಗುರು ಗುರುಸಿದ್ಧ ಶಿವಾಚಾರ್ಯರು
೧೦೬. ಶ್ರೀ ಜಗದ್ಗುರು ಮರುಳಸಿದ್ಧ ಶಿವಾಚಾರ್ಯರು
೧೦೭. ಶ್ರೀ ಜಗದ್ಗುರು ಚೆನ್ನವೃಷಭ ಶಿವಾಚಾರ್ಯರು
೧೦೮. ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು
೧೦೯. ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರು
೧೧೦. ಶ್ರೀ ಜಗದ್ಗುರು ಮರುಳಾರಾಧ್ಯ ಶಿವಾಚಾರ್ಯರು
೧೧೧. ಶ್ರೀ ಜಗದ್ಗುರು ಮರುಳಸಿದ್ಧ ರಾಜದೇಶಿಕೇಂದ್ರ ಶಿವಾಚಾರ್ಯರು

ವಿ.ಸೂಚನೆ ಃ ಈ ಹೆಸರುಗಳನ್ನು ಹಿರೇಹಡಗಲಿ ಪುರಾಣಿಕ ಮಠದ ವೇ. ಪಂ. ವಿರೂಪಾಕ್ಷಶಾಸ್ತ್ರಗಳಿಂದ ವಿರಚಿತವಾದ ಉಜ್ಜಯಿನಿ ಜಗದ್ಗುರು ಶ್ರೀಸಿದ್ಧಲಿಂಗೇಶ ವಿಜಯ (೧೯೪೪ನೆಯ ಇಸ್ವಿ) ಎಂಬ ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

## ಶ್ರೀ ಕೇದಾರ ಪೀಠದ ಪರಂಪರೆ

ಭಾರತದ ಉತ್ತರ ದಿಕ್ಕಿನಲ್ಲಿರುವ ಹಿಮಾಲಯ ಪರ್ವತವು ದೇಶದ ಸುರಕ್ಷತೆಗಾಗಿ ನೈಸರ್ಗಿಕವಾದ ಕೋಟೆಯ ಗೋಡೆಯಂತೆ ಕಂಗೊಳಿಸುತ್ತದೆ. ಅನಾದಿಕಾಲದಿಂದ ಅನೇಕ ಋಷಿ–ಮುನಿಗಳು ಅಲ್ಲಿ ವಾಸಿಸಿ ತಪಸ್ಸನ್ನಾಚರಿಸಿರುವುದರಿಂದ ಅದೊಂದು ಪವಿತ್ರ ಸ್ಥಳವಾಗಿ ಪರಿವರ್ತನೆಗೊಂಡು ಯಾತ್ರಾರ್ಥಿಗಳಿಗೆ ಶ್ರದ್ಧಾಭಕ್ತಿಯ ಸ್ಥಾನವಾಗಿದೆ.

ಈ ಹಿಮಾಲಯದಲ್ಲಿ ಓಖೀಮಠ, ಕೇದಾರನಾಥ, ಗುಪ್ತಕಾಶಿ, ಮಧ್ಯಮಾಹೇಶ್ವರ, ಕಾಳೀಮಠ, ಕಾಳೀಶಿಲಾ, ತ್ರಿಯುಗಿ ನಾರಾಯಣ, ಗೌರೀಕುಂಡ, ಗೋಪೇಶ್ವರ, ತುಂಗನಾಥ, ಕಲ್ಪೇಶ್ವರ, ಸೋನಪ್ರಯಾಗ, ರುದ್ರಪ್ರಯಾಗ, ಬದ್ರೀನಾಥ–ಮುಂತಾದ ಪವಿತ್ರ ಕ್ಷೇತ್ರಗಳು ದರ್ಶನೀಯಗಳಾಗಿವೆ.

### ಶ್ರೀ ಜಗದ್ಗುರು ಏಕೋರಾಮಾರಾಧ್ಯರು ಃ

ಶಿವನ ಅಘೋರಮುಖ ಸಂಜಾತರಾದ ಶ್ರೀ ಜಗದ್ಗುರು ಏಕೋರಾಮಾರಾಧ್ಯ ಶಿವಾಚಾರ್ಯರು ಶಿವನ ಆದೇಶದಂತೆ ದ್ರಾಕ್ಷಾರಾಮ ಕ್ಷೇತ್ರದ ಶ್ರೀ ರಾಮನಾಥ (ಭೀಮನಾಥ) ಶಿವಲಿಂಗದಿಂದ ಅವತರಿಸಿ ವೀರಶೈವ ಮತವನ್ನು ಸಂಸ್ಥಾಪಿಸಿರುತ್ತಾರೆ. ಕೃತಯುಗದಲ್ಲಿ

ತ್ರ್ಯಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ತ್ರಿವಕ್ತ್ರಶಿವಾಚಾರ್ಯ, ದ್ವಾಪರಯುಗದಲ್ಲಿ ಘಂಟಾಕರ್ಣ ಶಿವಾಚಾರ್ಯ ಮತ್ತು ಕಲಿಯುಗದಲ್ಲಿ ಏಕೋರಾಮಾರಾಧ್ಯ ಶಿವಾಚಾರ್ಯರೆಂಬ ನಾಮಗಳು ಇವರಿಗೆ ಯುಗಭೇದದಿಂದ ಪ್ರಸಿದ್ಧವಾಗಿವೆ.

ದ್ರಾಕ್ಷಾರಾಮೇ ರಾಮನಾಥಲಿಂಗಾದ್ಯುಗಚತುಷ್ಟಯೇ ।
ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ॥

ಸ್ವಾಯಂಭುವಾಗಮದ ಈ ಪ್ರಮಾಣಾನುಸಾರವಾಗಿ ದ್ರಾಕ್ಷಾರಾಮ ಕ್ಷೇತ್ರದ ಶ್ರೀರಾಮನಾಥ (ಭೀಮನಾಥ) ಶಿವಲಿಂಗದಿಂದ ಪ್ರಾದುರ್ಭವಿಸಿದ ಶ್ರೀ ಜಗದ್ಗುರು ಏಕೋರಾಮಾರಾಧ್ಯ ಭಗವತ್ಪಾದರು ಧರ್ಮಪ್ರಚಾರಕ್ಕಾಗಿ ಹಿಮಾಲಯದಲ್ಲಿ ಒಂದು ಪೀಠವನ್ನು ಸಂಸ್ಥಾಪಿಸಿದರು. ಇದಕ್ಕೆ ಕೇದಾರ ಪೀಠ ಇಲ್ಲವೇ ವೈರಾಗ್ಯ ಸಿಂಹಾಸನವೆಂದು ಕರೆಯುವರು. ಈ ಸಿಂಹಾಸನವು ಉತ್ತರಪ್ರದೇಶದ ಚಮೋಲಿ ಜಿಲ್ಲೆಯ ಓಖೀಮಠ ಎಂಬಲ್ಲಿ ಇದೆ. ಇಂದು 'ಉತ್ತರಾಂಚಲ' ಎಂಬ ನೂತನ ರಾಜ್ಯದ ಉದಯವಾಗಿದೆ. ಆ ರಾಜ್ಯದ ರುದ್ರಪ್ರಯಾಗ ಜಿಲ್ಲೆಯಲ್ಲಿ ಸದ್ಯ ಓಖೀಮಠವಿದೆ.

ಈ ಪೀಠದ ಕೃತಯುಗದ ಆಚಾರ್ಯರಾದ ಶ್ರೀ ತ್ರ್ಯಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ಆ ಕಾಲದ ಸೂರ್ಯವಂಶದ ಶ್ರೀ ಮಾಂಧಾತಾ ಮಹಾರಾಜನಿಗೆ ವೀರಶೈವ ತತ್ತ್ವಗಳನ್ನು ಉಪದೇಶಿಸಿದ್ದರು. ಇವನು ತನ್ನ ಅಂತ್ಯಸಮಯವನ್ನು ಈ ಗುರುಸ್ಥಾನದಲ್ಲಿಯೇ ಕಳೆದು ಶಿವಸಾಯುಜ್ಯವನ್ನು ಪಡೆದಿದ್ದಾನೆ. ಅಂತೆಯೇ ಶ್ರೀ ಮಹಾರಾಜನ ಶಿಲಾಮೂರ್ತಿಯು ಇಂದಿಗೂ ಓಖೀಮಠದಲ್ಲಿ ವಿರಾಜಮಾನವಾಗಿದೆ.

ಈ ಪೀಠದ ದ್ವಾಪರಯುಗದ ಆಚಾರ್ಯರಾದ ಶ್ರೀ ಘಂಟಾಕರ್ಣ ಶಿವಾಚಾರ್ಯ ಮಹಾಸ್ವಾಮಿಗಳು ಕೇದಾರದಿಂದ ಕಾಶೀ ಕ್ಷೇತ್ರದವರೆಗೆ ಉತ್ತರ ಭಾರತದಲ್ಲಿ ಸಂಚರಿಸಿ ವೀರಶೈವ ತತ್ತ್ವಗಳನ್ನು ಉಪದೇಶಿಸಿದ್ದಾರೆ. ಅವರು ಕಾಶಿಗೆ ಬಂದಾಗ ಶ್ರೀ ವ್ಯಾಸಮಹರ್ಷಿಗಳು ಇವರಿಂದ ವೀರಶೈವ ತತ್ತ್ವೋಪದೇಶವನ್ನು ಪಡೆದು ಧನ್ಯರಾಗಿದ್ದರೆಂಬುದಕ್ಕೆ ಇಂದು ವ್ಯಾಸಕಾಶಿಯಲ್ಲಿ ವ್ಯಾಸೇಶ್ವರ ಮಂದಿರದಲ್ಲಿ ಇರುವ ಅಂಗೈಯಲ್ಲಿ ಇಷ್ಟಲಿಂಗವನ್ನು ಇರಿಸಿ ಪೂಜಿಸುವ ಘಂಟಾಕರ್ಣ ಶಿವಾಚಾರ್ಯರ ಶಿಲಾಮೂರ್ತಿಯೇ ಪ್ರತ್ಯಕ್ಷ ಪ್ರಮಾಣವಾಗಿದೆ.

ಶ್ರೀ ವ್ಯಾಸಮಹರ್ಷಿಗಳು ಘಂಟಾಕರ್ಣ ಶಿವಾಚಾರ್ಯರ ಶಿಷ್ಯರಾಗಿದ್ದರೆಂಬುದಕ್ಕೆ–

ಪಾರಾಶರ್ಯಸ್ತದಾರಭ್ಯ ಶಂಭುಭಕ್ತಿಪರೋಽಭವತ್ ।
ಲಿಂಗಂ ವ್ಯಾಸೇಶ್ವರಂ ಸ್ಥಾಪ್ಯ ಘಂಟಾಕರ್ಣಹ್ರದಾಗ್ರತಃ ॥
ವಿಭೂತಿಭೂಷಣೋ ನಿತ್ಯಂ ನಿತ್ಯಂ ರುದ್ರಾಕ್ಷಭೂಷಣಃ ।
ರುದ್ರಸೂಕ್ತಪರೋ ನಿತ್ಯಂ ನಿತ್ಯಂ ಲಿಂಗಾರ್ಚಕೋಽಭವತ್ ॥

(ಕಾಶೀಖಂಡ ೯೫, ಅಧ್ಯಾಯ ೬೮–೬೯)

ಎಂಬ ಕಾಶೀಖಂಡದ ಈ ಶ್ಲೋಕಗಳು ಆಧಾರವಾಗಿವೆ.

ಬಾಣಾಸುರನ ಮಗಳಾದ ಕುಮಾರಿ ಉಷಾದೇವಿಯು ಈ ಗುರುಪೀಠದಲ್ಲಿಯೇ ಇದ್ದು ಸಕಲ ಶಾಸ್ತ್ರಗಳ ಅಧ್ಯಯನವನ್ನು ಮಾಡಿದ್ದಳು. ಮುಂದೆ ಇವಳ ವಿವಾಹವು ಶ್ರೀ ಅನಿರುದ್ಧನೊಡನೆ ನೆರವೇರಿತು. ಶ್ರೀಮತಿ ಉಷಾದೇವಿಯು ತನ್ನ ಪತಿಯೊಡನೆ ಗುರುಸೇವೆಯನ್ನು ಮಾಡುತ್ತ ಬಹುಕಾಲದವರೆಗೆ ಗುರುಸ್ಥಾನದಲ್ಲಿಯೇ ವಾಸಮಾಡಿ ಕೊನೆಗೆ ಗುರುಋಣದಿಂದ ಮುಕ್ತಳಾಗಲು ಒಂದು ಭವ್ಯವಾದ ಮಠವನ್ನು ಕಟ್ಟಿಸಿಕೊಟ್ಟಿದ್ದಾಳೆ. ಅದುವೇ ಇಂದು ಉಷಾಮಠ ಇಲ್ಲವೇ ಓಖೀಮಠವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಈ ಪೀಠದ ಶ್ರೀ ಜಗದ್ಗುರು ಏಕೋರಾಮಾರಾಧ್ಯರು ಅನಂತಕಾಲದವರೆಗೆ ವೈರಾಗ್ಯ ಸಿಂಹಾಸನಾಧಿಪತಿಗಳಾಗಿ ಉತ್ತರ ಭಾರತದ ಅನೇಕ ಸ್ಥಾನಗಳಲ್ಲಿ ವೀರಶೈವ ತತ್ತ್ವಬೋಧೆಯನ್ನು ಮಾಡಿ ಈ ಮಠವನ್ನು ಸ್ಥಿರಗೊಳಿಸಿ, ತಾವು ಪುನಃ ತಮ್ಮ ಉದ್ಭವಸ್ಥಾನವಾದ ದ್ರಾಕ್ಷಾರಾಮ ಕ್ಷೇತ್ರದ ರಾಮನಾಥ (ಭೀಮನಾಥ) ಲಿಂಗದಲ್ಲಿಯೇ ಐಕ್ಯರಾದರು.

ಶ್ರೀ ಜಗದ್ಗುರು ಆನಂದಲಿಂಗ ಶಿವಾಚಾರ್ಯರು ಃ

ಶ್ರೀ ಕೇದಾರ ಪೀಠದ ಪರಂಪರೆಯಲ್ಲಿ ಮಹಾನ್ ತಪಸ್ವಿಗಳೂ, ಯೋಗಸಿದ್ಧರೂ ಆದ ಅನೇಕ ಜನ ಆಚಾರ್ಯರು ಆಗಿಹೋಗಿದ್ದಾರೆ. ಅವರಲ್ಲಿ ಶ್ರೀ ಜಗದ್ಗುರು ಆನಂದಲಿಂಗ ಶಿವಾಚಾರ್ಯರ ಹೆಸರು ಉಲ್ಲೇಖನೀಯವಾಗಿದೆ. ಅರ್ಜುನನ ಪ್ರಪೌತ್ರನೂ, ಅಭಿಮನ್ಯುವಿನ ಪೌತ್ರನೂ, ಪರೀಕ್ಷಿತನ ಪುತ್ರನೂ ಆದ ಶ್ರೀ ಜನಮೇಜಯ ಮಹಾರಾಜನು ಇವರಲ್ಲಿ ಅನನ್ಯ ಭಕ್ತಿಯಿಂದ ವರ್ತಿಸುತ್ತಿದ್ದನಲ್ಲದೇ ತನ್ನ ಆಡಳಿತದಲ್ಲಿರುವ ಕೇದಾರ ಕ್ಷೇತ್ರವನ್ನು ಈ ಮಹಾತ್ಮರಿಗೆ ದಾನಮಾಡಿ ತಾಮ್ರಶಾಸನವನ್ನು ಬರೆದುಕೊಟ್ಟಿರುತ್ತಾನೆ. ಈ ತಾಮ್ರಶಾಸನವು ಅತಿ ಮಹತ್ತ್ವದ್ದಾಗಿರುವುದರಿಂದ ಈ ಕೆಳಗೆ ಉಲ್ಲೇಖಿಸಲ್ಪಟ್ಟಿದೆ.

॥ ಶ್ರೀ ಕೇದಾರೇಶ್ವರಾಯ ನಮಃ ॥

ಸ್ವಸ್ತಿ ಶ್ರೀ ವಿಜಯಾಭ್ಯುದಯ ಯುಧಿಷ್ಠಿರ ಶಕೇ ಪ್ಲವಂಗಾಖ್ಯೇ ಏಕೋನನವತಿತಮವತ್ಸರೇ ಸಹಸಿ ಮಾಸೇ ಅಮಾವಾಸ್ಯಾಯಾಂ ಸೋಮವಾಸರೇ ಶ್ರೀಮನ್ಮಹಾರಾಜಾಧಿರಾಜ ಪರಮೇಶ್ವರ ವೈಯಾಘ್ರಪದಗೋತ್ರಜ ಶ್ರೀ ಜನಮೇಜಯ ಭೂಪಾಲಃ ಇಂದ್ರಪ್ರಸ್ಥನಗರೀ ಸಿಂಹಾಸನಸ್ಥಃ ಸಕಲ ವರ್ಣಾಶ್ರಮ ಧರ್ಮ ಪರಿಪಾಲಕಃ ಉತ್ತರ ಹಿಮಾಲಯೇ ಶ್ರೀ ಕೇದಾರ ಕ್ಷೇತ್ರೇ ತತ್ರತ್ಯಮುನೇರುಷಾಮಠಸ್ಯ ಶ್ರೀ ಗೋಸ್ವಾಮಿ ಆನಂದಲಿಂಗ ಜಂಗಮ ಶ್ರೀಮಚ್ಛಿಷ್ಯ ಜ್ಞಾನಲಿಂಗ ಜಂಗಮದ್ವಾರ ಆರಾಧಿತ ಶ್ರೀ ಕೇದಾರನಾಥಸ್ಯ ಪೂಜಾರ್ಥಂ ಚತುಹಸೀಮಾ ಪರಿಕ್ರಮಃ। ಪೂರ್ವಭಾಗೇ ದಕ್ಷಿಣವಾಹಿನೀ ಮಂದಾಕಿನೀ, ಪಶ್ಚಿಮ ದಕ್ಷಿಣಭಾಗೇ ಕ್ಷೀರಗಂಗಾ, ಉತ್ತರ ಪಶ್ಚಿಮೇ ಮಧುಗಂಗಾ, ಪೂರ್ವೋತ್ತರ ಭಾಗೇ ಸ್ವರ್ಗದ್ವಾರ ನದೀ, ದಕ್ಷಿಣೇ ಸರಸ್ವತೀ, ಮಂದಾಕಿನ್ಯೋಃ ಸಂಗಮಃ। ಏತನ್ಮಧ್ಯೇ ಶ್ರೀ ಕೇದಾರ ಕ್ಷೇತ್ರಮ್। ಭವಚ್ಛಿಷ್ಯ ಪರಂಪರಯಾ ಚಂದ್ರಾರ್ಕ ಪರ್ಯಂತಂ ನಿಧಿನಿಕ್ಷೇಪ ಜಲ ಪಾಷಾಣಾಗಾಮಿ ಸಿದ್ಧಸಾಧ್ಯ ತೇಜಃಸಾಮ್ಯಸಹಿತಂ ಸ್ವಬುದ್ಧ್ಯಾನುಕೂಲ್ಯೇನಾಸ್ಮನ್ಮಾತೃ ಸಮಯೇ ಸಹಿರಣ್ಯ ಮಂದಾಕಿನೀ ಜಲಧಾರಾಪೂರ್ವಕಂ ಕ್ಷೇತ್ರಮಿದಂ ಹಸ್ತೇ ದತ್ತವಾನಸ್ಮಿ। ಏತದ್ಧರ್ಮ ಸಾಧನಸ್ಯ ಸಾಕ್ಷಿಣಃ –

ಆದಿತ್ಯಚಂದ್ರಾವನಿಲೋಽನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ।
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಂತಿ ನರಸ್ಯ ವೃತ್ತಮ್॥
ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋಽನುಪಾಲನಮ್।
ದಾನಾತ್ ಸ್ವರ್ಗಮವಾಪ್ನೋತಿ ಪಾಲನಾದ್ ದ್ವಿಗುಣಂ ಫಲಮ್॥
ಸ್ವದತ್ತಾದ್ ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಮ್।

ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್॥
ಸ್ವದತ್ತಾ ಪುತ್ರಿಕಾ ಜ್ಞೇಯಾ ಪಿತೃದತ್ತಾ ಸಹೋದರಾ।
ಅನ್ಯದತ್ತಾ ತು ಜನನೀ ದತ್ತಭೂಮಿಂ ಪರಿತ್ಯಜೇತ್॥
ಅನ್ಯೈಸ್ತು ವರ್ಧಿತಂ ಭುಂಕ್ತೇಸಾರ್ಥಸ್ಯ ವರ್ಧಿತಂ ನ ತು।
ತತಃ ಕಷ್ಟಸ್ತತೋ ನೀಚಃ ಸ್ವಯಂ ದತ್ತಾಪಹಾರಕಃ ॥
ಸ್ವದತ್ತಾಂ ಪರದತ್ತಾಂ ವಾ ಬ್ರಹ್ಮವೃತ್ತಿಂ ಹರೇಚ್ಚ ಯಃ ।
ಷಷ್ಠಿವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಮಿ ॥ ಇತಿ॥

ಈ ದಾನಶಾಸನದ ತಾತ್ಪರ್ಯವೇನೆಂದರೆ – ಶ್ರೀ ಜನಮೇಜಯ ಮಹಾರಾಜರು ರಾಜ್ಯವನ್ನು ಪರಿಪಾಲಿಸುತ್ತಿರುವಾಗ ಶ್ರೀ ಆನಂದಲಿಂಗ ಜಂಗಮರು ಶ್ರೀ ಕೇದಾರ ಪೀಠದ ಜಗದ್ಗುರುಗಳಾಗಿದ್ದರು.

ಮಂದಾಕಿನೀ, ಕ್ಷೀರಗಂಗಾ ಮತ್ತು ಸರಸ್ವತೀ ಮುಂತಾದ ಪವಿತ್ರ ನದಿಗಳ ಸಂಗಮ ಕ್ಷೇತ್ರದ ಮಧ್ಯಭೂಮಿಯನ್ನು ಕೇದಾರ ಕ್ಷೇತ್ರವೆಂದು ಕರೆಯುತ್ತಾರೆ. ಈ ಸಂಪೂರ್ಣ ಕ್ಷೇತ್ರದ ಆದಾಯದಿಂದ ಶ್ರೀ ಜಗದ್ಗುರು ಆನಂದಲಿಂಗ ಜಂಗಮರು ತಮ್ಮ ಶಿಷ್ಯನಾದ ಶ್ರೀ ಜ್ಞಾನಲಿಂಗ ಜಂಗಮನಿಂದ ಶ್ರೀ ಕೇದಾರೇಶ್ವರನ ಪೂಜಾದಿ ವ್ಯವಸ್ಥೆಯನ್ನು ಮಾಡಿಸಲಿ –ಎಂಬ ಉದ್ದೇಶದಿಂದ ಶ್ರೀ ಜಗದ್ಗುರು ಆನಂದಲಿಂಗ ಜಂಗಮರಿಗೆ ಶ್ರೀ ಜನಮೇಜಯ ಮಹಾರಾಜನು ಭೂಮಿದಾನವನ್ನು ಮಾಡಿದ್ದಾನೆ.

ಯುಧಿಷ್ಠಿರನು ರಾಜ್ಯಾರೋಹಣ ಮಾಡಿ ೮೯ ವರ್ಷಗಳು ಕಳೆದ ನಂತರ ಪ್ಲವಂಗನಾಮ ಸಂವತ್ಸರದ ಮಾರ್ಗಶೀರ್ಷ ಮಾಸದ ಅಮಾವಾಸ್ಯೆಯ ದಿನ ಸೂರ್ಯಗ್ರಹಣವಿದ್ದಾಗ ತನ್ನ ಮಾತಾಪಿತೃಗಳಿಗೆ ಶಿವಲೋಕ ಪ್ರಾಪ್ತಿಯಾಗಲೆಂಬ ಉದ್ದೇಶದಿಂದ ಈ ದಾನವು ಮಾಡಲ್ಪಟ್ಟಿದೆ. ಈ ದಾನಪತ್ರದ ಆಧಾರದಿಂದ ಶ್ರೀ ಕೇದಾರೇಶ್ವರ ಮಂದಿರ ಹಾಗೂ ಓಖೀಮಠ ಇವೆರಡೂ ೫,೦೦೦ ವರ್ಷಕ್ಕಿಂತಲೂ ಪ್ರಾಚೀನವಾದವುಗಳೆಂದು ತಿಳಿದುಬರುತ್ತದೆ.

ಶ್ರೀ ಜಗದ್ಗುರು ಭುಕುಂಡಲಿಂಗ ಶಿವಾಚಾರ್ಯರು ಃ

ಇವರು ದಕ್ಷಿಣ (ಚೋಳ) ದೇಶದ ವೀರಮಾಹೇಶ್ವರ (ಜಂಗಮ) ವಂಶದಲ್ಲಿ ಜನ್ಮವೆತ್ತಿ ಸಕಲ ಶಾಸ್ತ್ರಗಳಲ್ಲಿ ಪಾರಂಗತರಾಗಿ ಪರವಾದಿಗಳಿಗೆ ಭಯಂಕರರಾಗಿದ್ದರು. ಇವರನ್ನು ವೀರಭದ್ರನ ಅವತಾರವೆಂದು ಕರೆಯುತ್ತಿದ್ದರು. ಇವರು ಕಾಶಿಯ ವಿಶ್ವಾರಾಧ್ಯ ಪೀಠದಲ್ಲಿ ಅನೇಕ ಕಾಲವಿದ್ದು ನಂತರ ಕೇದಾರ ಕ್ಷೇತ್ರಕ್ಕೆ ಹೋಗಿ ಅಲ್ಲಿಯ ಪೀಠಾಚಾರ್ಯರ ಅನುಗ್ರಹದಿಂದ ವೈರಾಗ್ಯ ಪೀಠಾಧಿಪತಿಗಳಾದರು.

ಇವರ ಅನೇಕ ಶಿಷ್ಯರಲ್ಲಿ "ಶ್ರೀ ಗಣೇಶಲಿಂಗ"ರು ವಿದ್ಯಾಸಂಪನ್ನರೂ, ಯೋಗಸಿದ್ಧರೂ ಆಗಿದ್ದರು. ಆದಕಾರಣ ಶ್ರೀ ಭುಕುಂಡಲಿಂಗ ಶಿವಾಚಾರ್ಯರು ಶ್ರೀ ಗಣೇಶಲಿಂಗರಿಗೆ ವೈರಾಗ್ಯ ಸಿಂಹಾಸನದ ಅಧಿಕಾರವನ್ನು ವಹಿಸಿ ತಾವು ಕೇದಾರ ಕ್ಷೇತ್ರದಲ್ಲಿಯೇ ಲಿಂಗೈಕ್ಯರಾದರು. ಇವರ ಹೆಸರಿನ ಒಂದು ಜಲಕುಂಡಲವು ಇಂದಿಗೂ ಓಖೀಮಠದಲ್ಲಿ ಇದೆ. ಇವರು ಇಂದಿಗೆ ೩ಸಾವಿರ ವರ್ಷ ಪೂರ್ವದಲ್ಲಿ ಇದ್ದರೆಂಬ ವಿಷಯವನ್ನು ಟಿಹರಿ ಗಢವಾಲ ರಿಯಾಸತ್ ವಜೀರ್ ಪಂ॥ ಶ್ರೀ ಹರಿಕೃಷ್ಣ ರತೋಡಿ ಸಾಹೇಬರು ತಾವು ಬರೆದ "ಗಢವಾಲಕಾ ಇತಿಹಾಸ" ಎಂಬ ಗ್ರಂಥದಲ್ಲಿ ಅನೇಕ ಆಧಾರಗಳೊಡನೆ ಸಿದ್ಧಮಾಡಿದ್ದಾರೆ. ಇವರ ಕೀರ್ತಿಯು ಇಂದಿಗೂ ಜ್ವಾಜ್ವಲ್ಯಮಾನವಾಗಿದೆ.

ಟೆಹರೀ ಗಢವಾಲದ ಮಹಾರಾಜರು ಈ ಪೀಠದ ಅನನ್ಯ ಭಕ್ತರಾಗಿರುತ್ತಾರೆ. ಶ್ರೀಕೇದಾರ ಪೀಠಕ್ಕೆ ಉತ್ತರಾಧಿಕಾರಿಗಳಾಗಿ ಬಂದವರಿಗೆ ಮಹಾರಾಜರು ಮೊದಲು ತಿಲಕೋತ್ಸವವನ್ನು ಮಾಡಿ ಅವರಿಗೆ "ರಾವಲ್" ಎಂಬ ಉಪಾಧಿಯನ್ನು ಕೊಡುತ್ತಾರೆ. ನಂತರ ಶ್ರೀ ರಂಭಾಪುರೀ, ಶ್ರೀ ಉಜ್ಜಯಿನೀ, ಶ್ರೀ ಶ್ರೀಶೈಲ ಮತ್ತು ಶ್ರೀ ಕಾಶೀ ಪೀಠದ ಜಗದ್ಗುರುಗಳೆಲ್ಲರೂ ಅಥವಾ ಇವರಲ್ಲಿ ಯಾರಾದರೊಬ್ಬರು ಈ ರಾವಲ್‌ರಿಗೆ ಜಗದ್ಗುರುತ್ವವನ್ನು ದಯಪಾಲಿಸುತ್ತಾರೆ.

ಪರೀಕ್ಷಿತನ ಪುತ್ರನಾದ ಜನಮೇಜಯ ಭೂಪಾಲನು ಕೊಟ್ಟ ಸಮಸ್ತ ಭೂಮಿಯು ಕ್ರಿ.ಶ. ೧೮೯೪ರವರೆಗೆ ಈ ಪೀಠದ ಆಚಾರ್ಯರ ಸ್ವಾಧೀನದಲ್ಲಿಯೇ ಇದ್ದಿತ್ತು. ಈ ಭೂಮಿಯಲ್ಲಿ ಒಂದು ಸಾವಿರ ಗ್ರಾಮಗಳಿದ್ದವಂತೆ. ಕ್ರಿ. ಶ. ೧೮೯೪ರಲ್ಲಿ ಈ ಪೀಠಕ್ಕೆ ಶ್ರೀ ಗಣೇಶಲಿಂಗ ಜಂಗಮರೆಂಬ ಜಗದ್ಗುರುಗಳಿದ್ದರು. ಅಂದಿನ ಬ್ರಿಟಿಷ್ ಸರಕಾರದವರು ಈ ಪೀಠದ ಸ್ವಾಧೀನದಲ್ಲಿದ್ದ ಅನೇಕ ಗ್ರಾಮಗಳ ಒಡೆತನವನ್ನು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಕೇದಾರ ಪೀಠದ ಜಗದ್ಗುರುಗಳಾದ ಶ್ರೀ ಗಣೇಶಲಿಂಗ ಜಂಗಮರಿಗೆ ಅಂದಿನ ಗಢವಾಲ ಜಿಲ್ಲೆಯಲ್ಲಿಯ ೭೦, ಆಲ್ಮೋರಾ ಜಿಲ್ಲೆಯಲ್ಲಿಯ ೪೩, ಟೆಹರೀ ರಾಜ್ಯದಲ್ಲಿಯ ೨೭, ಡೆಹರಾಡೂನ್ ಜಿಲ್ಲೆಯಲ್ಲಿಯ ೨ ಮತ್ತು ನೈನಿತಾಲ್ ಜಿಲ್ಲೆಯಲ್ಲಿಯ ೧– ಹೀಗೆ ಒಟ್ಟು ೧೪೩ ಗ್ರಾಮಗಳನ್ನು ಮಾತ್ರ ಬಿಟ್ಟುಕೊಟ್ಟರು. ಈ ಎಲ್ಲ ಗ್ರಾಮಗಳ ಸಂಪೂರ್ಣ ಆದಾಯವು ಕೇದಾರ ಪೀಠಕ್ಕೆ ಸಲ್ಲುತ್ತಿತ್ತು.

ಇದೂ ಅಲ್ಲದೆ ಹಿಮಾಲಯ ಪ್ರಾಂತ್ಯದಲ್ಲಿ ಅತ್ಯಂತ ಪ್ರಸಿದ್ಧವಾದ ಕಾಳೀಮಠ, ಉದಯಕುಂಡ, ಗೌರೀಕುಂಡ, ಗೌರೀಮಾಯಿ, ತುಂಗನಾಥ, ತ್ರಿಯುಗಿ ನಾರಾಯಣ, ನಾರಾಯಣ ತೀರ್ಥ, ನಾಲೀಭಗವತೀ, ಮೈಖಂಡ ಮತ್ತು ಸೋಮದ್ವಾರ ಮುಂತಾದ ೨೨ ಕ್ಷೇತ್ರಗಳ ಸರ್ವಾಧಿಪತ್ಯವು ಕೇದಾರ ಪೀಠಾಚಾರ್ಯರ ಸ್ವಾಧೀನದಲ್ಲಿಯೇ ಇದ್ದವು.

ನಮ್ಮ ದೇಶವು ಸ್ವತಂತ್ರವಾದ ನಂತರ ಕಾಲಕ್ರಮದ ಕಾನೂನಿಗನುಸಾರವಾಗಿ ಕೇದಾರ ಪೀಠಾಚಾರ್ಯರ ಸ್ವಾಧೀನದಲ್ಲಿದ್ದ ಗ್ರಾಮಗಳ ಆದಾಯವೆಲ್ಲ ಸರ್ಕಾರದ ಸ್ವಾಧೀನವಾಗಿ ಇವರಿಗೆ ಕೇವಲ ಧಾರ್ಮಿಕ ಅಧಿಕಾರ ಮಾತ್ರ ಉಳಿದಿದೆ. ಅದರಂತೆ ಹಿಮಾಲಯದ ೨೨ ಕ್ಷೇತ್ರಗಳ ಪೈಕಿ ಶ್ರೀ ಕೇದಾರನಾಥ, ಗುಪ್ತಕಾಶಿ, ಮಧ್ಯಮಹೇಶ್ವರ, ಓಖೀಮಠ ಈ ನಾಲ್ಕು ದೇವಸ್ಥಾನಗಳಲ್ಲಿ ಕೇದಾರ ಜಗದ್ಗುರುಗಳ ಶಿಷ್ಯರಾದ ದಕ್ಷಿಣ ಭಾರತದ ಜಂಗಮ ವಂಶದವರೇ ಅನಾದಿಕಾಲದಿಂದ ಇಂದಿನವರೆಗೆ ಪ್ರಧಾನ ಅರ್ಚಕರಾಗಿ ಕಾರ್ಯವನ್ನು ನಿರ್ವಹಿಸುತ್ತಲಿದ್ದಾರೆ.

ಉತ್ತರ ಭಾರತದಲ್ಲಿ ಕೇದಾರ ಪೀಠಾಚಾರ್ಯರಿಗೆ ಹಾಗೂ ಬದರೀನಾಥ ಮಠಾಧಿಪತಿಗಳಿಗೆ ಬಹು ದೊಡ್ಡ ಗೌರವವಿರುತ್ತದೆ. ಬ್ರಿಟೀಷ್ ಸರ್ಕಾರದವರು ಈ ಎರಡು ಮಠಾಧಿಪತಿಗಳಿಗೆ ಮಾತ್ರ "ರಾವಲ್" ಎಂಬ ಮಹಾಪದವಿಯನ್ನು ಕೊಟ್ಟು ಗೌರವಿಸಿರುತ್ತಾರೆ. ಈ ಪದವಿಯು ಇಂದಿಗೂ ಇವರಿಗೆ ಪರಂಪರಾಗತವಾಗಿ ಬಳಕೆಯಲ್ಲಿದೆ.

ಬ್ರಿಟೀಷ್ ಶಾಸನದ ಆದೇಶದಂತೆ ಶ್ರೀ ಕೇದಾರ ಪೀಠದ ನೂತನ ಜಗದ್ಗುರುಗಳಿಗೆ ಟಿಹರಿ ಮಹಾರಾಜರು ತಿಲಕೋತ್ಸವವನ್ನು ಮಾಡಿ ಈ "ರಾವಲ್" ಪದವಿಯನ್ನು ಕೊಡುವ ಪದ್ಧತಿಯೂ ರೂಢಿಯಲ್ಲಿ ಬಂದಿದೆ.

ಕೇದಾರ ಪೀಠದ ಜಗದ್ಗುರುಗಳು ಬಹು ಪ್ರಾಚೀನ ಕಾಲದಿಂದಲೂ ದಕ್ಷಿಣ ಭಾರತದ ಜಂಗಮ ವಂಶದ ತಮ್ಮ ಶಿಷ್ಯರನ್ನು ತಾವೇ ಆರಿಸಿ ಉತ್ತರಾಧಿಕಾರಿಗಳನ್ನು ಮಾಡುತ್ತಿದ್ದರು. ಆದರೆ ೧೯೧೧ನೇ ಇಸವಿಯಲ್ಲಿ ಸರಕಾರದವರಿಂದ ಈ ಪದ್ಧತಿಯು ತೆಗೆದುಹಾಕಲ್ಪಟ್ಟಿತು.

ಕಾರಣವೇನೆಂದರೆ – ಶ್ರೀ ಕೇದಾರ ಪೀಠದ ೩೧೬ ಹಾಗೂ ೩೧೮ನೇ ಪೀಠಾಧಿಪತಿಗಳಾಗಿದ್ದ ಶ್ರೀ ಕೇದಾರಲಿಂಗ ಹಾಗೂ ಶ್ರೀ ಗಣೇಶಲಿಂಗರ ಕಾಲದಲ್ಲಿ (ಕ್ರಿ.ಶ. ೧೮೯೪) ಪ್ರತಿವರ್ಷ ಮಠಕ್ಕೆ ಸಲ್ಲುವ ಆದಾಯವೆಲ್ಲವೂ ವೆಚ್ಚವಾಗಿ, ಲಕ್ಷಾಂತರ ರೂಪಾಯಿಗಳ ಸಾಲವಾಯಿತು. ಈ ರೀತಿ ಸಾಲವಾಗಲು ಸ್ವಾಮಿಗಳವರು ಹಣಕಾಸಿನ ವ್ಯವಹಾರದ ಬಗೆಗೆ ತೋರಿದ ಅಲಕ್ಷ್ಯವೇ ಕಾರಣ, ಈ ವಿಷಯವನ್ನೆಲ್ಲಾ ಆ ಕಾಲದ ಸರಕಾರಿ ಅಧಿಕಾರಿಗಳು ವಿಮರ್ಶಿಸಿ, ಇದನ್ನು ಹೀಗೆಯೇ ಬಿಟ್ಟರೆ ಈ ಪೀಠವು ಎಂದೂ ಋಣಮುಕ್ತವಾಗುವುದಿಲ್ಲವೆಂದು ಭಾವಿಸಿ ಮುಂದೆ ಈ ಪೀಠದ ೩೧೯ನೆಯ ಪೀಠಾಧಿಪತಿಗಳಾಗಿದ್ದ ಶ್ರೀ ವಿಶ್ವಲಿಂಗ ಸ್ವಾಮಿಗಳವರನ್ನು ಪ್ರತಿವಾದಿ ಸ್ಥಾನಕ್ಕೆ ಸೇರಿಸಿ ಸ್ವತಃ ಸರಕಾರದವರೇ ವಾದಿಗಳಾಗಿ ಕೋರ್ಟಿನಲ್ಲಿ ವ್ಯಾಜ್ಯವನ್ನು ತಂದರು. ಈ ವಿಷಯವು ಆಗ್ಗೆ ಹೈಕೋರ್ಟಿನ ಅಧಿಕಾರವನ್ನು ಪಡೆದಿದ್ದ ಕುಮಾವು ಡಿವಿಜನ್ ಕಮಿಶನರ್ ಅವರ ಕೋರ್ಟಿನಲ್ಲಿ ವಿಚಾರಣೆಗೆ ಒಳಪಟ್ಟಿತು. ಕಮೀಷನರವರು ದಿ। ೮–೯–೧೯೧೧ರಲ್ಲಿ ಈ ಪೀಠದ ಬಗ್ಗೆ ಒಂದು ಯೋಜನೆಯನ್ನು ತಯಾರಿಸಿದರು. ಈ ಯೋಜನೆಯಲ್ಲಿ ಪೀಠಾಧಿಪತಿಗಳಿಗೆ ಪ್ರತೀ ತಿಂಗಳು ಕೊಡಬೇಕಾದ ಗೌರವಧನ ಹಾಗೂ ಶಿಷ್ಯರ ಸಂಖ್ಯೆಯನ್ನು ನಿಗದಿಪಡಿಸಿದರು. ಅಂದಿನಿಂದ ಇಂದಿನವರೆಗೆ ಈ ಪೀಠದ ಆಡಳಿತವೆಲ್ಲವೂ ಆ ಯೋಜನೆಯಂತೆಯೇ ನಡೆಯುತ್ತಿದೆ. ಈ ಯೋಜನೆಯಿಂದ ಮಠದ ಅನಾವಶ್ಯಕ ಖರ್ಚುಗಳೆಲ್ಲ ನಿಂತು ಪೀಠದ ಆದಾಯಕ್ಕೆ ಅನುಕೂಲವಾಯಿತೇನೋ ನಿಜ; ಆದರೆ ಪೀಠಾಧಿಪತಿಗಳ ಸ್ವಾತಂತ್ರ್ಯವೆಲ್ಲವೂ ಕಳೆದುಹೋಯಿತು. ಈ ಪೀಠದ ಪ್ರತೀ ವರ್ಷದ ಆದಾಯ ಹಾಗೂ ವೆಚ್ಚವನ್ನು ಟೆಹರಿ ದರ್ಬಾರದವರು ಪರಿಶೀಲಿಸಬೇಕೆಂದೂ ಯೋಜನೆಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಈ ಪೀಠಾಧಿಪತಿಗಳು ತಾವು ಜೀವಂತವಿರುವಾಗ ಉತ್ತರಾಧಿಕಾರಿಗಳನ್ನು ಮಾಡಲಿಕ್ಕೆ ಈ ಯೋಜನೆಯಲ್ಲಿ ಅವರಿಗೆ ಅವಕಾಶವನ್ನು ಕೊಟ್ಟಿರುವುದಿಲ್ಲ. ಆದರೆ ತಮ್ಮ ಉತ್ತರಾಧಿಕಾರಕ್ಕಾಗಿ ದಕ್ಷಿಣ ದೇಶದ ಜಂಗಮರಲ್ಲಿ ಯಾರಾದರೊಬ್ಬ ಶಿಷ್ಯರ ಹೆಸರನ್ನು ಸೂಚಿಸಿ ಮೃತ್ಯುಪತ್ರವನ್ನು ಬರೆದಿಡಲು ಮಾತ್ರ ಸಮ್ಮತಿಯನ್ನು ಕೊಟ್ಟಿದ್ದಾರೆ. ಈ ಎಲ್ಲ ವಿಷಯವನ್ನು ಲಿಂ। ಪಂ। ಕಾಶೀನಾಥ ಶಾಸ್ತ್ರಿಗಳವರು "ಶ್ರೀ ಜಗದ್ಗುರು ಪಂಚಾಚಾರ್ಯರ ಪ್ರಾಚೀನತ್ವ" ಎಂಬ ಪುಸ್ತಕ (ಪುಟ ೯೫–೧೦೦)ರಲ್ಲಿ ವಿಸ್ತಾರವಾಗಿ ಪ್ರತಿಪಾದಿಸಿರುತ್ತಾರೆ. ಜಿಜ್ಞಾಸುಗಳು ಅವಲೋಕಿಸಬಹುದು.

ಸನಾತನವಾದ ಈ ಕೇದಾರ ಪೀಠಕ್ಕೂ ಅನಾದಿಕಾಲದಿಂದ ಗುರುಪರಂಪರೆಯು ಸಾಗಿಬಂದಿದೆ. "ಗಢವಾಲ ಕಾ ಇತಿಹಾಸ" ಎಂಬ ಪುಸ್ತಕದ ಆಧಾರದಿಂದ ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರವರೆಗೆ ೩೨೦ ಹೆಸರುಗಳು ದೊರೆಯುತ್ತವೆ. ಇವರೆಲ್ಲರೂ ತ್ಯಾಗಿಗಳೂ, ತಪಸ್ವಿಗಳೂ ಆಗಿದ್ದರು. ಈ ಪೀಠ ಪರಂಪರೆಯ ೩೧೯ನೆಯ ಜಗದ್ಗುರುಗಳಾದ ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರ ಕಾಲದಲ್ಲಿ ಈ ಪೀಠಕ್ಕೆ ೮೦ ಸಾವಿರ ರೂಪಾಯಿಗಳ ಸಾಲವಾಗಿತ್ತು. ಈ ಸಾಲ ಪರಿಹಾರಕ್ಕಾಗಿ ಧನ ಸಂಗ್ರಹಿಸಲು ಉಜ್ಜಯಿನಿ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಹಾಗೂ ಪಂ। ಕಾಶೀನಾಥ ಶಾಸ್ತ್ರಿಗಳ ಸಲಹೆಯಂತೆ ಕರ್ನಾಟಕಕ್ಕೆ ಆಗಮಿಸಿ ಅನೇಕ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗಿಗಳಾದರು. ಮುಂದೆ ೧೯೧೯ನೆಯ ಡಿಸೆಂಬರನಲ್ಲಿ ಬೀರೂರಿನಲ್ಲಿ ನೆರವೇರಿದ ೯ನೆಯ ಅಖಿಲ ಭಾರತ ವೀರಶೈವ ಮಹಾಸಭೆಯನ್ನು ನೆರವೇರಿಸಿ ಮುಂದೆ ಆ ಪ್ರಾಂತದಲ್ಲಿ ಸಂಚರಿಸುತ್ತಾ ಇದ್ದು ದಿ॥ ೧೫–೬–೧೯೨೦ರಂದು ಶ್ರೀ ಉಜ್ಜಯಿನಿ ಪೀಠದಲ್ಲಿಯೇ ಲಿಂಗೈಕ್ಯರಾದರು. ಇವರ ಸಮಾಧಿಯು ಉಜ್ಜಯಿನಿ ಪೀಠದಲ್ಲಿಯೇ ಇದೆ.

ಲಿಂ। ಜಗದ್ಗುರುಗಳ ವಿಲ್ ಪ್ರಕಾರ ಅವರ ಶಿಷ್ಯರಾಗಿದ್ದ ಶ್ರೀ ನೀಲಕಂಠಲಿಂಗರಿಗೆ ಕಾಶೀ ಜಗದ್ಗುರು ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳಿಂದ ೧–೧೦–೧೯೨೧ರಂದು ಜಗದ್ಗುರುತ್ತ್ವವು ಪ್ರಾಪ್ತವಾಯಿತು. ಕೇದಾರ ಪೀಠದ ೩೨೦ನೆಯ ಜಗದ್ಗುರುಗಳಾದ ಶ್ರೀ ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಧಾರವಾಡ ಜಿಲ್ಲಾ ಕಲ್ಲೇದೇವೂರು ಎಂಬ ಗ್ರಾಮದ ವೀರಮಾಹೇಶ್ವರ ವಂಶದಲ್ಲಿ ೧೮೮೯ನೇ ಇಸವಿಯಲ್ಲಿ ಜನಿಸಿದರು. ಇವರು ಕಾಶೀ ಜಂಗಮವಾಡಿ ಮಠದಲ್ಲಿ ಕೆಲಕಾಲ ಇದ್ದು ಸಂಸ್ಕೃತ, ಹಿಂದೀ ಮುಂತಾದ ಭಾಷೆಗಳನ್ನು ಅಧ್ಯಯನ ಮಾಡಿದ್ದಲ್ಲದೇ ಆಯುರ್ವೇದ ವಿಶಾರದರೂ ಆಗಿದ್ದರು.

ಪೂಜ್ಯ ಜಗದ್ಗುರುಗಳವರು ಕರ್ನಾಟಕದ ಅನೇಕ ಭಾಗಗಳಲ್ಲಿ ಸಂಚರಿಸಿ ವಿಪುಲವಾದ ಧನವನ್ನು ಸಂಗ್ರಹಿಸಿ ಪೀಠದ ಋಣವನ್ನು ತೀರಿಸಿದರಲ್ಲದೇ ಪೀಠದ ಸಿರಿಯನ್ನು ಹೆಚ್ಚಿಸಿದರು. ಕರ್ನಾಟಕದಲ್ಲಿ ಇವರ ಸಂಚಾರವಿದ್ದಾಗ ಹೊಸಪೇಟೆ, ಬಳ್ಳಾರಿ ಮುಂತಾದ ಭಾಗಗಳಲ್ಲಿ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ಶಾ.ಶ. ೧೮೮೪ ಪ್ರಭವನಾಮ ಸಂವತ್ಸರದ ವೈಶಾಖ ಶುದ್ಧ ಪಂಚಮಿ ತಾ॥ ೧೬–೫–೧೯೨೬ರಂದು ಮೈಸೂರಿನಲ್ಲಿ ಪ್ರಾರಂಭಿಸಲ್ಪಟ್ಟ "ಪಂಚಾಚಾರ್ಯ ಪ್ರಭಾ" ಪತ್ರಿಕೆಗಾಗಿ ೬,೦೦೦/– (ಆರು ಸಾವಿರ) ರೂಪಾಯಿಗಳನ್ನು ಕೊಟ್ಟು ಆಶೀರ್ವದಿಸಿದರು.

ಪೂಜ್ಯ ಶ್ರೀಗಳು ಉತ್ತರ ಭಾರತದ ಓಖೀಮಠ ಮತ್ತು ಗುಪ್ತಕಾಶಿಗಳ ಮಧ್ಯದಲ್ಲಿ "ಉತ್ತರಾಖಂಡ ವಿದ್ಯಾಪೀಠ" ಎಂಬ ಹೆಸರಿನ ಒಂದು ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿ ಪರ್ವತೀಯ ಕ್ಷೇತ್ರಗಳ ಮಕ್ಕಳಿಗೆ ಸುಲಭವಾಗಿ ಶಿಕ್ಷಣ ದೊರೆಯುವ ವ್ಯವಸ್ಥೆಯನ್ನು ಮಾಡಿದರು. ಈ ವಿದ್ಯಾಪೀಠದಲ್ಲಿ ಸಂಸ್ಕೃತ, ಹಿಂದೀ ಮತ್ತು ಆಯುರ್ವೇದ ಮುಂತಾದ ವಿಷಯಗಳ ಅಧ್ಯಯನ ವ್ಯವಸ್ಥೆಯಿದೆ. ಈ ವಿದ್ಯಾಪೀಠವೇ ಸದ್ಯಃ ಒಂದು ಸ್ವತಂತ್ರವಾದ ವಿಶ್ವವಿದ್ಯಾಲಯವಾಗುವ ಹಂತದಲ್ಲಿ ಇದೆ. ಇದಕ್ಕಾಗಿ ಕೇದಾರನಾಥ ಮತ್ತು ಬದ್ರಿನಾಥ ಟ್ರಸ್ಟ್ ಕಮಿಟಿಯವರು ಹಾಗೂ ಓಖೀಮಠದ ನಿವಾಸಿಗಳು ಪ್ರಯತ್ನ ನಡೆಸಿರುತ್ತಾರೆ. ಈ ವಿದ್ಯಾಪೀಠದಲ್ಲಿ ಸದ್ಯಃ ಲಿಂ॥ ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರ ಅಮೃತಶಿಲಾ ವಿಗ್ರಹವನ್ನು ಸ್ಥಾಪಿಸಿದ್ದಾರೆ.

ಇವರು ತಮ್ಮ ಆಡಳಿತ ಕಾಲದಲ್ಲಿಯೇ ಧಾರವಾಡ ಜಿಲ್ಲಾ ತಿಮ್ಮಾಪುರ ಗ್ರಾಮದ ಹಿರೇಮಠದ ಶ್ರೀ ವೇ॥ ಶಿವಮೂರ್ತಿ ಶಾಸ್ತ್ರಿಗಳವರಿಗೆ ವೈರಾಗ್ಯಸಿಂಹಾಸನದ ಚರಪಟ್ಟಾಧಿಕಾರವನ್ನು ಅನುಗ್ರಹಿಸಿ, ಶ್ರೀ ಚಿದ್ಘನಲಿಂಗ ಶಿವಾಚಾರ್ಯರೆಂಬ ನಾಮಕರಣವನ್ನು ಮಾಡಿದ್ದರು. ಇವರು ಜಿತೇಂದ್ರಿಯರೂ, ವಿದ್ಯಾವಂತರೂ, ಶಾಂತಸ್ವಭಾವದವರೂ ಆಗಿದ್ದರು. ಪೀಠದ ಶ್ರೇಯಸ್ಸಿಗಾಗಿ ದೇಶದ ನಾನಾಭಾಗಗಳಲ್ಲಿ ಸಂಚರಿಸಿ ಅಲ್ಪಕಾಲದಲ್ಲಿಯೇ ದಿ॥ ೧೬–೭–೧೯೪೭ರಂದು ಕೇದಾರದಲ್ಲಿಯೇ ಲಿಂಗೈಕ್ಯರಾದರು. ಶ್ರೀ ಚಿದ್ಘನಲಿಂಗರು ಶಿವಾಧೀನರಾದ ನಂತರ ಪುನಃ

ಶ್ರೀಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯ ಭಗವತ್ಪಾದರೇ ಪೀಠದ ಎಲ್ಲ ವ್ಯವಹಾರವನ್ನೂ ನಿರ್ವಹಿಸುತ್ತ ಮುಂದೆ ದಿ॥೨೩-೪-೧೯೪೫ರಂದು ಓಖೀಮಠದಲ್ಲಿಯೇ ಲಿಂಗೈಕ್ಯರಾದರು. ಇವರ ಸಮಾಧಿಯು ವಿದ್ಯಾಪೀಠದಲ್ಲಿಯೇ ಮಾಡಲ್ಪಟ್ಟಿದೆ.

ಲಿಂ। ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರಿಗೆ ಶ್ರೀ ವಿಶ್ವನಾಥಲಿಂಗ, ಶ್ರೀ ಕೈಲಾಸಲಿಂಗ, ಶ್ರೀ ಶಾಂತಲಿಂಗ ಮುಂತಾದ ಹಲವು ಜನ (ಚೇಲಾ) ಶಿಷ್ಯರಿದ್ದರು. ಇವರಲ್ಲಿ ಕೈಲಾಸಲಿಂಗರು ನಿಜಾಮ ಪ್ರಾಂತದ ಪುರಗಿರಿ ಕ್ಷೇತ್ರದ ಬೃಹನ್ಮಠದವರು. ಇವರ ತಂದೆಯ ಹೆಸರು ಪಂ। ಶಿವಲಿಂಗ ಶಿವಾಚಾರ್ಯರು. ಶ್ರೀ ಕೈಲಾಸಲಿಂಗರ ಮೊದಲಿನ ಹೆಸರು ಶ್ರೀ ಚಿದ್ಘನ ಶಿವಾಚಾರ್ಯರು. ಇವರು ಪುರಗಿರಿಯ ಪಟ್ಟಾಧ್ಯಕ್ಷರಾಗಿದ್ದರು. ಇವರು ಕಾಶಿಯ ಜಂಗಮವಾಡಿಮಠದ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದಲ್ಲಿಯೇ ವಾಸಿಸಿ ತರ್ಕ, ವ್ಯಾಕರಣ, ಸಾಂಖ್ಯ, ಯೋಗ, ವೇದಾಂತ ಮತ್ತು ಶಿವಸಿದ್ಧಾಂತಗಳಲ್ಲಿ ಅಪಾರ ಪಾಂಡಿತ್ಯವನ್ನು ಸಂಪಾದಿಸಿದರು. ಇವರು ತಮ್ಮ ವಿದ್ಯಾರ್ಥಿ ದಿಶೆಯಲ್ಲಿಯೇ ೧೯೨೯ರಲ್ಲಿ ವೃಷಭದೇವನಿಂದ ವಿರಚಿತ ಶೈವಭಾಷ್ಯದಿಂದ ಕೂಡಿದ "ಮಹಾನಾರಾಯಣೋಪನಿಷತ್" ಎಂಬ ಅಮೂಲ್ಯ ಗ್ರಂಥವನ್ನು ಸಂಶೋಧಿಸಿ ಶ್ರೀ ಕೇದಾರನಾಥ ಶಿವತತ್ತ್ವ ಗ್ರಂಥಮಾಲೆಯ ಪ್ರಥಮ ಪುಷ್ಪವನ್ನಾಗಿ ಮುದ್ರಿಸಿ ಪ್ರಕಾಶನಗೊಳಿಸಿದ್ದಾರೆ.

ಇವರ ಪಾಂಡಿತ್ಯವನ್ನು ನೋಡಿ ಲಿಂ। ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರು ಇವರನ್ನು ತಮ್ಮ ಶಿಷ್ಯರನ್ನಾಗಿ ಮಾಡಿಕೊಂಡು ಕೈಲಾಸಲಿಂಗ ಎಂಬ ಹೆಸರನ್ನು ಅನುಗ್ರಹಿಸಿದ್ದರು. ಪಂ॥ ಕೈಲಾಸಲಿಂಗರು ಕ್ರಿ.ಶ. ೧೯೫೬ರಲ್ಲಿ "ಉಜ್ಜಯಿನಿ ಲಿಂ। ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು" ಎಂಬ ಚರಿತ್ರೆಯನ್ನು ಕನ್ನಡದಲ್ಲಿ ಬರೆದು ಪ್ರಕಾಶನಗೊಳಿಸಿದ್ದಾರೆ. ಕಾರಣಾಂತರದಿಂದ ಕೇದಾರವನ್ನು ಬಿಟ್ಟು ಪುನಃ ತಮ್ಮ ಮೂಲಸ್ಥಳವಾದ ಪುರಗಿರಿಯಲ್ಲಿಯೇ ಲಿಂಗೈಕ್ಯರಾದರು.

ಲಿಂ। ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರ ಮತ್ತೋರ್ವ ಶಿಷ್ಯರಾದ ಶ್ರೀಶಾಂತಲಿಂಗರು ಬೆಳಗಾಂವ ಜಿಲ್ಲಾ ಮುತ್ತನಾಳ ಹಿರೇಮಠದ ಪಟ್ಟಾಧ್ಯಕ್ಷರಾದರು. ಕೊನೆಗೆ ಉಳಿದಿರುವ ಶ್ರೀ ವಿಶ್ವನಾಥಲಿಂಗರೇ ಕೇದಾರ ಪೀಠದ ೩೨೧ನೆಯ "ರಾವಲ್"ರಾದರು. ಇವರು ಧಾರವಾಡ ಜಿಲ್ಲಾ ಹಾವೇರಿಯ ನಡುವಿನಮಠದವರು. ಲಿಂ. ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರ ತರುವಾಯ ಶ್ರೀ ವಿಶ್ವನಾಥಲಿಂಗರು ೨೧ ವರ್ಷ ಪರ್ಯಂತ ಕೇವಲ 'ರಾವಲ್'ರಾಗಿಯೇ ಉಳಿದರು. ಇವರಿಗೆ ಜಗದ್ಗುರು ಪಟ್ಟಾಧಿಕಾರವಾಗಲಿಲ್ಲ. ಮುಂದೆ ಇವರು ತಮ್ಮ ಮೂಲಸ್ಥಾನವಾದ ಹಾವೇರಿಯಲ್ಲಿಯೇ ಲಿಂಗೈಕ್ಯರಾದರು.

ಹೀಗೆ ರಾವಲ್ ವಿಶ್ವನಾಥಲಿಂಗರು ಲಿಂಗೈಕ್ಯರಾದ ನಂತರ ಲಿಂ॥ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರ ಶಿಷ್ಯರಲ್ಲಿಯೇ ಹಳಬರಾದ ಮುತ್ತನಾಳ ಹಿರೇಮಠದ ಶ್ರೀ ಷ। ಬ್ರ। ಶಾಂತಲಿಂಗ ಶಿವಾಚಾರ್ಯರು ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಹಾಗೂ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ಪ್ರಸಾದ ಹಸ್ತದಿಂದ ದಿ॥೧೦-೬-೧೯೬೬ರಂದು ಜಗದ್ಗುರು ಪಟ್ಟಾಧಿಕಾರವನ್ನು ಓಖೀಮಠದಲ್ಲಿ ಹೊಂದಿ 'ಹಿಮವತ್ಕೇದಾರ ವೈರಾಗ್ಯಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ರಾವಲ್ ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿ'ಗಳೆಂಬ ಅಭಿಧಾನದಿಂದ ಕೇದಾರ ಪೀಠದ ೩೨೨ನೆಯ ಜಗದ್ಗುರುಗಳಾದರು. ಇವರು ೧೪ ವರ್ಷ ಪೀಠದ ಸೇವೆಯನ್ನು ಮಾಡಿ ದಿ॥ ೬-೨-೧೯೮೦ರಂದು ಮುತ್ನಾಳ ಹಿರೇಮಠದಲ್ಲಿಯೇ ಲಿಂಗೈಕ್ಯರಾದರು. ಇವರ ಸಮಾಧಿಯು ಮುತ್ನಾಳದಲ್ಲಿಯೇ ಇದೆ.

ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಲಿಂಗೈಕ್ಯರಾದ ನಂತರ ಪುನಃ ಈ ಪೀಠವು ೫ ವರ್ಷಗಳ ಪರ್ಯಂತ ಅನಾಯಕವಾಗಿಯೇ ಉಳಿಯುವ ಪ್ರಸಂಗ ಬಂದೊದಗಿತು. ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಕೃಪಾಶೀರ್ವಾದ ಹಾಗೂ ಭಕ್ತರ ಅಪಾರ ಸಹಾಯ-ಸಹಕಾರಗಳ ಫಲವಾಗಿ ಕೇದಾರ ಪೀಠಕ್ಕೊಬ್ಬ ಅಧಿಪತಿಗಳು ಲಭ್ಯವಾದರು. ಶಾ.ಶ. ೧೯೦೭ ಕ್ರೋಧನನಾಮ ಸಂವತ್ಸರ ಜ್ಯೇಷ್ಠ ವದ್ಯ ಪಂಚಮಿ ದಿ॥ ೭-೬-೧೯೮೫ ಶುಕ್ರವಾರ ದಿವಸ ಕಾಶೀ ಜಗದ್ಗುರುಗಳವರ ಮತ್ತು ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳ ಅಮೃತಹಸ್ತದಿಂದ ಜಗದ್ಗುರುತ್ವವನ್ನು ಹೊಂದಿದ ಶ್ರೀ ಷ। ಬ್ರ। ಶಂಭುಲಿಂಗ ಶಿವಾಚಾರ್ಯರು, ಶ್ರೀ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಎಂಬ ಅಭಿಧಾನದಿಂದ ಕೇದಾರ ಪೀಠದ ೩೨೩ನೆಯ ಜಗದ್ಗುರುಗಳಾಗಿ ಅಧಿಕಾರವನ್ನು ಪಡೆದರು.

ರಾವಲ್ ಶ್ರೀ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಬಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನ "ಗುಳಬಾಳ" ಎಂಬ ಗ್ರಾಮದ ಶ್ರೀ ವೇ॥ ಬಸವಲಿಂಗಯ್ಯನವರು ಹಾಗೂ ಸೌ॥ ಭಾಗೀರಥಿಬಾಯಿ ಈ ಮಾಹೇಶ್ವರ ದಂಪತಿಗಳ ಪವಿತ್ರ ಗರ್ಭದಲ್ಲಿ ಜನಿಸಿದರು. ಇವರ ಹೆಸರು ಸಿದ್ಧರಾಮಯ್ಯ ಎಂಬುದಾಗಿತ್ತು.

ಇವರು ಬಾಲ್ಯದಲ್ಲಿಯೇ ಮನೆಯನ್ನು ತ್ಯಾಗಮಾಡಿ ಸೊಲ್ಲಾಪುರದ ಶ್ರೀಮದ್ವೀರಶೈವ ಗುರುಕುಲ (ಹೊಟಗೀಮಠ)ದಲ್ಲಿ ಸ್ವಲ್ಪ ಸಂಸ್ಕೃತಾಧ್ಯಯನವನ್ನು ಮಾಡಿ ಕೇದಾರಕ್ಕೆ ಹೋದರು. ಆಗ ೧೯೬೩ರಲ್ಲಿ ಅಂದಿನ ರಾವಲ್‌ರಾಗಿದ್ದ ಲಿಂ। ವಿಶ್ವನಾಥಲಿಂಗರ ಚೇಲಾ (ಶಿಷ್ಯ) ಆಗಿ ಶ್ರೀ ಸಿದ್ಧರಾಮಯ್ಯನವರು "ಶ್ರೀ ಸಿದ್ಧೇಶ್ವರಲಿಂಗ" ಎಂಬ ಹೆಸರನ್ನು ಪಡೆದು ಆರು ತಿಂಗಳ ಪರ್ಯಂತರವಾಗಿ ಶ್ರೀ ಕೇದಾರನಾಥನ ಪೂಜೆಯನ್ನು ಮಾಡಿ ಆರೋಗ್ಯ ಸರಿಯಿಲ್ಲದ ಕಾರಣ ಪುನಃ ಸೊಲ್ಲಾಪುರಕ್ಕೆ ಬಂದರು.

ಸೊಲ್ಲಾಪುರದ ಶ್ರೀ ಷ॥ ಬ್ರ॥ ತಪೋರತ್ನಂ ಯೋಗಿರಾಜೇಂದ್ರ ಶಿವಾಚಾರ್ಯ ಸ್ವಾಮಿಗಳ ಆಶ್ರಯದಲ್ಲಿ ಆರೋಗ್ಯ ಸುಧಾರಣೆಯಾದ ಬಳಿಕ ವಿಶೇಷ ಕಾರ್ಯಕ್ರಮದ ನಿಮಿತ್ತವಾಗಿ ಮಹಾರಾಷ್ಟ್ರದ ಬರದಾಪುರ ಸಂಸ್ಥಾನ ಮಠಕ್ಕೆ ಮಠಾಧ್ಯಕ್ಷರ ಜೊತೆಗೆ ಹೋಗಿದ್ದರು. ಅಂಬಾಜೋಗಾಯಿ ಭಕ್ತ ಪ್ರಮುಖರು ಶ್ರೀ ಸಿದ್ಧೇಶ್ವರಲಿಂಗರ ವ್ಯಕ್ತಿತ್ವಕ್ಕೆ ಮಾರುಹೋದರು. ಅವರೆಲ್ಲರ ಅಪೇಕ್ಷೆಯಂತೆ ಅಂಬಾಜೋಗಾಯಿಯ ಶ್ರೀ ಶಂಭುಲಿಂಗ ಸಂಸ್ಥಾನ ಮಠಕ್ಕೆ ೧೯೭೦ರಲ್ಲಿ ಶ್ರೀ ರಂಭಾಪುರಿ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಮಾಜಲಗಾಂವದ ಶ್ರೀ ಷ॥ಬ್ರ॥ ಪ್ರಭು ಪಂಡಿತಾರಾಧ್ಯ ಶಿವಾಚಾರ್ಯರಿಂದ ಪಟ್ಟಾಧಿಕಾರವನ್ನು ಹೊಂದಿ ಶ್ರೀ ಷ॥ಬ್ರ॥ ಶಂಭುಲಿಂಗ ಶಿವಾಚಾರ್ಯರೆಂಬ

ನೂತನ ಅಭಿಧಾನವನ್ನು ಪಡೆದರು.

ನಂತರ ಹೆಚ್ಚಿನ ವ್ಯಾಸಂಗಕ್ಕಾಗಿ ಕಾಶಿಗೆ ಬಂದು ಅಲ್ಲಿಯ ಶ್ರೀ ವಿಶ್ವಾರಾಧ್ಯ ಗುರುಕುಲದ ವಿದ್ಯಾರ್ಥಿಯಾಗಿದ್ದು ಸಾಹಿತ್ಯಾಚಾರ್ಯ ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಮುಂದೆ ರಾವಲ್ ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಲಿಂಗೈಕ್ಯರಾದ ನಂತರ ವರ್ತಮಾನ ಕೇದಾರ ಪೀಠದ ಚೇಲಾಗಳಲ್ಲಿ ಇವರೇ ಹಳಬರೂ, ವಿದ್ಯಾವಂತರೂ ಮತ್ತು ಯೋಗ್ಯತಾ ಸಂಪನ್ನರೂ ಆಗಿದ್ದ ಕಾರಣ, ಕೇದಾರ ಮಂದಿರದ ಟ್ರಸ್ಟ್ ಕಮಿಟಿಯವರು ಇವರನ್ನೇ ಚುನಾಯಿಸಿದರು. ಬಳಿಕ ೧೯೮೩ನೆಯ ಇಸವಿಯ ವಿಜಯದಶಮಿ ದಿವಸ ಟೆಹರೀ ಮಹಾರಾಜರು ಇವರಿಗೆ ತಿಲಕೋತ್ಸವ ನೆರವೇರಿಸಿದರು. "ರಾವಲ್" ಎಂಬ ಪದವಿಯಿಂದ ವಿಭೂಷಿತರಾದರು.

ಶ್ರೀ ಕೇದಾರ ಪೀಠವು ಉತ್ತರ ಪ್ರದೇಶದ ಕೇದಾರನಾಥ ಟ್ರಸ್ಟ್ ಕಮಿಟಿಯ ಆಡಳಿತಕ್ಕೊಳಪಟ್ಟಿರುವುದರಿಂದ ಹೊಸದಾಗಿ ಪೀಠಾಧಿಕಾರ ಮಾಡುವಾಗ ಅನವಶ್ಯಕವಾದ ಕಾನೂನಿನ ಅಡೆತಡೆಗಳು ಬರುತ್ತಿರುತ್ತವೆ. ರಾವಲ್ ಶ್ರೀ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಪಟ್ಟಾಧಿಕಾರದಲ್ಲಿಯೂ ಅನೇಕ ಅಡೆತಡೆಗಳು ಬಂದವು. ಆದರೂ ಶ್ರೀ ಕಾಶೀ ಜಗದ್ಗುರುಗಳ ಕೃಪಾಶೀರ್ವಾದದಿಂದ ಅವೆಲ್ಲವೂ ದೂರವಾಗಿ ಕಾರ್ಯಕ್ರಮ ಸರ್ವಾಂಗ ಸುಂದರವಾಗಿ ನೆರವೇರಿತು. ಹೀಗೆ ನಮ್ಮ ಕೇದಾರ ಪೀಠದ ಆಚಾರ್ಯರು ಅನಾದಿಕಾಲದಿಂದಲೂ ಹಿಮಾಲಯದ ಉತ್ತರಖಂಡದಲ್ಲಿ ಆಧ್ಯಾತ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಬಹಳಷ್ಟು ಪ್ರಗತಿಯನ್ನು ಸಾಧಿಸಿದ್ದಾರೆ.

ಈ ಪೀಠದ ಐತಿಹಾಸಿಕ ಸಂಗತಿಗಳನ್ನು ಪರಿಶೀಲಿಸುವ ಅಪೇಕ್ಷೆಯುಳ್ಳವರು "ಗಢವಾಲ ಕಾ ಇತಿಹಾಸ" ಹಾಗೂ ರಾಮದಾಸಗೌಡರು ರಚಿಸಿದ "ಹಿಂದುತ್ವ" ಎಂಬ ಹಿಂದೀ ಭಾಷೆಯ ಗ್ರಂಥಗಳನ್ನು ಅವಶ್ಯವಾಗಿ ಅವಲೋಕಿಸಬೇಕು.

ಪೂಜ್ಯ ಶ್ರೀ ಜಗದ್ಗುರುಗಳು ಹದಿನೇಳು ವರುಷಗಳ ಪರ್ಯಂತರ ಭಾರತ ದೇಶದ ಅನೇಕ ರಾಜ್ಯಗಳಲ್ಲಿ ಏಕಾಂಗಿಯಾಗಿ ಹಾಗೂ ಸಮಾನ ಪೀಠಾಚಾರ್ಯರೊಂದಿಗೆ ಸಂಚರಿಸಿ ತಮ್ಮ ಪ್ರಭಾವ, ಆಶೀರ್ವಚನ ಮತ್ತು ಪೂಜಾನುಷ್ಠಾನಗಳಿಂದ ಧರ್ಮ ಜಾಗೃತಿಗೈದಿದ್ದಾರೆ. ಆದರೆ ಅವರಿಗೆ ಮೇಲಿಂದ ಮೇಲೆ ದೇಹಾಲಸ್ಯವುಂಟಾಗಿ ಅನಾರೋಗ್ಯ ಕಾಡತೊಡಗಿತು. ಆದ್ದರಿಂದ ಇವರು ಸಮರ್ಥ ಪೀಠಾಚಾರ್ಯರನ್ನು ನೇಮಕ ಮಾಡಿ ವಿಶ್ರಾಂತ ಜೀವನ ನಡೆಸಲು ನಿರ್ಧರಿಸಿದರು.

ಕೇದಾರಕ್ಕಾಧಾರ ನಿರೀಕ್ಷೆ :

ಶ್ರೀಮತ್ ಹಿಮವತ್ ಕೇದಾರವು ಹೆಸರಿಗೆ ತಕ್ಕಂತೆ ವೈರಾಗ್ಯದ ಸಂಕೇತವೇ ಆಗಿದೆ. ಆ ಕ್ಷೇತ್ರವು ಹಿಮಾಲಯ ಪರ್ವತ ಶ್ರೇಣಿಯಲ್ಲಿರುವುದರಿಂದಲೋ ಏನೋ ಅನೇಕಸಲ ಆ ಪೀಠವು ಅನಾಥ ಪ್ರಜ್ಞೆಯನ್ನು ಅನುಭವಿಸುತ್ತದೆ. ಜಗದ್ಗುರು ರಾವಲ್ ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ೧೯೮೩ರ ವಿಜಯದಶಮಿಯ ಶುಭಮುಹೂರ್ತದಲ್ಲಿ ಟೆಹರಿ ಮಹಾರಾಜರಿಂದ ತಿಲಕೋತ್ಸವ ಮಾಡಿಸಿಕೊಂಡು ರಾವಲ್ ಪದವಿ ಭೂಷಿತರಾದರು, ಸುಮಾರು ಹದಿನೇಳು ವರ್ಷಗಳ ಕಾಲ ವೈರಾಗ್ಯ ಪೀಠಾಧಿಪತಿಗಳಾಗಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರ, ಉತ್ತರಪ್ರದೇಶ, ಮಧ್ಯಪ್ರದೇಶ ಮುಂತಾದ ಬೇರೆಬೇರೆ ರಾಜ್ಯಗಳಲ್ಲಿ ಸಮಾನ ಪೀಠಾಚಾರ್ಯರೊಂದಿಗೆ ಹಾಗೂ ವೈಯಕ್ತಿಕವಾಗಿ ಧರ್ಮಜಾಗೃತಿ ಯಾತ್ರೆ ಕೈಗೊಂಡು ಧರ್ಮದ ಉಳಿವು-ಬೆಳವಣಿಗೆಗಾಗಿ ಶ್ರಮಿಸುತ್ತಲಿದ್ದರು.

ಆದರೆ ಅನಾರೋಗ್ಯವು ಅವರನ್ನು ಬೆಂಬತ್ತಿ ಕಾಡತೊಡಗಿತು. ಶ್ರೀ ಪೀಠದ ವಿಧಿವತ್ಪೂರ್ವಕ ಕಾರ್ಯಕ್ರಮ ನಡೆಸಿಕೊಡುವುದು, ಅಲ್ಲಿ ವಾಸಮಾಡುವುದು ತುಂಬಾ ಕಷ್ಟಸಾಧ್ಯವೆನಿಸಿತು. ಆದ್ದರಿಂದ ಅವರು ಸಮಾನ ಪೀಠಾಚಾರ್ಯರ ಜೊತೆಗೆ ಸಮಾಲೋಚಿಸಿ ತಮ್ಮ ಜೀವಿತ ಕಾಲದಲ್ಲಿಯೇ ಓರ್ವ ಸಮರ್ಥ ವ್ಯಕ್ತಿಯನ್ನು ವೈರಾಗ್ಯ ಪೀಠಾಧೀಶ್ವರರನ್ನಾಗಿ ನಿಯುಕ್ತಿಗೊಳಿಸಲು ನಿರ್ಧರಿಸಿದರು. ಸುದೀರ್ಘ ಸಮಾಲೋಚನೆಯ ನಂತರ, ಪರಂಪರೆಯಂತೆ ಅವರ ಚೇಲ (ಶಿಷ್ಯ)ಗಳಲ್ಲಿ ಒಬ್ಬರಾದ ನಾಂದೇಡ ಜಿಲ್ಲೆಯ ಕಂಧಾರ ತಾಲ್ಲೂಕಿನ ಶಿರಾಡೋಣ ಸಂಸ್ಥಾನಮಠದ ಶ್ರೀ ಷ|| ಬ್ರ|| ಷಡಕ್ಷರ ಶಿವಾಚಾರ್ಯ ಸ್ವಾಮಿಗಳನ್ನು ಆಯ್ಕೆ ಮಾಡಿದರು. ಶ್ರೀಗಳವರು ಓರ್ವ ಪ್ರಭಾವೀ ಮಠಾಧೀಶರಾಗಿದ್ದಾರೆ. ೧-೧೨-೧೯೭೭ರಿಂದ ಶಿರಾಡೋಣ ಪಟ್ಟಾಧ್ಯಕ್ಷರಾಗಿದ್ದು ಶ್ರೀ ಮಠದ ಅಭಿವೃದ್ಧಿಗೆ ಶ್ರಮಿಸಿದವರಾಗಿದ್ದಾರೆ. ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಕ್ಷೇತ್ರಗಳಲ್ಲಿ ವಿಶಿಷ್ಟ ಕಾರ್ಯಗೈದು ಜನಪ್ರಿಯ ಪಟ್ಟಾಧ್ಯಕ್ಷರೆನಿಸಿದ್ದಾರೆ. ಅದನ್ನರಿತ ಪಂಚಪೀಠಾಚಾರ್ಯರು ಹರಪನಹಳ್ಳಿಯ ತೆಗ್ಗಿನಮಠದಲ್ಲಿ ದಿನಾಂಕ ೨೬-೭-೨೦೦೦ದಂದು ಸಮಾವೇಶಗೊಂಡು ಅನೇಕ ಶಿವಾಚಾರ್ಯರ ಸಮ್ಮುಖದಲ್ಲಿ ಶಿರಾಡೋಣ ಶ್ರೀಗಳವರನ್ನೇ ಭಾವೀ ಕೇದಾರ ಪೀಠಾಧ್ಯಕ್ಷರನ್ನಾಗಿ ಒಪ್ಪಿಕೊಂಡು ಆಶೀರ್ವದಿಸಿದರು. ಅಂದಿನ ಸಭೆಯಲ್ಲಿ ೧೩-೧೦-೨೦೦೦ನೇ ಶುಕ್ರವಾರದ ಶುಭದಿನದಂದು ಪಟ್ಟಾಧಿಕಾರ ಮಹೋತ್ಸವ ನೆರವೇರಿಸಲು ನಿರ್ಧರಿಸಲಾಯಿತು. ಅಂದು ಅವರ ವ್ಯಕ್ತಿತ್ವವನ್ನು ಕುರಿತು ಮಾತನಾಡಿದ ಶಿವಾಚಾರ್ಯರು ಹಾಗೂ ಪೀಠಾಚಾರ್ಯರು ಶಿರಾಡೋಣ ಶ್ರೀಗಳವರು ಪ್ರಭಾವೀ ವ್ಯಕ್ತಿತ್ವಹೊಂದಿದ್ದು ವೈರಾಗ್ಯ ಪೀಠದ ಸರ್ವಾಂಗೀಣ ಪ್ರಗತಿಗೆ ಶ್ರಮಿಸಬಲ್ಲರು ಎಂಬ ಆಶಯವನ್ನು ವ್ಯಕ್ತಪಡಿಸಿದರು. ಅಂದಿನ ಸಭೆಯಲ್ಲಿ ಭಾಗಿಯಾದುದು ನನ್ನ ಪುಣ್ಯ ವಿಶೇಷವೇ ಸರಿ.

ಶ್ರೀಗಳವರು ನಡೆದುಬಂದ ದಾರಿ :

ಬಿಜಾಪುರ ಜಿಲ್ಲೆಯ ಸಿಂದಗಿ ತಾಲ್ಲೂಕಿನ ಹೂವಿನಹಳ್ಳಿಯಲ್ಲಿ ಸಂಗಯ್ಯ ಎಂಬ ಹೂವೊಂದು ಅರಳಿ ಬಂತು. ತಾಯಿ ಸಂಗನಬಸಮ್ಮ, ತಂದೆ ಶ್ರೀ ವೇ|| ರಾಚೋಟಯ್ಯನವರು ಈ ಮಗುವಿಗೆ ಜನ್ಮವಿತ್ತವರು. ಆ ದಂಪತಿಗಳಿಗೆ ೬ ಗಂಡುಮಕ್ಕಳು, ೩ ಜನ ಹೆಣ್ಣುಮಕ್ಕಳು. ಆ ತುಂಬುಸಂಸಾರದಲ್ಲಿ ಸಂಗಯ್ಯ ಜನಿಸಿದ್ದು, ೧೯೫೬ರ ಜೂನ್ ೧೮ರಂದು. ಹೂವಿನಹಳ್ಳಿಯಲ್ಲಿಯೇ ಪ್ರಾಥಮಿಕ ಅಭ್ಯಾಸ ಪಡೆದನು. ಮುಂದೆ ಸೊಲ್ಲಾಪುರದ ಹೊಟಗಿಮಠದ ಶ್ರೀಮದ್ ವೀರಶೈವ ಗುರುಕುಲದಲ್ಲಿ ಆಶ್ರಯ ಪಡೆದು ಅಧ್ಯಯನ ಮುಂದುವರಿಸಿದನು. ಪ್ರೌಢ ಶಿಕ್ಷಣದೊಂದಿಗೆ ಗುರುಕುಲದಲ್ಲಿ ಸಂಸ್ಕೃತ, ವೇದ, ಜೋತಿಷ್ಯ ಶಾಸ್ತ್ರಗಳ ಅಧ್ಯಯನವು ನಡೆಯಿತು.

ಶಿರಾಡೋಣ ಪಟ್ಟಾಧ್ಯಕ್ಷರಾಗಿದ್ದ ಶ್ರೀ ಷ||ಬ್ರ|| ದಶಮುಖ ಶಿವಾಚಾರ್ಯರು ಶಾಪಾನುಗ್ರಹ ಶಕ್ತರು, ಸಮರ್ಥರು, ಜ್ಞಾನಿಗಳು. ಅವರ ಶ್ರೀ ದೃಷ್ಟಿ ಈ ಬಾಲಕನ ಮೇಲೆ ಬಿತ್ತು. ಗುರುಕೃಪೆಗೆ

ಪಾತ್ರನಾದ ಬಾಲ ಸಂಗಯ್ಯನಿಗೆ ೧೬ನೇ ವಯಸ್ಸಿನಲ್ಲಿಯೇ ಶಿರಾಡೋಣದ ಕಾಶೀ ಶಾಖಾಮಠದ ಪಟ್ಟಾಧ್ಯಕ್ಷರಾಗುವ ಸುಯೋಗ ಲಭಿಸಿತು. ಸಂಗಯ್ಯ ಗುರುವಿನ ಕರುಣಕಟಾಕ್ಷದಿಂದ ಶ್ರೀ ಷ॥ ಬ್ರ॥ ಷಡಕ್ಷರ ಶಿವಾಚಾರ್ಯ ಎನಿಸಿದರು. ಜ್ಞಾನದ ದಾಹ ನೀಗಿರಲಿಲ್ಲವಾದ್ದರಿಂದ ತರುಣ ಗುರುವರೇಣ್ಯರು ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸನ್ನಿಧಿಯವರ ಅಪ್ಪಣೆಯಂತೆ ಕಾಶಿಯ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದ ವಿದ್ಯಾರ್ಥಿಯಾದರು. ೧೯೭೪ರಿಂದ ೧೯೮೩ರ ಅವಧಿಯಲ್ಲಿ ಡಾ॥ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮುಂದುವರಿಸಿ, ಶಕ್ತಿವಿಶಿಷ್ಟಾದ್ವೈತ ಆಚಾರ್ಯ ಪದವೀಭೂಷಿತರಾದರು. ಮರಳಿ ಶಿರಾಡೋಣಕ್ಕೆ ಆಗಮಿಸಿದ ನಂತರ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಕಾರ್ಯಕ್ಷೇತ್ರ – ಧರ್ಮಕ್ಷೇತ್ರ ಃ

ನಾಂದೇಡವು ಮಹಾರಾಷ್ಟ್ರ ರಾಜ್ಯದ ಒಂದು ಮಹಾನಗರಿ ಹಾಗೂ ಜಿಲ್ಲಾ ಕೇಂದ್ರವಾಗಿದೆ. ಅದನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಭೀಮಾಶಂಕರ ನಗರದ ಒಂದು ನಿವೇಶನದಲ್ಲಿ ೧೯೮೭ರಲ್ಲಿ ದಶಮುಖ ಆಶ್ರಮವನ್ನು ಸ್ಥಾಪಿಸಿದರು. ಅದರ ಆಶ್ರಯದಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ನೀಡುವ ವಿದ್ಯಾಸಂಸ್ಥೆಗಳನ್ನು ಪ್ರಾರಂಭಿಸಿದರು.

ಸಂಗಮೇಶ್ವರ ಗುರುಕುಲದಲ್ಲಿ ಸನಾತನ ಧರ್ಮರಕ್ಷಣೆಗಾಗಿ ಸಾಂಪ್ರದಾಯಿಕ ಶಿಕ್ಷಣ ಹಾಗೂ ತರಬೇತಿ ನೀಡುವ ವ್ಯವಸ್ಥೆ ಮಾಡಿದರು. ನಾಂದೇಡದ ದಶಮುಖ ಆಶ್ರಮದ ನಿರ್ಮಾಣ ಹಾಗೂ ಅಭಿವೃದ್ಧಿಗಾಗಿ ಸುಮಾರು ೮೦ ಲಕ್ಷ ರೂಪಾಯಿಗಳನ್ನು ಸಮಾಜದ ಉದಾರ ದಾನಿಗಳಿಂದ ಸಂಗ್ರಹಿಸಿ ಪವಾಡಸದೃಶ ಕಾರ್ಯವೆಸಗಿದ್ದಾರೆ. ಆ ಆಶ್ರಮಕ್ಕೆ ಕಳೆದ ೨೦ ವರ್ಷಗಳಲ್ಲಿ ಪಂಚಪೀಠಗಳ ಮಹಾಚಾರ್ಯರನ್ನು ದಯಮಾಡಿಸಿಕೊಂಡು ಅನೇಕ ವೈವಿಧ್ಯಪೂರ್ಣ ಕಾರ್ಯಕ್ರಮಗಳನ್ನು ಜಾರಿಗೊಳಿಸಿದ್ದಾರೆ. ಅದರಿಂದ ಆ ಭಾಗದ ಲಕ್ಷಾಂತರ ಭಕ್ತರಿಗೆ ಪರಂಪರೆಯ ಅರಿವು, ಘನತೆ, ಗೌರವಗಳ ಪರಿಚಯವಾಗಿದೆ.

ಶ್ರೀಗಳವರು ಸ್ವತಃ ಅನೇಕ ಗ್ರಾಮಗಳಲ್ಲಿ ಧರ್ಮಜಾಗೃತಿ ಯಾತ್ರೆ ಕೈಗೊಂಡು ಧರ್ಮಸಭೆ ಏರ್ಪಡಿಸಿ, ವ್ಯಸನಮುಕ್ತಿ ಆಂದೋಳನಗಳನ್ನು ಕಳೆದ ೨೫ ವರ್ಷಗಳಿಂದ ನೆರವೇರಿಸುತ್ತಾ ಬಂದಿದ್ದಾರೆ. ಕಳೆದ ೮–೧೦ ವರ್ಷಗಳಿಂದ ಅಲ್ಲಲ್ಲಿ ಉಚಿತ ಸಾಮೂಹಿಕ ವಿವಾಹ ಸಮಾರಂಭಗಳನ್ನು ಏರ್ಪಡಿಸಿದ ಹೆಗ್ಗಳಿಕೆ ಶ್ರೀಗಳವರಿಗೆ ಸಲ್ಲುತ್ತದೆ. ಪ್ರತಿವರ್ಷವೂ ಶ್ರಾವಣ ಮಾಸದಲ್ಲಿ ಒಂದು ತಿಂಗಳ ಪರ್ಯಂತ ಲಿಂಗಪೂಜಾನುಷ್ಠಾನವನ್ನು ಲೋಕಕಲ್ಯಾಣಾರ್ಥವಾಗಿ ಬೇರೆಬೇರೆ ಭಾಗಗಳಲ್ಲಿ ನಡೆಸುತ್ತಾ ಬಂದಿದ್ದಾರೆ.

ಕಾಶೀ ಕ್ಷೇತ್ರ, ಔಂಡ ನಾಗನಾಥ, ಡಾಕಿಣ್ಯದ ಭೀಮಶಂಕರ, ಹಿಮವತ್ ಕೇದಾರ, ಶ್ರೀಶೈಲ, ಉಜ್ಜಯಿನಿ–ಹೀಗೆ ಎಲ್ಲ ಜ್ಯೋತಿರ್ಲಿಂಗ ನಿವಾಸಗಳಲ್ಲಿ ತಿಂಗಳ ಪರ್ಯಂತ ಅನುಷ್ಠಾನಗೈದ ಪುಣ್ಯಪುರುಷರು ಶಿರಾಡೋಣ ಶ್ರೀಗಳವರು ಎಂಬ ಪ್ರತೀತಿಗೆ ಪಾತ್ರರಾಗಿದ್ದಾರೆ. ಮರಾಠಿ, ಸಂಸ್ಕೃತ, ಹಿಂದೀ ಹಾಗೂ ಕನ್ನಡ ಭಾಷೆಗಳಲ್ಲಿ ನಿರರ್ಗಳವಾಗಿ ಉಪದೇಶ ನೀಡಬಲ್ಲವರಾದ್ದರಿಂದ ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ, ಧರ್ಮಜಾಗೃತಿ ಕಾರ್ಯ ಕೈಗೊಂಡಿದ್ದಾರೆ.

ಜಗದ್ಗುರುತ್ವದ ಉತ್ತರದಾಯಿತ್ವ ಃ

ಕಳೆದ ೨೦೦೦ನೆಯ ಅಕ್ಟೋಬರ್ ೧೩ ರಂದು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ದಿವ್ಯ ಸನ್ನಿಧಾನದಲ್ಲಿ ನೂರಾರು ಹರ–ಗುರು–ಚರಮೂರ್ತಿಗಳ ಸಮ್ಮುಖದಲ್ಲಿ, ಸಹಸ್ರಾರು ಭಕ್ತರ ಉಪಸ್ಥಿತಿಯಲ್ಲಿ ಶ್ರೀ ಷಬ್ರಷಡಕ್ಷರ ಶಿವಾಚಾರ್ಯರು ವೈರಾಗ್ಯ ಪೀಠಾರೋಹಣಗೈದು 'ಕೇದಾರ ಜಗದ್ಗುರು' ಎನಿಸಿದರು. ಶ್ರೀ ಜಗದ್ಗುರು ಪಂಚಪೀಠಾಧೀಶ್ವರರು ಐವರೂ ಸಾನ್ನಿಧ್ಯವನ್ನು ದಯಪಾಲಿಸಿದ ಮೊಟ್ಟಮೊದಲ ಕಾರ್ಯಕ್ರಮವು ಶ್ರೀ ಓಖೀಮಠದಲ್ಲಿ ನೆರವೇರಿದ್ದು, ಇದೇ ಪ್ರಪ್ರಥಮವೆಂಬ ದಾಖಲೆ ಸ್ಥಾಪಿಸಿದೆ. ಸಾಮಾನ್ಯವಾಗಿ ಒಬ್ಬಿಬ್ಬರು ಪೀಠಾಚಾರ್ಯರು ಮಾತ್ರ ಇದುವರೆಗೆ ಈ ಕಾರ್ಯಕ್ರಮ ನೆರವೇರಿಸಿಕೊಡುತ್ತಿದ್ದರು. ಹೀಗೆ ಇವರ ಕಾಲದಲ್ಲಿ ಒಂದು ನೂತನ ದಾಖಲೆ ಸ್ಥಾಪಿತವಾಗಿದೆ.

ಶ್ರೀ ಜಗದ್ಗುರು ರಾವಲ್ ಸಿದ್ಧೇಶ್ವರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಕಿರೀಟ ಧಾರಣ, ಮುದ್ರಾಧಾರಣಾದಿ ವಿಧಿವಿಧಾನಗಳನ್ನು ಸಮಾನ ಪೀಠಾಚಾರ್ಯರ ದಿವ್ಯ ಸನ್ನಿಧಾನದಲ್ಲಿ ನೆರವೇರಿಸಿ ಇವರಿಗೆ "ಶ್ರೀಮತ್ ಹಿಮವತ್ ಕೇದಾರ ವೈರಾಗ್ಯ ಸಿಂಹಾಸನಾಧೀಶ್ವರ ರಾವಲ್ ಶ್ರೀ ೧೦೦೮ ಜಗದ್ಗುರು ಭೀಮಶಂಕರಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು" ಎಂಬ ನೂತನ ಅಭಿಧಾನವನ್ನು ದಯಪಾಲಿಸಿದರು. ಅಂದಿನ ಧರ್ಮಸಭೆಯಲ್ಲಿ ನೂತನ ಕೇದಾರ ಜಗದ್ಗುರುಗಳವರು ಮೂಲಪೀಠದಲ್ಲಿ ಪ್ರತಿವರ್ಷವೂ ಅಕ್ಟೋಬರ್ ಹಾಗೂ ಮೇ ತಿಂಗಳ ಪೂರ್ತಿ ವಾಸ್ತವ್ಯ ಮಾಡಿ ಮೂಲಪೀಠದ ಅಭಿವೃದ್ಧಿಗಾಗಿ ಶ್ರಮಿಸುವ ಪಣತೊಟ್ಟರು. ಓಖೀಮಠವು ಜೀರ್ಣಶೀರ್ಣವಾಗಿದ್ದು ಅದರ ಪುನರ್‌ನಿರ್ಮಾಣ ಕಷ್ಟಕರವಾದುದರಿಂದ ನೂತನ ಮಹಾಮಠವೊಂದನ್ನು ನಿರ್ಮಿಸುವ ಸಂಕಲ್ಪಗೈದಿದ್ದಾರೆ. ಗೌರೀಕುಂಡದಲ್ಲಿ ಒಂದು ಸುಸಜ್ಜಿತ ಕಟ್ಟಡವನ್ನು ಶ್ರೀ ಪೀಠಕ್ಕಾಗಿ ಕೊಂಡುಕೊಳ್ಳುವ ಪ್ರಯತ್ನ ನಡೆದಿದೆ. ವರ್ಷದ ಇನ್ನುಳಿದ ೧೦ ತಿಂಗಳು ದೇಶದ ಎಲ್ಲಾ ರಾಜ್ಯಗಳಲ್ಲಿ ಧರ್ಮಜಾಗೃತಿ ಯಾತ್ರೆ ಕೈಗೊಂಡು, ಲೋಕಕಲ್ಯಾಣಕ್ಕಾಗಿ ಶ್ರಮಿಸುವ ಉದ್ದೇಶ ಹೊಂದಿದ್ದಾರೆ. ಇತ್ತೀಚೆಗೆ ಪೀಠಾಧಿಪತಿಗಳಾಗಿರುವುದರಿಂದ ಇವರ ಕಾರ್ಯ ಕ್ಷಮತೆ, ಕ್ರಿಯಾಶೀಲತೆಗಳನ್ನು ಕಾದು ನೋಡಬೇಕಾಗಿದೆ. ಕಳೆದ ಡಿಸೆಂಬರ್ ೨೦೦೦ನೆಯ ಇಸವಿಯ ೨೫ ಮತ್ತು ೨೬ರಂದು ನಾಂದೇಡದ ಭೀಮಶಂಕರ ನಗರದಲ್ಲಿ ಅಖಿಲ ಮಹಾರಾಷ್ಟ್ರ ವೀರಶೈವ ದ್ವಿತೀಯ ಮಹಾಧಿವೇಶನವನ್ನು ಅದ್ವಿತೀಯ ಎನ್ನುವಂತೆ ನಡೆಸಿರುವುದು ನೂತನ ಕೇದಾರ ಜಗದ್ಗುರುಗಳವರ ಕರ್ತೃತ್ವ ಶಕ್ತಿಗೆ ಸಾಕ್ಷಿಯಾಗಿದೆ. ಆ ಸಮಾರಂಭಕ್ಕೆ ದಯಮಾಡಿಸಿದ್ದ ವಿಶ್ರಾಂತ ಕೇದಾರ ಜಗದ್ಗುರುಗಳವರನ್ನು ಒಳಗೊಂಡು ಸಮಾನ ಪೀಠಾಚಾರ್ಯರು ಹಾಗೂ ಅನೇಕ ಶಿವಾಚಾರ್ಯರು ಮಹಾರಾಷ್ಟ್ರದ ಮುಖ್ಯಮಂತ್ರಿಯನ್ನು ಒಳಗೊಂಡು ಅಧಿವೇಶನದಲ್ಲಿ ಭಾಗಿಗಳಾದ ಅನೇಕ ಗಣ್ಯಮಾನ್ಯರು ನೂತನ ಕೇದಾರ ಜಗದ್ಗುರುಗಳವರ ಸಂಘಟನಾ ಶಕ್ತಿ, ದೂರದರ್ಶಿತ್ವ ಹಾಗೂ ಕ್ರಿಯಾಶೀಲತೆಗಳನ್ನು ಮುಕ್ತಕಂಠದಿಂದ ಹೊಗಳಿದರು. ಅದೊಂದು ಅಪೂರ್ವ – ಅನುಪಮ ಸನ್ನಿವೇಶವಾಗಿತ್ತು. ಅದನ್ನು ಕಣ್ಣಾರೆ ಕಂಡ ನಾನೇ ಧನ್ಯನು.

ಶ್ರೀ ಭೀಮಶಂಕರಲಿಂಗ ಜಗದ್ಗುರುಗಳವರು ಕಳೆದ ಆರೇಳು ವರ್ಷಗಳಲ್ಲಿ ವೈರಾಗ್ಯ ಪೀಠದ ಉನ್ನತೀಕರಣದಲ್ಲಿ ಆಸಕ್ತಿಯಿಂದ ತನ್ಮಯರಾಗಿದ್ದಾರೆ. ಶ್ರೀ ಪೀಠದ ಜೀರ್ಣೋದ್ಧಾರವನ್ನು ಈಗಾಗಲೇ ಮಾಡಿ ಮುಗಿಸಿದ ಜಗದ್ಗುರುಗಳವರು ಸುಮಾರು ಒಂದು ಕೋಟಿ ರೂಪಾಯಿಗಳ

ವೆಚ್ಚದಲ್ಲಿ ಶ್ರೀ ಜಗದ್ಗುರು ನೀಲಕಂಠಲಿಂಗ ಭವನ ನಿರ್ಮಾಣ ಯೋಜನೆಯನ್ನು ರೂಪಿಸಿದರು. ಮೂರು ಅಂತಸ್ತಿನ ಈ ಭವನವು ಸಂಪೂರ್ಣ ನಿರ್ಮಾಣವಾಗದೆ ವಿರಮಿಸಲಾರೆವು ಎಂಬ ಶಪಥದೊಂದಿಗೆ ಕಾರ್ಯಪ್ರವೃತ್ತರಾದರು. ಇವರ ಯಾವ ಸಂಕಲ್ಪವೂ ವಿಕಲ್ಪವಾದದ್ದನ್ನು ಕಂಡವರಿಲ್ಲ. ಶ್ರೀ ಬದರಿನಾಥ, ಶ್ರೀ ಕೇದಾರನಾಥ ಮಂದಿರ ಸಮಿತಿಯ ಅನುಮತಿ ಹಾಗೂ ಸಮಾನ ಪೀಠಾಚಾರ್ಯರ ಸಲಹೆ, ಸಹಕಾರಗಳೊಂದಿಗೆ ಭವ್ಯ ಮಂದಿರವು ನಿರ್ಮಾಣಗೊಂಡಿತು. ಕಳೆದ ೨೦೦೬ ರ ಜೂನ್ ಐದರಂದು ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ದಿವ್ಯ ಸಾನ್ನಿಧ್ಯದಲ್ಲಿ ಭಾರತ ಸರಕಾರದ ಮಾನ್ಯ ಗೃಹ ಸಚಿವರಾದ ಶ್ರೀ ಶಿವರಾಜ ಪಾಟೀಲರು ಶ್ರೀ ಜಗದ್ಗುರು ನೀಲಕಂಠಲಿಂಗ ಭವನವನ್ನು ಉದ್ಘಾಟಿಸಿದರು. ಉತ್ತರಾಂಚಲದ ಮಾನ್ಯ ಮುಖ್ಯಮಂತ್ರಿಯಾದಿಯಾಗಿ ಅನೇಕ ಸಚಿವರು, ಶಾಸಕರು, ಲೋಕಸಭಾಸದಸ್ಯರು ಉಪಸ್ಥಿತರಿದ್ದರು. ನೆರೆದ ಸಾವಿರಾರು ಜನ ಭಕ್ತರ ಜಯಘೋಷದೊಂದಿಗೆ ಪೂರ್ಣಕುಂಭಸಹಿತವಾಗಿ ಜಗದ್ಗುರುಗಳೈವರು ನೂತನ ಕಟ್ಟಡದೊಳಗೆ ಪಾದಾರ್ಪಣೆ ಮಾಡಿದರು. ನೂರಾರು ಜನ ಹರಗುರು ಚರಮೂರ್ತಿಗಳು ಈ ಮಹತ್ವಪೂರ್ಣವಾದ ಭವನದ ಉದ್ಘಾಟನೆ ಸಮಾರಂಭದಲ್ಲಿ ಪಾಲ್ಗೊಂಡಿದ್ದು ವಿಶೇಷವೆನಿಸಿತು.

ಇದೇ ಸಂದರ್ಭದಲ್ಲಿ ಲೋಕಕಲ್ಯಾಣಾರ್ಥವಾಗಿ ದಿ.೨೯.೦೫.೨೦೦೬ ರಿಂದ ೪.೬.೨೦೦೬ರವರೆಗೆ ಶತಚಂಡಿ ಹೋಮ ಏರ್ಪಡಿಸಿ ಪರಿಸರವನ್ನು ಪವಿತ್ರಗೊಳಿಸಲಾಯಿತು. ದಿನವಿಡೀ ಒಂದು ವಾರ ಜನರಲ್ಲಿ ಧರ್ಮಜಾಗೃತಿ ಹಾಗೂ ಧರ್ಮ ಪ್ರಜ್ಞೆ ಮೂಡಿಸುವ ಸಭೆ – ಸಮ್ಮೇಲನಗಳು ನಡೆದಿದ್ದವು. ದೇಶದ ನಾನಾ ಭಾಗಗಳಿಂದ ವಿವಿಧ ಭಾಷಿಕ ಪಂಡಿತರು, ವಾಗ್ಮಿಗಳು, ಸಂಗೀತ ಕಲಾವಿದರು, ಧರ್ಮಾಭಿಮಾನಿಗಳು ಪಾಲ್ಗೊಂಡು ಓಖಿಮಠದ ಆವರಣವನ್ನು ಅಣು ಭಾರತವನ್ನಾಗಿ (ಮಿನಿ ಇಂಡಿಯಾ) ಮಾರ್ಪಡಿಸಿದ್ದರು ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಒಟ್ಟಾರೆ ಈ ಕಾರ್ಯವು ವೈರಾಗ್ಯಪೀಠಾಧೀಶರಾದ 'ರಾವಲ್' ಶ್ರೀ ಜಗದ್ಗುರು ಭೀಮಶಂಕರಲಿಂಗ ಶಿವಾಚಾರ್ಯ ಭಗವತ್ಪಾದರ ಸಾಧನೆ – ಸಿದ್ಧಿಗಳಿಗೆ ಹಿಡಿದ ಕನ್ನಡಿಯಾಗಿತ್ತು. ಕೇದಾರ ಪೀಠದಿಂದ ಕೆಲವು ಉಪಯುಕ್ತ ಗ್ರಂಥಗಳನ್ನು ಪ್ರಕಟಿಸಿ ಪ್ರಸ್ತುತ ಜಗದ್ಗುರುಗಳು ಕೇದಾರಪೀಠದ ಪ್ರಕಾಶನಕ್ಕೊಂದು ನಾಂದಿ ಹಾಡಿದರು. ಇದುವರೆಗೆ ಶ್ರೀ ಪೀಠದ ಪರಂಪರೆಯ ಗುರುಗಳನ್ನು ಕುರಿತ ಪುರಾಣವು ಲಭ್ಯವಿರಲಿಲ್ಲ. ಈ ಸಂಭ್ರಮದ ಸಮಾರಂಭದಲ್ಲಿ ಗುಡೂರ – ಮರಬ ಜಡೆಯಮಠದ ಲಿಂ. 'ಗುರುಕವಿ' ಶ್ರೀ ಗಂಗಾಧರ ಶಿವಾಚಾರ್ಯರು ರಚಿಸಿದ ಹಾಗೂ ಗದ್ಯಪಾಠದೊಂದಿಗೆ ಪ್ರಾ. ಅ.ಸಿ.ಹಿರೇಮಠ ಅವರು ಸಂಪಾದಿಸಿದ "ಶ್ರೀ ಹಿಮವತ್ಕೇದಾರ ವೈರಾಗ್ಯ ಪೀಠಾಧೀಶರ ಪುರಾಣ"ವು ಲೋಕಾರ್ಪಣವಾಯಿತು. ಇದರೊಂದಿಗೆ ಹರಿಹರದ ಸೌ.ಶೋಭಾ ಎಸ್. ಹಿರೇಮಠ ಅವರು ಇಂಗ್ಲೀಷ್ ಭಾಷೆಯಲ್ಲಿ ರಚಿಸಿದ ಹಾಗೂ ಅವರ ಸುಪುತ್ರಿ ಚಿ.ಕು. ತೇಜಸ್ವಿನಿ ಹಿಂದಿಯಲ್ಲಿ ಬರೆದ 'ಕೇದಾರಪೀಠ ಪರಂಪರೆ' ಕೃತಿಗಳು ಸಹ ಬಿಡುಗಡೆಯಾದವು. ಶ್ರೀ ಎಸ್.ಎಂ. ಹಿರೇಮಠ ಮತ್ತು ಶ್ರೀಮತಿ ಗಿರಿಜಾ ದುರ್ಗದಮಠ ಅವರ ಕನ್ನಡ ಪುಸ್ತಕಗಳು ಈ ಮೊದಲೇ ಬೆಳಕು ಕಂಡಿವೆ. ಹೀಗೆ ಪುಸ್ತಕ ಸಂಸ್ಕೃತಿಯ ಹೊಸಮಾರ್ಗವನ್ನು ಶ್ರೀ ಕೇದಾರ ಪೀಠವು ಕೈಗೊಂಡಿದೆಯೆಂಬುದು ವಿದ್ವತ್ ಲೋಕಕ್ಕೆ ಅನಿರ್ವಚನೀಯ ಆನಂದದ ಸಂಗತಿಯಾಗಿದೆ.

ಇವಿಷ್ಟೂ ಅಲ್ಲದೇ ಪೂಜ್ಯ ಶ್ರೀಭೀಮಶಂಕರಲಿಂಗ ಶಿವಾಚಾರ್ಯರು ಶ್ರೀ ಪೀಠದ ಅಭಿವೃದ್ಧಿಗೆ ಐದಂಶಗಳ ಸೂತ್ರವನ್ನು ಹಾಕಿಕೊಂಡು ಸಮಿತಿಯೊಂದನ್ನು ರಚಿಸಿ ಅದರ ಅನುಷ್ಠಾನ ಕಾರ್ಯದಲ್ಲಿ ನಿರತರಾಗಿದ್ದಾರೆ. ಶ್ರೀ ಕೇದಾರ ಪೀಠದ ಸರ್ವಾಂಗೀಣ ಅಭಿವೃದ್ಧಿಗಾಗಿ ಸಮಿತಿಯು ೧೦.೧೧.೨೦೦೬ ರಂದು ಸಭೆ ಸೇರಿ ಸ್ವೀಕರಿಸಿದ ನಿರ್ಣಯಗಳು ಇಂತಿವೆ:

೧. ಕೇದಾರನಾಥ ಧಾಮದಲ್ಲಿ ೫೦ ಲಕ್ಷ ರೂಪಾಯಿ ವೆಚ್ಚದಲ್ಲಿ 'ರಾವಲ್ ನಿವಾಸ' (ಶ್ರೀ ಸನ್ನಿಧಿಗೆ ನೂತನ ಕಟ್ಟಡ ನಿರ್ಮಾಣ) ನಿರ್ಮಿಸುವುದು.
೨. ಅಂದಾಜು ೨೦ ಲಕ್ಷ ರೂಪಾಯಿ ವೆಚ್ಚದಲ್ಲಿ ಓಖಿಮಠದಲ್ಲಿ ಸಾಧು – ಸತ್ಪುರುಷರಿಗಾಗಿ ಭವ್ಯವಾದ ಧರ್ಮಶಾಲೆ, ಪಾಠಶಾಲೆ ನಿರ್ಮಿಸುವುದು.
೩. ಸುಮಾರು ೩೦ ಲಕ್ಷ ರೂಪಾಯಿ ವೆಚ್ಚದಲ್ಲಿ ಪುರಾತನವಾಗಿರುವ ಮಹಾದ್ವಾರವನ್ನು ಪುನರ್‌ರೂಪಿಸಿ ನಿರ್ಮಿಸುವುದು.
೪. ದೆಹಲಿ ಮಹಾನಗರದಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ಭವನವನ್ನು ನಿರ್ಮಿಸುವುದು.
೫. ಶ್ರೀ ಜಗದ್ಗುರು ಏಕೋರಾಮಾರಾಧ್ಯ ಅವತಾರಸ್ಥಾನವಾದ ದ್ರಾಕ್ಷಾರಾಮ ಕ್ಷೇತ್ರದಲ್ಲಿ ಅಂದಾಜು ಒಂದು ಕೋಟಿ ರೂಪಾಯಿ ವೆಚ್ಚದಲ್ಲಿ ಸ್ಮಾರಕ ಭವನ ನಿರ್ಮಿಸುವುದು.

ಈ ಸಂದರ್ಭದಲ್ಲಿ ಕೇದಾರ ಜಗದ್ಗುರು ಶ್ರೀ ಭೀಮಶಂಕರಲಿಂಗ ಶಿವಾಚಾರ್ಯ ಭಗವತ್ಪಾದರ ಸುವರ್ಣ ಜನ್ಮಮಹೋತ್ಸವವನ್ನು ಆಚರಿಸುವ ಮೂಲಕ ಮಹಾಜನತೆಯು ಶ್ರೀ ಪೀಠದ ಏಳ್ಗೆಗಾಗಿ ಧರ್ಮಜಾಗೃತಿಗಾಗಿ ಇನ್ನೂ ಇನ್ನೂ ಹೆಚ್ಚಿನ ಆಯುರಾರೋಗ್ಯ ಭಾಗ್ಯಗಳನ್ನು ಪೂರ್ವಾಚಾರ್ಯರು ನೀಡಲೆಂದು ಪ್ರಾರ್ಥಿಸಿದರು.

ಶ್ರೀ ಕೇದಾರ ಪೀಠದ ಜಗದ್ಗುರು ಪರಂಪರೆ

ಶ್ರೀ ಜಗದ್ಗುರು ತ್ರ್ಯಕ್ಷರ ಶಿವಾಚಾರ್ಯ ಭಗವತ್ಪಾದರು (ಕೃತಯುಗ)
ಶ್ರೀ ಜಗದ್ಗುರು ತ್ರಿವಕ್ತ್ರ ಶಿವಾಚಾರ್ಯ ಭಗವತ್ಪಾದರು (ತ್ರೇತಾಯುಗ)
ಶ್ರೀ ಜಗದ್ಗುರು ಘಂಟಾಕರ್ಣ ಶಿವಾಚಾರ್ಯ ಭಗವತ್ಪಾದರು (ದ್ವಾಪರಯುಗ)
ಶ್ರೀ ಜಗದ್ಗುರು ಏಕೋರಾಮಾರಾಧ್ಯ ಭಗವತ್ಪಾದರು (ಕಲಿಯುಗದ ಆರಂಭ)

೧. ಶ್ರೀ ಜಗದ್ಗುರು ಭುಕುಂಡಲಿಂಗ ಶಿವಾಚಾರ್ಯರು
೨. ಶ್ರೀ ಜಗದ್ಗುರು ಗಣೇಶಲಿಂಗ ಶಿವಾಚಾರ್ಯರು
೩. ಶ್ರೀ ಜಗದ್ಗುರು ಸೋಮಲಿಂಗ ಶಿವಾಚಾರ್ಯರು
೪. ಶ್ರೀ ಜಗದ್ಗುರು ಹರಲಿಂಗ ಶಿವಾಚಾರ್ಯರು
೫. ಶ್ರೀ ಜಗದ್ಗುರು ವೀರಲಿಂಗ ಶಿವಾಚಾರ್ಯರು
೬. ಶ್ರೀ ಜಗದ್ಗುರು ಗರ್ಗಲಿಂಗ ಶಿವಾಚಾರ್ಯರು
೭. ಶ್ರೀ ಜಗದ್ಗುರು ಭವ್ಯಲಿಂಗ ಶಿವಾಚಾರ್ಯರು
೮. ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರು
೯. ಶ್ರೀ ಜಗದ್ಗುರು ಕಾರಣಲಿಂಗ ಶಿವಾಚಾರ್ಯರು
೧೦. ಶ್ರೀ ಜಗದ್ಗುರು ಮನೋಹರಲಿಂಗ ಶಿವಾಚಾರ್ಯರು
೧೧. ಶ್ರೀ ಜಗದ್ಗುರು ಜ್ಯೋತಿರ್ಲಿಂಗ ಶಿವಾಚಾರ್ಯರು

೧೨. ಶ್ರೀ ಜಗದ್ಗುರು ಜಗನ್ಮಂಗಲಲಿಂಗ ಶಿವಾಚಾರ್ಯರು
೧೩. ಶ್ರೀ ಜಗದ್ಗುರು ಜಯಲಿಂಗ ಶಿವಾಚಾರ್ಯರು
೧೪. ಶ್ರೀ ಜಗದ್ಗುರು ಮಹಾಲಿಂಗ ಶಿವಾಚಾರ್ಯರು
೧೫. ಶ್ರೀ ಜಗದ್ಗುರು ಶಂಕರಲಿಂಗ ಶಿವಾಚಾರ್ಯರು
೧೬. ಶ್ರೀ ಜಗದ್ಗುರು ಪರಲಿಂಗ ಶಿವಾಚಾರ್ಯರು
೧೭. ಶ್ರೀ ಜಗದ್ಗುರು ಕುಬೇರಲಿಂಗ ಶಿವಾಚಾರ್ಯರು
೧೮. ಶ್ರೀ ಜಗದ್ಗುರು ಗಜಲಿಂಗ ಶಿವಾಚಾರ್ಯರು
೧೯. ಶ್ರೀ ಜಗದ್ಗುರು ವಿರೂಪಾಕ್ಷಲಿಂಗ ಶಿವಾಚಾರ್ಯರು
೨೦. ಶ್ರೀ ಜಗದ್ಗುರು ವರಲಿಂಗ ಶಿವಾಚಾರ್ಯರು
೨೧. ಶ್ರೀ ಜಗದ್ಗುರು ಗಂಗಾಧರಲಿಂಗ ಶಿವಾಚಾರ್ಯರು
೨೨. ಶ್ರೀ ಜಗದ್ಗುರು ದೇವಲಿಂಗ ಶಿವಾಚಾರ್ಯರು
೨೩. ಶ್ರೀ ಜಗದ್ಗುರು ತ್ರ್ಯಂಬಕ ಲಿಂಗ ಶಿವಾಚಾರ್ಯರು
೨೪. ಶ್ರೀ ಜಗದ್ಗುರು ಮದನಲಿಂಗ ಶಿವಾಚಾರ್ಯರು
೨೫. ಶ್ರೀ ಜಗದ್ಗುರು ತ್ರಿಲೋಚನಲಿಂಗ ಶಿವಾಚಾರ್ಯರು
೨೬. ಶ್ರೀ ಜಗದ್ಗುರು ಸ್ಮರಾರಿಲಿಂಗ ಶಿವಾಚಾರ್ಯರು
೨೭. ಶ್ರೀ ಜಗದ್ಗುರು ಪುರಾರಿಲಿಂಗ ಶಿವಾಚಾರ್ಯರು
೨೮. ಶ್ರೀ ಜಗದ್ಗುರು ಸಂಪಾತಿಲಿಂಗ ಶಿವಾಚಾರ್ಯರು
೨೯. ಶ್ರೀ ಜಗದ್ಗುರು ಕರ್ಮಠಲಿಂಗ ಶಿವಾಚಾರ್ಯರು
೩೦. ಶ್ರೀ ಜಗದ್ಗುರು ಸುರಲಿಂಗ ಶಿವಾಚಾರ್ಯರು
೩೧. ಶ್ರೀ ಜಗದ್ಗುರು ಆನಂದ ತಾಂಡವಲಿಂಗ ಶಿವಾಚಾರ್ಯರು
೩೨. ಶ್ರೀ ಜಗದ್ಗುರು ಶುಕ್ರಲಿಂಗ ಶಿವಾಚಾರ್ಯರು
೩೩. ಶ್ರೀ ಜಗದ್ಗುರು ರೂಪಲಿಂಗ ಶಿವಾಚಾರ್ಯರು
೩೪. ಶ್ರೀ ಜಗದ್ಗುರು ಮೀನಾಕ್ಷಿ ಸುಂದರಲಿಂಗ ಶಿವಾಚಾರ್ಯರು
೩೫. ಶ್ರೀ ಜಗದ್ಗುರು ಸುಬ್ರಹ್ಮಣ್ಯಲಿಂಗ ಶಿವಾಚಾರ್ಯರು
೩೬. ಶ್ರೀ ಜಗದ್ಗುರು ಮೂರ್ತಿಲಿಂಗ ಶಿವಾಚಾರ್ಯರು
೩೭. ಶ್ರೀ ಜಗದ್ಗುರು ವಾರಿಲಿಂಗ ಶಿವಾಚಾರ್ಯರು
೩೮. ಶ್ರೀ ಜಗದ್ಗುರು ಕುಂದಲಿಂಗ ಶಿವಾಚಾರ್ಯರು
೩೯. ಶ್ರೀ ಜಗದ್ಗುರು ಚರಮಲಿಂಗ ಶಿವಾಚಾರ್ಯರು
೪೦. ಶ್ರೀ ಜಗದ್ಗುರು ಧರ್ಮಲಿಂಗ ಶಿವಾಚಾರ್ಯರು
೪೧. ಶ್ರೀ ಜಗದ್ಗುರು ತೀರ್ಥಲಿಂಗ ಶಿವಾಚಾರ್ಯರು
೪೨. ಶ್ರೀ ಜಗದ್ಗುರು ಚಂಡಿಕೇಶ್ವರಲಿಂಗ ಶಿವಾಚಾರ್ಯರು
೪೩. ಶ್ರೀ ಜಗದ್ಗುರು ಭಜನಲಿಂಗ ಶಿವಾಚಾರ್ಯರು
೪೪. ಶ್ರೀ ಜಗದ್ಗುರು ದೇವಲಿಂಗ ಶಿವಾಚಾರ್ಯರು
೪೫. ಶ್ರೀ ಜಗದ್ಗುರು ರಾಮಲಿಂಗ ಶಿವಾಚಾರ್ಯರು
೪೬. ಶ್ರೀ ಜಗದ್ಗುರು ನಂದಿಲಿಂಗ ಶಿವಾಚಾರ್ಯರು
೪೭. ಶ್ರೀ ಜಗದ್ಗುರು ಭವಾರಿಲಿಂಗ ಶಿವಾಚಾರ್ಯರು
೪೮. ಶ್ರೀ ಜಗದ್ಗುರು ಸಭಾಪತಿಲಿಂಗ ಶಿವಾಚಾರ್ಯರು
೪೯. ಶ್ರೀ ಜಗದ್ಗುರು ಸುನಾಮಲಿಂಗ ಶಿವಾಚಾರ್ಯರು
೫೦. ಶ್ರೀ ಜಗದ್ಗುರು ಧ್ವಜಲಿಂಗ ಶಿವಾಚಾರ್ಯರು
೫೧. ಶ್ರೀ ಜಗದ್ಗುರು ಭೈರವಲಿಂಗ ಶಿವಾಚಾರ್ಯರು
೫೨. ಶ್ರೀ ಜಗದ್ಗುರು ಸುಮೇರುಲಿಂಗ ಶಿವಾಚಾರ್ಯರು
೫೩. ಶ್ರೀ ಜಗದ್ಗುರು ಗಿರಿಲಿಂಗ ಶಿವಾಚಾರ್ಯರು
೫೪. ಶ್ರೀ ಜಗದ್ಗುರು ಓಂಕಾರಲಿಂಗ ಶಿವಾಚಾರ್ಯರು
೫೫. ಶ್ರೀ ಜಗದ್ಗುರು ಪೂರ್ಣಲಿಂಗ ಶಿವಾಚಾರ್ಯರು
೫೬. ಶ್ರೀ ಜಗದ್ಗುರು ಅಘೋರಲಿಂಗ ಶಿವಾಚಾರ್ಯರು
೫೭. ಶ್ರೀ ಜಗದ್ಗುರು ಭಾವಲಿಂಗ ಶಿವಾಚಾರ್ಯರು
೫೮. ಶ್ರೀ ಜಗದ್ಗುರು ಮಣಿಭದ್ರಲಿಂಗ ಶಿವಾಚಾರ್ಯರು
೫೯. ಶ್ರೀ ಜಗದ್ಗುರು ಭವಾರಿಲಿಂಗ ಶಿವಾಚಾರ್ಯರು
೬೦. ಶ್ರೀ ಜಗದ್ಗುರು ನಾಗಹಾರಲಿಂಗ ಶಿವಾಚಾರ್ಯರು
೬೧. ಶ್ರೀ ಜಗದ್ಗುರು ಮುರಾರಿಲಿಂಗ ಶಿವಾಚಾರ್ಯರು
೬೨. ಶ್ರೀ ಜಗದ್ಗುರು ರತ್ನಲಿಂಗ ಶಿವಾಚಾರ್ಯರು
೬೩. ಶ್ರೀ ಜಗದ್ಗುರು ಗಿರಿಲಿಂಗ ಶಿವಾಚಾರ್ಯರು
೬೪. ಶ್ರೀ ಜಗದ್ಗುರು ಬ್ರಹ್ಮಾನಂದಲಿಂಗ ಶಿವಾಚಾರ್ಯರು
೬೫. ಶ್ರೀ ಜಗದ್ಗುರು ಕಠೋರಲಿಂಗ ಶಿವಾಚಾರ್ಯರು
೬೬. ಶ್ರೀ ಜಗದ್ಗುರು ಪುರೇಂದ್ರಲಿಂಗ ಶಿವಾಚಾರ್ಯರು
೬೭. ಶ್ರೀ ಜಗದ್ಗುರು ಶಂಭುಲಿಂಗ ಶಿವಾಚಾರ್ಯರು
೬೮. ಶ್ರೀ ಜಗದ್ಗುರು ವರುಣಲಿಂಗ ಶಿವಾಚಾರ್ಯರು
೬೯. ಶ್ರೀ ಜಗದ್ಗುರು ತಾರಕಲಿಂಗ ಶಿವಾಚಾರ್ಯರು
೭೦. ಶ್ರೀ ಜಗದ್ಗುರು ವರ್ಣಲಿಂಗ ಶಿವಾಚಾರ್ಯರು
೭೧. ಶ್ರೀ ಜಗದ್ಗುರು ಕಾಮಲಿಂಗ ಶಿವಾಚಾರ್ಯರು
೭೨. ಶ್ರೀ ಜಗದ್ಗುರು ಮಂಡಲೇಶ್ವರಲಿಂಗ ಶಿವಾಚಾರ್ಯರು
೭೩. ಶ್ರೀ ಜಗದ್ಗುರು ಅರುಣಾಚಲ ಲಿಂಗ ಶಿವಾಚಾರ್ಯರು
೭೪. ಶ್ರೀ ಜಗದ್ಗುರು ಮಹೇಶ್ವರಲಿಂಗ ಶಿವಾಚಾರ್ಯರು
೭೫. ಶ್ರೀ ಜಗದ್ಗುರು ಹರಿಕೇಶಲಿಂಗ ಶಿವಾಚಾರ್ಯರು
೭೬. ಶ್ರೀ ಜಗದ್ಗುರು ಸುರೇಶಲಿಂಗ ಶಿವಾಚಾರ್ಯರು
೭೭. ಶ್ರೀ ಜಗದ್ಗುರು ಮಹಾರುದ್ರಲಿಂಗ ಶಿವಾಚಾರ್ಯರು

೭೮. ಶ್ರೀ ಜಗದ್ಗುರು ಬಲಾಹಕ ಲಿಂಗ ಶಿವಾಚಾರ್ಯರು
೭೯. ಶ್ರೀ ಜಗದ್ಗುರು ರೋಹಿತಲಿಂಗ ಶಿವಾಚಾರ್ಯರು
೮೦. ಶ್ರೀ ಜಗದ್ಗುರು ಭೀಮಕರ್ಣಲಿಂಗ ಶಿವಾಚಾರ್ಯರು
೮೧. ಶ್ರೀ ಜಗದ್ಗುರು ಶಂಕರಲಿಂಗ ಶಿವಾಚಾರ್ಯರು
೮೨. ಶ್ರೀ ಜಗದ್ಗುರು ಕೀರ್ತಿಸಾಗರಲಿಂಗ ಶಿವಾಚಾರ್ಯರು
೮೩. ಶ್ರೀ ಜಗದ್ಗುರು ಮುಖ್ಯಲಿಂಗ ಶಿವಾಚಾರ್ಯರು
೮೪. ಶ್ರೀ ಜಗದ್ಗುರು ಶುದ್ಧಲಿಂಗ ಶಿವಾಚಾರ್ಯರು
೮೫. ಶ್ರೀ ಜಗದ್ಗುರು ವದಾನ್ಯಲಿಂಗ ಶಿವಾಚಾರ್ಯರು
೮೬. ಶ್ರೀ ಜಗದ್ಗುರು ವೇದಸಮ್ಮತಲಿಂಗ ಶಿವಾಚಾರ್ಯರು
೮೭. ಶ್ರೀ ಜಗದ್ಗುರು ಮನುಲಿಂಗ ಶಿವಾಚಾರ್ಯರು
೮೮. ಶ್ರೀ ಜಗದ್ಗುರು ಕುಮಾರಲಿಂಗ ಶಿವಾಚಾರ್ಯರು
೮೯. ಶ್ರೀ ಜಗದ್ಗುರು ಯಜ್ಞಲಿಂಗ ಶಿವಾಚಾರ್ಯರು
೯೦. ಶ್ರೀ ಜಗದ್ಗುರು ಮುಕ್ತಿಮುನಿಲಿಂಗ ಶಿವಾಚಾರ್ಯರು
೯೧. ಶ್ರೀ ಜಗದ್ಗುರು ಯಜ್ಞಮೂರ್ತಿಲಿಂಗ ಶಿವಾಚಾರ್ಯರು
೯೨. ಶ್ರೀ ಜಗದ್ಗುರು ಸಾತ್ವಿಕಲಿಂಗ ಶಿವಾಚಾರ್ಯರು
೯೩. ಶ್ರೀ ಜಗದ್ಗುರು ಪರ್ಣಲಿಂಗ ಶಿವಾಚಾರ್ಯರು
೯೪. ಶ್ರೀ ಜಗದ್ಗುರು ಭೂತಲಿಂಗ ಶಿವಾಚಾರ್ಯರು
೯೫. ಶ್ರೀ ಜಗದ್ಗುರು ಬಾಲಲಿಂಗ ಶಿವಾಚಾರ್ಯರು
೯೬. ಶ್ರೀ ಜಗದ್ಗುರು ಕಲಾಧರಲಿಂಗ ಶಿವಾಚಾರ್ಯರು
೯೭. ಶ್ರೀ ಜಗದ್ಗುರು ನಿರಂಜನಲಿಂಗ ಶಿವಾಚಾರ್ಯರು
೯೮. ಶ್ರೀ ಜಗದ್ಗುರು ಗುರುಲಿಂಗ ಶಿವಾಚಾರ್ಯರು
೯೯. ಶ್ರೀ ಜಗದ್ಗುರು ಗುರುಮೂರ್ತಿಲಿಂಗ ಶಿವಾಚಾರ್ಯರು
೧೦೦. ಶ್ರೀ ಜಗದ್ಗುರು ಕಲಾಧರಲಿಂಗ ಶಿವಾಚಾರ್ಯರು
೧೦೧. ಶ್ರೀ ಜಗದ್ಗುರು ಸತ್ಯಲಿಂಗ ಶಿವಾಚಾರ್ಯರು
೧೦೨. ಶ್ರೀ ಜಗದ್ಗುರು ವೀರಭದ್ರಲಿಂಗ ಶಿವಾಚಾರ್ಯರು
೧೦೩. ಶ್ರೀ ಜಗದ್ಗುರು ಅವ್ಯಕ್ತಲಿಂಗ ಶಿವಾಚಾರ್ಯರು
೧೦೪. ಶ್ರೀ ಜಗದ್ಗುರು ಕಲ್ಪಲಿಂಗ ಶಿವಾಚಾರ್ಯರು
೧೦೫. ಶ್ರೀ ಜಗದ್ಗುರು ರುದ್ರಪಾದಲಿಂಗ ಶಿವಾಚಾರ್ಯರು
೧೦೬. ಶ್ರೀ ಜಗದ್ಗುರು ಸಾಮಲಿಂಗ ಶಿವಾಚಾರ್ಯರು
೧೦೭. ಶ್ರೀ ಜಗದ್ಗುರು ಮೃತ್ಯುಂಜಯಲಿಂಗ ಶಿವಾಚಾರ್ಯರು
೧೦೮. ಶ್ರೀ ಜಗದ್ಗುರು ಧಾನ್ಯಲಿಂಗ ಶಿವಾಚಾರ್ಯರು
೧೦೯. ಶ್ರೀ ಜಗದ್ಗುರು ಪ್ರಧಾನಲಿಂಗ ಶಿವಾಚಾರ್ಯರು
೧೧೦. ಶ್ರೀ ಜಗದ್ಗುರು ಪುರಾಣಲಿಂಗ ಶಿವಾಚಾರ್ಯರು
೧೧೧. ಶ್ರೀ ಜಗದ್ಗುರು ಕಲ್ಯಾಣಲಿಂಗ ಶಿವಾಚಾರ್ಯರು
೧೧೨. ಶ್ರೀ ಜಗದ್ಗುರು ಅಘೋರಲಿಂಗ ಶಿವಾಚಾರ್ಯರು
೧೧೩. ಶ್ರೀ ಜಗದ್ಗುರು ವಿಷ್ಣುಲಿಂಗ ಶಿವಾಚಾರ್ಯರು
೧೧೪. ಶ್ರೀ ಜಗದ್ಗುರು ಹರಲಿಂಗ ಶಿವಾಚಾರ್ಯರು
೧೧೫. ಶ್ರೀ ಜಗದ್ಗುರು ಕವಿಲಿಂಗ ಶಿವಾಚಾರ್ಯರು
೧೧೬. ಶ್ರೀ ಜಗದ್ಗುರು ನೀಲಲಿಂಗ ಶಿವಾಚಾರ್ಯರು
೧೧೭. ಶ್ರೀ ಜಗದ್ಗುರು ಕರ್ಮಲಿಂಗ ಶಿವಾಚಾರ್ಯರು
೧೧೮. ಶ್ರೀ ಜಗದ್ಗುರು ಜನಾರ್ಧನಲಿಂಗ ಶಿವಾಚಾರ್ಯರು
೧೧೯. ಶ್ರೀ ಜಗದ್ಗುರು ವ್ರತಲಿಂಗ ಶಿವಾಚಾರ್ಯರು
೧೨೦. ಶ್ರೀ ಜಗದ್ಗುರು ರಾಜಲಿಂಗ ಶಿವಾಚಾರ್ಯರು
೧೨೧. ಶ್ರೀ ಜಗದ್ಗುರು ನೀತಿಲಿಂಗ ಶಿವಾಚಾರ್ಯರು
೧೨೨. ಶ್ರೀ ಜಗದ್ಗುರು ಮನೋರಥಲಿಂಗ ಶಿವಾಚಾರ್ಯರು
೧೨೩. ಶ್ರೀ ಜಗದ್ಗುರು ಗುಣಾಧರಲಿಂಗ ಶಿವಾಚಾರ್ಯರು
೧೨೪. ಶ್ರೀ ಜಗದ್ಗುರು ಮನೋರೂಪಲಿಂಗ ಶಿವಾಚಾರ್ಯರು
೧೨೫. ಶ್ರೀ ಜಗದ್ಗುರು ವಿದ್ಯಾಲಿಂಗ ಶಿವಾಚಾರ್ಯರು
೧೨೬. ಶ್ರೀ ಜಗದ್ಗುರು ಬಲಲಿಂಗ ಶಿವಾಚಾರ್ಯರು
೧೨೭. ಶ್ರೀ ಜಗದ್ಗುರು ವಸಂತಲಿಂಗ ಶಿವಾಚಾರ್ಯರು
೧೨೮. ಶ್ರೀ ಜಗದ್ಗುರು ಜೀವಲಿಂಗ ಶಿವಾಚಾರ್ಯರು
೧೨೯. ಶ್ರೀ ಜಗದ್ಗುರು ಜ್ಯೋತಿರೂಪಲಿಂಗ ಶಿವಾಚಾರ್ಯರು
೧೩೦. ಶ್ರೀ ಜಗದ್ಗುರು ನಿರಂಜನಲಿಂಗ ಶಿವಾಚಾರ್ಯರು
೧೩೧. ಶ್ರೀ ಜಗದ್ಗುರು ಪುರಾಣಲಿಂಗ ಶಿವಾಚಾರ್ಯರು
೧೩೨. ಶ್ರೀ ಜಗದ್ಗುರು ಸರ್ವೇಶಲಿಂಗ ಶಿವಾಚಾರ್ಯರು
೧೩೩. ಶ್ರೀ ಜಗದ್ಗುರು ಪಿನಾಕಲಿಂಗ ಶಿವಾಚಾರ್ಯರು
೧೩೪. ಶ್ರೀ ಜಗದ್ಗುರು ವಜ್ರಲಿಂಗ ಶಿವಾಚಾರ್ಯರು
೧೩೫. ಶ್ರೀ ಜಗದ್ಗುರು ಪುರೇಂದ್ರಲಿಂಗ ಶಿವಾಚಾರ್ಯರು
೧೩೬. ಶ್ರೀ ಜಗದ್ಗುರು ರೋಮಲಿಂಗ ಶಿವಾಚಾರ್ಯರು
೧೩೭. ಶ್ರೀ ಜಗದ್ಗುರು ತ್ರ್ಯಂಬಕಲಿಂಗ ಶಿವಾಚಾರ್ಯರು
೧೩೮. ಶ್ರೀ ಜಗದ್ಗುರು ಕುಂದಲಿಂಗ ಶಿವಾಚಾರ್ಯರು
೧೩೯. ಶ್ರೀ ಜಗದ್ಗುರು ಶಂಖಲಿಂಗ ಶಿವಾಚಾರ್ಯರು
೧೪೦. ಶ್ರೀ ಜಗದ್ಗುರು ಭೂತಲಿಂಗ ಶಿವಾಚಾರ್ಯರು
೧೪೧. ಶ್ರೀ ಜಗದ್ಗುರು ಭವಲಿಂಗ ಶಿವಾಚಾರ್ಯರು
೧೪೨. ಶ್ರೀ ಜಗದ್ಗುರು ಸ್ಥಾಣುಲಿಂಗ ಶಿವಾಚಾರ್ಯರು
೧೪೩. ಶ್ರೀ ಜಗದ್ಗುರು ಧೀರಲಿಂಗ ಶಿವಾಚಾರ್ಯರು

೧೪೪. ಶ್ರೀ ಜಗದ್ಗುರು ಸ್ವರಲಿಂಗ ಶಿವಾಚಾರ್ಯರು
೧೪೫. ಶ್ರೀ ಜಗದ್ಗುರು ಸಾರಲಿಂಗ ಶಿವಾಚಾರ್ಯರು
೧೪೬. ಶ್ರೀ ಜಗದ್ಗುರು ಹರಲಿಂಗ ಶಿವಾಚಾರ್ಯರು
೧೪೭. ಶ್ರೀ ಜಗದ್ಗುರು ಪಂಚಯಜ್ಞಲಿಂಗ ಶಿವಾಚಾರ್ಯರು
೧೪೮. ಶ್ರೀ ಜಗದ್ಗುರು ಜಗತಲಿಂಗ ಶಿವಾಚಾರ್ಯರು
೧೪೯. ಶ್ರೀ ಜಗದ್ಗುರು ಕೈಲಾಸಲಿಂಗ ಶಿವಾಚಾರ್ಯರು
೧೫೦. ಶ್ರೀ ಜಗದ್ಗುರು ಸೂಕ್ಷ್ಮಲಿಂಗ ಶಿವಾಚಾರ್ಯರು
೧೫೧. ಶ್ರೀ ಜಗದ್ಗುರು ನಾದಲಿಂಗ ಶಿವಾಚಾರ್ಯರು
೧೫೨. ಶ್ರೀ ಜಗದ್ಗುರು ಹಾರಲಿಂಗ ಶಿವಾಚಾರ್ಯರು
೧೫೩. ಶ್ರೀ ಜಗದ್ಗುರು ವಾಯುಲಿಂಗ ಶಿವಾಚಾರ್ಯರು
೧೫೪. ಶ್ರೀ ಜಗದ್ಗುರು ಅಮರಲಿಂಗ ಶಿವಾಚಾರ್ಯರು
೧೫೫. ಶ್ರೀ ಜಗದ್ಗುರು ಮಂದಾರಲಿಂಗ ಶಿವಾಚಾರ್ಯರು
೧೫೬. ಶ್ರೀ ಜಗದ್ಗುರು ಸುಲಭಲಿಂಗ ಶಿವಾಚಾರ್ಯರು
೧೫೭. ಶ್ರೀ ಜಗದ್ಗುರು ಯೋಗಿಲಿಂಗ ಶಿವಾಚಾರ್ಯರು
೧೫೮. ಶ್ರೀ ಜಗದ್ಗುರು ಸುಂದರಲಿಂಗ ಶಿವಾಚಾರ್ಯರು
೧೫೯. ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯರು
೧೬೦. ಶ್ರೀ ಜಗದ್ಗುರು ರೂಪಲಿಂಗ ಶಿವಾಚಾರ್ಯರು
೧೬೧. ಶ್ರೀ ಜಗದ್ಗುರು ಸ್ವರೂಪಲಿಂಗ ಶಿವಾಚಾರ್ಯರು
೧೬೨. ಶ್ರೀ ಜಗದ್ಗುರು ಮಾಯಾಲಿಂಗ ಶಿವಾಚಾರ್ಯರು
೧೬೩. ಶ್ರೀ ಜಗದ್ಗುರು ಅಮೃತಲಿಂಗ ಶಿವಾಚಾರ್ಯರು
೧೬೪. ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯರು
೧೬೫. ಶ್ರೀ ಜಗದ್ಗುರು ಅನ್ನಲಿಂಗ ಶಿವಾಚಾರ್ಯರು
೧೬೬. ಶ್ರೀ ಜಗದ್ಗುರು ಕಲಾಧರಲಿಂಗ ಶಿವಾಚಾರ್ಯರು
೧೬೭. ಶ್ರೀ ಜಗದ್ಗುರು ಗೌರೀಶಲಿಂಗ ಶಿವಾಚಾರ್ಯರು
೧೬೮. ಶ್ರೀ ಜಗದ್ಗುರು ಅಮೇಯಲಿಂಗ ಶಿವಾಚಾರ್ಯರು
೧೬೯. ಶ್ರೀ ಜಗದ್ಗುರು ಜಯದ್ರಥಲಿಂಗ ಶಿವಾಚಾರ್ಯರು
೧೭೦. ಶ್ರೀ ಜಗದ್ಗುರು ವೀರಲಿಂಗ ಶಿವಾಚಾರ್ಯರು
೧೭೧. ಶ್ರೀ ಜಗದ್ಗುರು ಗಂಭೀರಲಿಂಗ ಶಿವಾಚಾರ್ಯರು
೧೭೨. ಶ್ರೀ ಜಗದ್ಗುರು ಕ್ಷೇತ್ರಲಿಂಗ ಶಿವಾಚಾರ್ಯರು
೧೭೩. ಶ್ರೀ ಜಗದ್ಗುರು ಶಿವಾಗಮಲಿಂಗ ಶಿವಾಚಾರ್ಯರು
೧೭೪. ಶ್ರೀ ಜಗದ್ಗುರು ಗಿರಿರಾಜಲಿಂಗ ಶಿವಾಚಾರ್ಯರು
೧೭೫. ಶ್ರೀ ಜಗದ್ಗುರು ಕಾಲಲಿಂಗ ಶಿವಾಚಾರ್ಯರು
೧೭೬. ಶ್ರೀ ಜಗದ್ಗುರು ಚಂದ್ರಶೇಖರಲಿಂಗ ಶಿವಾಚಾರ್ಯರು
೧೭೭. ಶ್ರೀ ಜಗದ್ಗುರು ಕ್ರೌಂಚಧರಲಿಂಗ ಶಿವಾಚಾರ್ಯರು
೧೭೮. ಶ್ರೀ ಜಗದ್ಗುರು ಪುರಂದರಲಿಂಗ ಶಿವಾಚಾರ್ಯರು
೧೭೯. ಶ್ರೀ ಜಗದ್ಗುರು ಕಲಕಾರಿಲಿಂಗ ಶಿವಾಚಾರ್ಯರು
೧೮೦. ಶ್ರೀ ಜಗದ್ಗುರು ವಿಷ್ಣುಲಿಂಗ ಶಿವಾಚಾರ್ಯರು
೧೮೧. ಶ್ರೀ ಜಗದ್ಗುರು ವರ್ಮಲಿಂಗ ಶಿವಾಚಾರ್ಯರು
೧೮೨. ಶ್ರೀ ಜಗದ್ಗುರು ತ್ರಿಪುರಾರಿಲಿಂಗ ಶಿವಾಚಾರ್ಯರು
೧೮೩. ಶ್ರೀ ಜಗದ್ಗುರು ದಾಮೋದರಲಿಂಗ ಶಿವಾಚಾರ್ಯರು
೧೮೪. ಶ್ರೀ ಜಗದ್ಗುರು ಹೇರವಲಿಂಗ ಶಿವಾಚಾರ್ಯರು
೧೮೫. ಶ್ರೀ ಜಗದ್ಗುರು ಹರಿದ್ರಲಿಂಗ ಶಿವಾಚಾರ್ಯರು
೧೮೬. ಶ್ರೀ ಜಗದ್ಗುರು ಜಾಲಪಾದಲಿಂಗ ಶಿವಾಚಾರ್ಯರು
೧೮೭. ಶ್ರೀ ಜಗದ್ಗುರು ಮಾಧವಲಿಂಗ ಶಿವಾಚಾರ್ಯರು
೧೮೮. ಶ್ರೀ ಜಗದ್ಗುರು ವಾಸವಲಿಂಗ ಶಿವಾಚಾರ್ಯರು
೧೮೯. ಶ್ರೀ ಜಗದ್ಗುರು ಸರ್ವಲಿಂಗ ಶಿವಾಚಾರ್ಯರು
೧೯೦. ಶ್ರೀ ಜಗದ್ಗುರು ಭೂತಿಲಿಂಗ ಶಿವಾಚಾರ್ಯರು
೧೯೧. ಶ್ರೀ ಜಗದ್ಗುರು ಮೃಡಲಿಂಗ ಶಿವಾಚಾರ್ಯರು
೧೯೨. ಶ್ರೀ ಜಗದ್ಗುರು ಪ್ರಥಮಾಧಿಪಲಿಂಗ ಶಿವಾಚಾರ್ಯರು
೧೯೩. ಶ್ರೀ ಜಗದ್ಗುರು ಬಾಣಲಿಂಗ ಶಿವಾಚಾರ್ಯರು
೧೯೪. ಶ್ರೀ ಜಗದ್ಗುರು ಧನಲಿಂಗ ಶಿವಾಚಾರ್ಯರು
೧೯೫. ಶ್ರೀ ಜಗದ್ಗುರು ದೇವೇಶಲಿಂಗ ಶಿವಾಚಾರ್ಯರು
೧೯೬. ಶ್ರೀ ಜಗದ್ಗುರು ಗುಣಾತೀತಲಿಂಗ ಶಿವಾಚಾರ್ಯರು
೧೯೭. ಶ್ರೀ ಜಗದ್ಗುರು ಪೀತಾಂಬರಲಿಂಗ ಶಿವಾಚಾರ್ಯರು
೧೯೮. ಶ್ರೀ ಜಗದ್ಗುರು ವಿಶಾಲಲಿಂಗ ಶಿವಾಚಾರ್ಯರು
೧೯೯. ಶ್ರೀ ಜಗದ್ಗುರು ಕೇವಲಲಿಂಗ ಶಿವಾಚಾರ್ಯರು
೨೦೦. ಶ್ರೀ ಜಗದ್ಗುರು ಶೂಲಧಾರಿಲಿಂಗ ಶಿವಾಚಾರ್ಯರು
೨೦೧. ಶ್ರೀ ಜಗದ್ಗುರು ಬುಧಲಿಂಗ ಶಿವಾಚಾರ್ಯರು
೨೦೨. ಶ್ರೀ ಜಗದ್ಗುರು ಅರಜಲಿಂಗ ಶಿವಾಚಾರ್ಯರು
೨೦೩. ಶ್ರೀ ಜಗದ್ಗುರು ಜನಕಲಿಂಗ ಶಿವಾಚಾರ್ಯರು
೨೦೪. ಶ್ರೀ ಜಗದ್ಗುರು ಕಾಲಲಿಂಗ ಶಿವಾಚಾರ್ಯರು
೨೦೫. ಶ್ರೀ ಜಗದ್ಗುರು ಕೈವಲ್ಯಲಿಂಗ ಶಿವಾಚಾರ್ಯರು
೨೦೬. ಶ್ರೀ ಜಗದ್ಗುರು ಸಿಂಹಲಿಂಗ ಶಿವಾಚಾರ್ಯರು
೨೦೭. ಶ್ರೀ ಜಗದ್ಗುರು ಪಶುಪತಿಲಿಂಗ ಶಿವಾಚಾರ್ಯರು
೨೦೮. ಶ್ರೀ ಜಗದ್ಗುರು ಭದ್ರಲಿಂಗ ಶಿವಾಚಾರ್ಯರು
೨೦೯. ಶ್ರೀ ಜಗದ್ಗುರು ಬಹುರೂಪಿಲಿಂಗ ಶಿವಾಚಾರ್ಯರು

೨೧೦. ಶ್ರೀ ಜಗದ್ಗುರು ಪೂಜ್ಯಲಿಂಗ ಶಿವಾಚಾರ್ಯರು
೨೧೧. ಶ್ರೀ ಜಗದ್ಗುರು ಕಾಂತಲಿಂಗ ಶಿವಾಚಾರ್ಯರು
೨೧೨. ಶ್ರೀ ಜಗದ್ಗುರು ನಿರಾಮಲಿಂಗ ಶಿವಾಚಾರ್ಯರು
೨೧೩. ಶ್ರೀ ಜಗದ್ಗುರು ಹಂಸಲಿಂಗ ಶಿವಾಚಾರ್ಯರು
೨೧೪. ಶ್ರೀ ಜಗದ್ಗುರು ಮನಸ್ವಲಿಂಗ ಶಿವಾಚಾರ್ಯರು
೨೧೫. ಶ್ರೀ ಜಗದ್ಗುರು ವಿಶ್ವಹಾರಲಿಂಗ ಶಿವಾಚಾರ್ಯರು
೨೧೬. ಶ್ರೀ ಜಗದ್ಗುರು ವಿರಾಗಲಿಂಗ ಶಿವಾಚಾರ್ಯರು
೨೧೭. ಶ್ರೀ ಜಗದ್ಗುರು ರವಿನೇತ್ರಲಿಂಗ ಶಿವಾಚಾರ್ಯರು
೨೧೮. ಶ್ರೀ ಜಗದ್ಗುರು ಪವಿತ್ರಲಿಂಗ ಶಿವಾಚಾರ್ಯರು
೨೧೯. ಶ್ರೀ ಜಗದ್ಗುರು ನಾದಲಿಂಗ ಶಿವಾಚಾರ್ಯರು
೨೨೦. ಶ್ರೀ ಜಗದ್ಗುರು ವರದಲಿಂಗ ಶಿವಾಚಾರ್ಯರು
೨೨೧. ಶ್ರೀ ಜಗದ್ಗುರು ಮಂತ್ರಲಿಂಗ ಶಿವಾಚಾರ್ಯರು
೨೨೨. ಶ್ರೀ ಜಗದ್ಗುರು ಪ್ರಥಮಲಿಂಗ ಶಿವಾಚಾರ್ಯರು
೨೨೩. ಶ್ರೀ ಜಗದ್ಗುರು ಶಿತಿಕಂಠಲಿಂಗ ಶಿವಾಚಾರ್ಯರು
೨೨೪. ಶ್ರೀ ಜಗದ್ಗುರು ವಿಧಿಲಿಂಗ ಶಿವಾಚಾರ್ಯರು
೨೨೫. ಶ್ರೀ ಜಗದ್ಗುರು ವಿಶ್ವೇಶ್ವರಾಶ್ರಮಲಿಂಗ ಶಿವಾಚಾರ್ಯರು
೨೨೬. ಶ್ರೀ ಜಗದ್ಗುರು ಸೋಮನಾಥಲಿಂಗ ಶಿವಾಚಾರ್ಯರು
೨೨೭. ಶ್ರೀ ಜಗದ್ಗುರು ಕೇದಾರಲಿಂಗ ಶಿವಾಚಾರ್ಯರು
೨೨೮. ಶ್ರೀ ಜಗದ್ಗುರು ನಾಥಲಿಂಗ ಶಿವಾಚಾರ್ಯರು
೨೨೯. ಶ್ರೀ ಜಗದ್ಗುರು ಕವಿನಾಥಲಿಂಗ ಶಿವಾಚಾರ್ಯರು
೨೩೦. ಶ್ರೀ ಜಗದ್ಗುರು ಪರ್ಣಾನಂದಲಿಂಗ ಶಿವಾಚಾರ್ಯರು
೨೩೧. ಶ್ರೀ ಜಗದ್ಗುರು ಶೈಲಪತಿಲಿಂಗ ಶಿವಾಚಾರ್ಯರು
೨೩೨. ಶ್ರೀ ಜಗದ್ಗುರು ಚೈತನ್ಯಲಿಂಗ ಶಿವಾಚಾರ್ಯರು
೨೩೩. ಶ್ರೀ ಜಗದ್ಗುರು ಕೆಂಜೇಶ್ವರಲಿಂಗ ಶಿವಾಚಾರ್ಯರು
೨೩೪. ಶ್ರೀ ಜಗದ್ಗುರು ದ್ವಂದ್ವಾತೀತಲಿಂಗ ಶಿವಾಚಾರ್ಯರು
೨೩೫. ಶ್ರೀ ಜಗದ್ಗುರು ಆಮೋದಲಿಂಗ ಶಿವಾಚಾರ್ಯರು
೨೩೬. ಶ್ರೀ ಜಗದ್ಗುರು ಪಂಚವಕ್ತ್ರಲಿಂಗ ಶಿವಾಚಾರ್ಯರು
೨೩೭. ಶ್ರೀ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯರು
೨೩೮. ಶ್ರೀ ಜಗದ್ಗುರು ಕಾಶೀನಾಥಲಿಂಗ ಶಿವಾಚಾರ್ಯರು
೨೩೯. ಶ್ರೀ ಜಗದ್ಗುರು ಸಂಹಾರಲಿಂಗ ಶಿವಾಚಾರ್ಯರು
೨೪೦. ಶ್ರೀ ಜಗದ್ಗುರು ಶರಭಲಿಂಗ ಶಿವಾಚಾರ್ಯರು
೨೪೧. ಶ್ರೀ ಜಗದ್ಗುರು ಗಧಾಧರಲಿಂಗ ಶಿವಾಚಾರ್ಯರು
೨೪೨. ಶ್ರೀ ಜಗದ್ಗುರು ಗಗನಲಿಂಗ ಶಿವಾಚಾರ್ಯರು
೨೪೩. ಶ್ರೀ ಜಗದ್ಗುರು ಉತ್ತಮಲಿಂಗ ಶಿವಾಚಾರ್ಯರು
೨೪೪. ಶ್ರೀ ಜಗದ್ಗುರು ವಿಭವಲಿಂಗ ಶಿವಾಚಾರ್ಯರು
೨೪೫. ಶ್ರೀ ಜಗದ್ಗುರು ಪಾರಿಜಾತಲಿಂಗ ಶಿವಾಚಾರ್ಯರು
೨೪೬. ಶ್ರೀ ಜಗದ್ಗುರು ಬಾಲರೂಪಲಿಂಗ ಶಿವಾಚಾರ್ಯರು
೨೪೭. ಶ್ರೀ ಜಗದ್ಗುರು ಅಮರಲಿಂಗ ಶಿವಾಚಾರ್ಯರು
೨೪೮. ಶ್ರೀ ಜಗದ್ಗುರು ಪರಮಾಣುಲಿಂಗ ಶಿವಾಚಾರ್ಯರು
೨೪೯. ಶ್ರೀ ಜಗದ್ಗುರು ಪರಶುರಾಮಲಿಂಗ ಶಿವಾಚಾರ್ಯರು
೨೫೦. ಶ್ರೀ ಜಗದ್ಗುರು ನಾಗೇಶಲಿಂಗ ಶಿವಾಚಾರ್ಯರು
೨೫೧. ಶ್ರೀ ಜಗದ್ಗುರು ಉದಯಲಿಂಗ ಶಿವಾಚಾರ್ಯರು
೨೫೨. ಶ್ರೀ ಜಗದ್ಗುರು ಉದಾರಲಿಂಗ ಶಿವಾಚಾರ್ಯರು
೨೫೩. ಶ್ರೀ ಜಗದ್ಗುರು ಕಾರಣಲಿಂಗ ಶಿವಾಚಾರ್ಯರು
೨೫೪. ಶ್ರೀ ಜಗದ್ಗುರು ಪದ್ಮನಾಭಲಿಂಗ ಶಿವಾಚಾರ್ಯರು
೨೫೫. ಶ್ರೀ ಜಗದ್ಗುರು ಅಘೋರಲಿಂಗ ಶಿವಾಚಾರ್ಯರು
೨೫೬. ಶ್ರೀ ಜಗದ್ಗುರು ಜಯನಾಥಲಿಂಗ ಶಿವಾಚಾರ್ಯರು
೨೫೭. ಶ್ರೀ ಜಗದ್ಗುರು ವೀತರಾಗಲಿಂಗ ಶಿವಾಚಾರ್ಯರು
೨೫೮. ಶ್ರೀ ಜಗದ್ಗುರು ಚಂದ್ರಲಿಂಗ ಶಿವಾಚಾರ್ಯರು
೨೫೯. ಶ್ರೀ ಜಗದ್ಗುರು ವಿಚಿತ್ರಲಿಂಗ ಶಿವಾಚಾರ್ಯರು
೨೬೦. ಶ್ರೀ ಜಗದ್ಗುರು ಸುಂದರಲಿಂಗ ಶಿವಾಚಾರ್ಯರು
೨೬೧. ಶ್ರೀ ಜಗದ್ಗುರು ಅಷ್ಟಮೂರ್ತಿಲಿಂಗ ಶಿವಾಚಾರ್ಯರು
೨೬೨. ಶ್ರೀ ಜಗದ್ಗುರು ಯಜ್ಞಲಿಂಗ ಶಿವಾಚಾರ್ಯರು
೨೬೩. ಶ್ರೀ ಜಗದ್ಗುರು ಸತ್ಯರೂಪಲಿಂಗ ಶಿವಾಚಾರ್ಯರು
೨೬೪. ಶ್ರೀ ಜಗದ್ಗುರು ಸ್ವರೂಪಲಿಂಗ ಶಿವಾಚಾರ್ಯರು
೨೬೫. ಶ್ರೀ ಜಗದ್ಗುರು ಕಲ್ಯಾಣಲಿಂಗ ಶಿವಾಚಾರ್ಯರು
೨೬೬. ಶ್ರೀ ಜಗದ್ಗುರು ಪುರಾಣಲಿಂಗ ಶಿವಾಚಾರ್ಯರು
೨೬೭. ಶ್ರೀ ಜಗದ್ಗುರು ಸ್ವಭಾವಲಿಂಗ ಶಿವಾಚಾರ್ಯರು
೨೬೮. ಶ್ರೀ ಜಗದ್ಗುರು ವಿಶೇಷಲಿಂಗ ಶಿವಾಚಾರ್ಯರು
೨೬೯. ಶ್ರೀ ಜಗದ್ಗುರು ವೈದ್ಯಲಿಂಗ ಶಿವಾಚಾರ್ಯರು
೨೭೦. ಶ್ರೀ ಜಗದ್ಗುರು ಪ್ರಾಣೇಶಲಿಂಗ ಶಿವಾಚಾರ್ಯರು
೨೭೧. ಶ್ರೀ ಜಗದ್ಗುರು ಧನಲಿಂಗ ಶಿವಾಚಾರ್ಯರು
೨೭೨. ಶ್ರೀ ಜಗದ್ಗುರು ಪ್ರಕಾಶಲಿಂಗ ಶಿವಾಚಾರ್ಯರು
೨೭೩. ಶ್ರೀ ಜಗದ್ಗುರು ಬ್ರಹ್ಮಣ್ಯಲಿಂಗ ಶಿವಾಚಾರ್ಯರು
೨೭೪. ಶ್ರೀ ಜಗದ್ಗುರು ನಿರ್ಮಲಲಿಂಗ ಶಿವಾಚಾರ್ಯರು
೨೭೫. ಶ್ರೀ ಜಗದ್ಗುರು ಸ್ವೈತಲಿಂಗ ಶಿವಾಚಾರ್ಯರು

೨೭೬. ಶ್ರೀ ಜಗದ್ಗುರು ನಾರಾಯಣಲಿಂಗ ಶಿವಾಚಾರ್ಯರು
೨೭೭. ಶ್ರೀ ಜಗದ್ಗುರು ಗೌರಿಲಿಂಗ ಶಿವಾಚಾರ್ಯರು
೨೭೮. ಶ್ರೀ ಜಗದ್ಗುರು ಪ್ರಕಾಶಲಿಂಗ ಶಿವಾಚಾರ್ಯರು
೨೭೯. ಶ್ರೀ ಜಗದ್ಗುರು ವಿದೇಹಲಿಂಗ ಶಿವಾಚಾರ್ಯರು
೨೮೦. ಶ್ರೀ ಜಗದ್ಗುರು ಪ್ರಮಾಣಲಿಂಗ ಶಿವಾಚಾರ್ಯರು
೨೮೧. ಶ್ರೀ ಜಗದ್ಗುರು ಸ್ವಸ್ತಿಕಲಿಂಗ ಶಿವಾಚಾರ್ಯರು
೨೮೨. ಶ್ರೀ ಜಗದ್ಗುರು ಸದಾನಂದಲಿಂಗ ಶಿವಾಚಾರ್ಯರು
೨೮೩. ಶ್ರೀ ಜಗದ್ಗುರು ದುರ್ಗಮಲಿಂಗ ಶಿವಾಚಾರ್ಯರು
೨೮೪. ಶ್ರೀ ಜಗದ್ಗುರು ಚಿರಂತರಲಿಂಗ ಶಿವಾಚಾರ್ಯರು
೨೮೫. ಶ್ರೀ ಜಗದ್ಗುರು ವಸಂತಸರಲಿಂಗ ಶಿವಾಚಾರ್ಯರು
೨೮೬. ಶ್ರೀ ಜಗದ್ಗುರು ರಹಸ್ಯಲಿಂಗ ಶಿವಾಚಾರ್ಯರು
೨೮೭. ಶ್ರೀ ಜಗದ್ಗುರು ಜ್ಞಾನದೀಪಲಿಂಗ ಶಿವಾಚಾರ್ಯರು
೨೮೮. ಶ್ರೀ ಜಗದ್ಗುರು ವಿಶೋಕಲಿಂಗ ಶಿವಾಚಾರ್ಯರು
೨೮೯. ಶ್ರೀ ಜಗದ್ಗುರು ಜನಾರ್ದನಲಿಂಗ ಶಿವಾಚಾರ್ಯರು
೨೯೦. ಶ್ರೀ ಜಗದ್ಗುರು ಕೃತಜ್ಞಲಿಂಗ ಶಿವಾಚಾರ್ಯರು
೨೯೧. ಶ್ರೀ ಜಗದ್ಗುರು ಧರ್ಮರಾಜಲಿಂಗ ಶಿವಾಚಾರ್ಯರು
೨೯೨. ಶ್ರೀ ಜಗದ್ಗುರು ಜಟಾಧರಲಿಂಗ ಶಿವಾಚಾರ್ಯರು
೨೯೩. ಶ್ರೀ ಜಗದ್ಗುರು ಖ್ಯಾತಲಿಂಗ ಶಿವಾಚಾರ್ಯರು
೨೯೪. ಶ್ರೀ ಜಗದ್ಗುರು ದುರ್ಲಭಲಿಂಗ ಶಿವಾಚಾರ್ಯರು
೨೯೫. ಶ್ರೀ ಜಗದ್ಗುರು ವಿಶೂಲಲಿಂಗ ಶಿವಾಚಾರ್ಯರು
೨೯೬. ಶ್ರೀ ಜಗದ್ಗುರು ಕಲ್ಪರಾಜಲಿಂಗ ಶಿವಾಚಾರ್ಯರು
೨೯೭. ಶ್ರೀ ಜಗದ್ಗುರು ಅಭಿರಾಮಲಿಂಗ ಶಿವಾಚಾರ್ಯರು
೨೯೮. ಶ್ರೀ ಜಗದ್ಗುರು ವರುಣಲಿಂಗ ಶಿವಾಚಾರ್ಯರು
೨೯೯. ಶ್ರೀ ಜಗದ್ಗುರು ಅಜರಲಿಂಗ ಶಿವಾಚಾರ್ಯರು
೩೦೦. ಶ್ರೀ ಜಗದ್ಗುರು ದೇವದೇವಲಿಂಗ ಶಿವಾಚಾರ್ಯರು
೩೦೧. ಶ್ರೀ ಜಗದ್ಗುರು ಕಪಿಲಲಿಂಗ ಶಿವಾಚಾರ್ಯರು
೩೦೨. ಶ್ರೀ ಜಗದ್ಗುರು ಬಾಲಚಂದ್ರಲಿಂಗ ಶಿವಾಚಾರ್ಯರು
೩೦೩. ಶ್ರೀ ಜಗದ್ಗುರು ಮುರಾರಿಲಿಂಗ ಶಿವಾಚಾರ್ಯರು
೩೦೪. ಶ್ರೀ ಜಗದ್ಗುರು ಅಮಲಲಿಂಗ ಶಿವಾಚಾರ್ಯರು
೩೦೫. ಶ್ರೀ ಜಗದ್ಗುರು ಕಾಮಲಿಂಗ ಶಿವಾಚಾರ್ಯರು
೩೦೬. ಶ್ರೀ ಜಗದ್ಗುರು ತ್ರಿಕಾಮಲಿಂಗ ಶಿವಾಚಾರ್ಯರು
೩೦೭. ಶ್ರೀ ಜಗದ್ಗುರು ಚಾಂದಲಿಂಗ ಶಿವಾಚಾರ್ಯರು
೩೦೮. ಶ್ರೀ ಜಗದ್ಗುರು ವೀರಭದ್ರಲಿಂಗ ಶಿವಾಚಾರ್ಯರು
೩೦೯. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೩೧೦. ಶ್ರೀ ಜಗದ್ಗುರು ಶಿವಲಿಂಗ ಶಿವಾಚಾರ್ಯರು
೩೧೧. ಶ್ರೀ ಜಗದ್ಗುರು ಸಿತಂಬರಲಿಂಗ ಶಿವಾಚಾರ್ಯರು
೩೧೨. ಶ್ರೀ ಜಗದ್ಗುರು ಮಹಾಲಿಂಗ ಶಿವಾಚಾರ್ಯರು
೩೧೩. ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರು
೩೧೪. ಶ್ರೀ ಜಗದ್ಗುರು ವಸುಲಿಂಗ ಶಿವಾಚಾರ್ಯರು
೩೧೫. ಶ್ರೀ ಜಗದ್ಗುರು ಸಿತಂಬರಲಿಂಗ ಶಿವಾಚಾರ್ಯರು
೩೧೬. ಶ್ರೀ ಜಗದ್ಗುರು ವೈದ್ಯಲಿಂಗ ಶಿವಾಚಾರ್ಯರು
೩೧೭. ಶ್ರೀ ಜಗದ್ಗುರು ಕೇದಾರಲಿಂಗ ಶಿವಾಚಾರ್ಯರು
೩೧೮. ಶ್ರೀ ಜಗದ್ಗುರು ಗಣೇಶಲಿಂಗ ಶಿವಾಚಾರ್ಯರು
೩೧೯. ಶ್ರೀ ಜಗದ್ಗುರು ವಿಶ್ವಲಿಂಗ ಶಿವಾಚಾರ್ಯರು
೩೨೦. ಶ್ರೀ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯರು
೩೨೧. ಶ್ರೀ ಜಗದ್ಗುರು ವಿಶ್ವನಾಥಲಿಂಗ ಶಿವಾಚಾರ್ಯರು
೩೨೨. ಶ್ರೀ ಜಗದ್ಗುರು ಶಾಂತಲಿಂಗ ಶಿವಾಚಾರ್ಯರು
೩೨೩. ಶ್ರೀ ಜಗದ್ಗುರು ಸಿದ್ಧೇಶ್ವರಲಿಂಗ ಶಿವಾಚಾರ್ಯರು
೩೨೪. ಶ್ರೀ ಜಗದ್ಗುರು ಭೀಮಶಂಕರಲಿಂಗ ಶಿವಾಚಾರ್ಯರು

ವಿ. ಸೂಚನೆ : ಕೇದಾರ ಪೀಠದ ಜಗದ್ಗುರು ಪರಂಪರೆಯ ಈ ಹೆಸರುಗಳನ್ನು ಪಂಡಿತ ಹರಿಕೃಷ್ಣ ರತೂಡಿ ಇವರಿಂದ ವಿರಚಿತವಾದ "ಗಢವಾಲ ಕಾ ಇತಿಹಾಸ" (೧೯೨೮ ನೆಯ ಇಸ್ವಿ) (ಗಢವಾಲ ಪ್ರೆಸ್, ದೆಹರಾದೂನ) ಪುಸ್ತಕದಿಂದ ತೆಗೆದುಕೊಳ್ಳಲಾಗಿದೆ.

ಶ್ರೀ ಶ್ರೀಶೈಲ ಪೀಠದ ಪರಂಪರೆ

ಶ್ರೀಶೈಲವು ದ್ವಾದಶಜ್ಯೋತಿರ್ಲಿಂಗಗಳಲ್ಲೊಂದಾದ ಶ್ರೀ ಮಲ್ಲಿಕಾರ್ಜುನ ಶಿವಲಿಂಗ ಹಾಗೂ ಭ್ರಮರಾಂಬಾ ದೇವಿಯರ ಸನ್ನಿಧಾನದಿಂದ ಸಾಕ್ಷಾತ್ ಭೂಲೋಕದ ಕೈಲಾಸದಂತೆ ಕಂಗೊಳಿಸುತ್ತಿದೆ. ಪುರಾತನ ಕಾಲದಲ್ಲಿ ಶಿಲಾದಮಹರ್ಷಿಯ ಮಗನಾದ "ಪರ್ವತ"ನು ತಂದೆಯಂತೆ ಶ್ರೀಶೈಲ ಕ್ಷೇತ್ರದ ಜ್ಯೋತಿರ್ಲಿಂಗದ ಸನ್ನಿಧಾನದಲ್ಲಿ ಘೋರ ತಪಸ್ಸನ್ನಾಚರಿಸಿದನು. ಆಗ ಶಿವನು ಪ್ರತ್ಯಕ್ಷನಾಗಿ 'ನಿನಗೆ ಏನು ವರ ಬೇಕು?' ಎಂದು ಕೇಳಲಾಗಿ – "ನೀನು ನನಗೆ ಈ ಲಿಂಗದಲ್ಲಿ ದಿನಾಲೂ ಮೂರುಸಾರೆ ದರ್ಶನ ಕೊಡಬೇಕು" ಎಂದು ಬೇಡಿಕೊಂಡನು. ಅದರಂತೆ ಮಲ್ಲಿಕಾರ್ಜುನನು ಪ್ರತಿದಿವಸ "ಪರ್ವತ"ನಿಗೆ ದರ್ಶನ ಕೊಡತೊಡಗಿದನು. ಅಂದಿನಿಂದ ಈ ಲಿಂಗಕ್ಕೆ "ಪರ್ವತಮಲ್ಲಯ್ಯಾ" ಎಂಬ ರೂಢಿನಾಮವು ಪ್ರಸಿದ್ಧವಾಯಿತು. ಇದೂ ಅಲ್ಲದೇ ಮಧ್ಯಮ ಪಾಂಡವನಾದ ಅರ್ಜುನನು ಮಲ್ಲಿಗೆ ಹೂಗಳಿಂದ ಪರಮಾತ್ಮನನ್ನು ಪೂಜಿಸಿ, ಸಾಕ್ಷಾತ್ಕರಿಸಿಕೊಂಡಾಗ ತನ್ನ ಭಕ್ತನಾದ ಅರ್ಜುನನ ಹಾಗೂ ಅವನ ಪೂಜೆಯ ಸಾಮಗ್ರಿಯಾದ ಮಲ್ಲಿಗೆ ಹೂವಿನ ಹೆಸರುಗಳನ್ನು ಅಜರಾಮರ ಮಾಡುವುದಕ್ಕಾಗಿ ಪರಮಾತ್ಮನು ಅವೆರಡು ಹೆಸರುಗಳನ್ನು (ಮಲ್ಲಿಕಾ + ಅರ್ಜುನ) ಜೋಡಿಸಿಕೊಂಡು "ಮಲ್ಲಿಕಾರ್ಜುನ"ನೆಂಬ ಅಭಿಧಾನದಿಂದ ಕಂಗೊಳಿಸಿದನೆಂಬ ಉಕ್ತಿಯೂ ಪ್ರಸಿದ್ಧವಾಗಿದೆ.

ಚಂದ್ರಗುಪ್ತ ಮೌರ್ಯನು ತನ್ನ ಸಹೋದರರಾದ ನವನಂದರನ್ನು ಕೊಲ್ಲಿಸಿದ ಪಾಪದ ಪರಿಣಾಮವಾಗಿ ಕಾಲಾಂತರದಲ್ಲಿ ರಾಜ್ಯಭ್ರಷ್ಟನಾಗಿ ದೇಶ ಸಂಚರಿಸುತ್ತಾ ಶ್ರೀಶೈಲಕ್ಕೆ ಬಂದನು. ಇವನ ಮಗಳಾದ ಚಂದ್ರಾವತಿಯು ವಿವಾಹವಾಗದೆ ಬ್ರಹ್ಮಚಾರಿಣಿಯಾಗಿದ್ದು, ತಂದೆಯು ಮಾಡಿದ ಪಾಪನಿವೃತ್ತಿಗಾಗಿ ಅನೇಕ ವ್ರತಗಳನ್ನಾಚರಿಸುತ್ತ ಕೊನೆಗೆ ಆ ಕ್ಷೇತ್ರದ ಜ್ಯೋತಿರ್ಲಿಂಗದ ಮಹಿಮೆಯನ್ನರಿತು ಆ ಶಿವಲಿಂಗವನ್ನು ಮಲ್ಲಿಗೆ ಹೂಗಳಿಂದ ಪೂಜಿಸಿ ಶಿವನ ಅನುಗ್ರಹವನ್ನು ಪಡೆದಳೆಂಬ ಕಾರಣದಿಂದಲೂ ಆ ಜ್ಯೋತಿರ್ಲಿಂಗಕ್ಕೆ "ಮಲ್ಲಿಕಾರ್ಜುನ" ಎಂಬ ಹೆಸರು ಬಂದುದಾಗಿ ಆ ಕ್ಷೇತ್ರಮಹಿಮೆಯನ್ನು ಹೇಳುವ ಗ್ರಂಥಗಳಿಂದ ತಿಳಿದುಬರುತ್ತದೆ.

ಶ್ರೀಶೈಲದ ದರ್ಶನೀಯ ಸ್ಥಳಗಳು :

ಶ್ರೀಶೈಲವು ಕೇವಲ ದೇವಸ್ಥಾನದಿಂದ ಮಾತ್ರವಲ್ಲ, ಇದು ಶ್ರೀ ಜಗದ್ಗುರು ಪಂಚಾಚಾರ್ಯರಲ್ಲೊಬ್ಬರಾದ ಶ್ರೀ ಜಗದ್ಗುರು ಪಂಡಿತಾರಾಧ್ಯರ ಭವ್ಯವಾದ ಗುರುಪೀಠದಿಂದಲೂ ಕಂಗೊಳಿಸುತ್ತಿದೆ. ಇಲ್ಲಿ ಶ್ರೀ ಜಗದ್ಗುರು ಪಂಡಿತಾರಾಧ್ಯರ ಪೀಠದ ಜೊತೆಗೆ ಅನೇಕ ಮಠಗಳು ಪ್ರಾಚೀನ ಕಾಲದಿಂದಲೂ ಕಂಗೊಳಿಸುತ್ತಿವೆ. ಅವುಗಳಲ್ಲಿ ಶೀಲವಂತರಮಠ, ಘಂಟಾಕರ್ಣಮಠ, ಸಾರಂಗಮಠ, ವಿಭೂತಿಮಠ, ರುದ್ರಾಕ್ಷಿಮಠ, ನಂದಿಕೇಶ್ವರಮಠ, ವಟಸಿದ್ಧಮಠ, ಚಂದ್ರಗುಂಡಮಠ, ಕಮರೀಮಠ ಮುಂತಾದವುಗಳು ಇಂದಿಗೂ ಅಸ್ತಿತ್ವದಲ್ಲಿವೆ. ಆದರೆ ಇವುಗಳಲ್ಲಿ ಅನೇಕ ಮಠಗಳು ಬಹಳ ಜೀರ್ಣಾವಸ್ಥೆಯಲ್ಲಿವೆ. ಅಂತೆಯೇ –

ಶ್ರೀಶೈಲಂ ಶಿಖರೇಶ್ವರಂ ಗಣಪತಿಂ ಶ್ರೀಹಾಟಕೇಶಂ ಪುನಃ ।
ಸಾರಂಗೇಶ್ವರ ಬಿಂದುತೀರ್ಥಮಮಲಂ ಘಂಟಾರ್ಕ ಸಿದ್ಧೇಶ್ವರಂ ॥
ಗಂಗಾ ಶ್ರೀ ಭ್ರಮರಾಂಬಿಕಾ ಗಿರಿಸುತಾಮಾರಾಮ ವೀರೇಶ್ವರಂ ।
ಶಂಖಂ ಚಕ್ರವರಾಹತೀರ್ಥಮನಿಶಂ ಶ್ರೀಶೈಲನಾಥಂ ಭಜೇ ॥

ಈ ರೀತಿಯಾಗಿ ಶ್ರೀಶೈಲದ ಮಹತ್ವಪೂರ್ಣವಾದ ಸ್ಥಾನಗಳನ್ನು ಪ್ರತಿಪಾದಿಸುತ್ತಿರುವ ಈ ಪದ್ಯವು ಪುರಾತನ ಕಾಲದಿಂದಲೂ ಪ್ರಚಾರದಲ್ಲಿದೆ. ಆದ್ದರಿಂದ ಯಾತ್ರಾರ್ಥಿಗಳಾಗಿ ಶ್ರೀಶೈಲಕ್ಕೆ ಹೋದ ಪ್ರತಿಯೊಬ್ಬ ಯಾತ್ರಿಕನೂ ಈ ಕ್ಷೇತ್ರದಲ್ಲಿಯ ಹಾಟಕೇಶ್ವರ (ಅಡಕೇಶ್ವರ), ಶಿಖರೇಶ್ವರ, ಗಣಪತಿ, ಪಂಚಧಾರಾ, ಪಲ್ಲಧಾರಾ, ಭ್ರಮರಾಂಬಾ, ಮಲ್ಲಿಕಾರ್ಜುನ ಮತ್ತು ಶ್ರೀ ಜಗದ್ಗುರು ಪಂಡಿತಾರಾಧ್ಯ ಮುಂತಾದ ಪರಮ ಪವಿತ್ರ ಸ್ಥಾನಗಳ ದರ್ಶನವನ್ನು ಅವಶ್ಯವಾಗಿ ಮಾಡುತ್ತಾನೆ. ಕಾಶಿಯಲ್ಲಿ ಮರಣ ಹೊಂದಿದರೆ ಮುಕ್ತಿಯನ್ನು ಹೇಳಿದ ಮಹರ್ಷಿಗಳು – "ಶ್ರೀಶೈಲ ಶಿಖರೇ ದೃಷ್ಟ್ವೇ ಪುನರ್ಜನ್ಮ ನ ವಿದ್ಯತೇ", "ಶ್ರೀಶೈಲ ದರ್ಶನಾನ್ಮುಕ್ತಿಃ" ಎಂಬುದಾಗಿ ಕೇವಲ ಶ್ರೀಗಿರಿಯ ಶಿಖರ ದರ್ಶನ ಮಾತ್ರದಿಂದ ಮುಕ್ತಿ ಎಂಬುದಾಗಿ ಹೇಳಿ ಈ ಸ್ಥಾನದ ಮಹತ್ವವನ್ನು ಬಹುವಾಗಿ ಹೊಗಳಿದ್ದಾರೆ.

ಶ್ರೀ ಜಗದ್ಗುರು ಪಂಡಿತಾರಾಧ್ಯ ಪೀಠ :

ಶ್ರೀ ಮಲ್ಲಿಕಾರ್ಜುನ ಹಾಗೂ ಭ್ರಮರಾಂಬಾ ದೇವಸ್ಥಾನಗಳ ಮಧ್ಯದಲ್ಲಿ ಶ್ರೀ ಜಗದ್ಗುರು ಪಂಡಿತಾರಾಧ್ಯ ಪೀಠವು ಕಂಗೊಳಿಸುತ್ತಿದೆ.

ಸುಧಾಕುಂಡಾಖ್ಯ ಸುಕ್ಷೇತ್ರೇ ಮಲ್ಲಿಕಾರ್ಜುನಲಿಂಗತಃ ।
ಜನನಂ ಪಂಡಿತಾರ್ಯಸ್ಯ ನಿವಾಸಃ ಶ್ರೀಗಿರೌ ಶಿವೇ ॥
ವೃಷಗೋತ್ರಾದಿನಾಥಶ್ಚ ಸಿಂಹಾಸನಪತಿಶ್ಚಯಃ ।
ಪಂಡಿತಾರಾಧ್ಯ ಸನ್ನಾಮಾ ಜಗದ್ಗುರುತಮಶ್ಚ ಸಃ ॥

(ಸುಪ್ರಭೇದಾಗಮ)

ಇವೇ ಮೊದಲಾದ ಆಗಮ ವಚನಗಳ ಆಧಾರದಿಂದ ಶ್ರೀ ಜಗದ್ಗುರು ಪಂಡಿತಾರಾಧ್ಯ ಭಗವತ್ಪಾದರು ಶ್ರೀಶೈಲ ಮಲ್ಲಿಕಾರ್ಜುನ ಜ್ಯೋತಿರ್ಲಿಂಗದಿಂದ ದಿವ್ಯದೇಹಧಾರಿಗಳಾಗಿ ಅವತರಿಸಿ ಶ್ರೀಶೈಲ ಕ್ಷೇತ್ರದಲ್ಲಿಯೇ ಧರ್ಮೋಪದೇಶಕ್ಕಾಗಿ ಒಂದು ಪೀಠವನ್ನು ಸಂಸ್ಥಾಪಿಸಿದರು. ಇದನ್ನು "ಶ್ರೀಶೈಲ ಪೀಠ" ಅಥವಾ "ಸೂರ್ಯಸಿಂಹಾಸನ" ಎಂದು ಕರೆಯುತ್ತಾರೆ. ಈ ಪೀಠಾಚಾರ್ಯರು ಧೇನುಕರ್ಣ ಶಾಖೆಯ ಹಾಗೂ ವೃಷಭ ಗೋತ್ರದ ಅಧಿಪತಿಗಳಾಗಿದ್ದಾರೆ. ಶಿವನ ತತ್ಪುರುಷಮುಖ ಸಂಜಾತರಾದ ಶ್ರೀ ಜಗದ್ಗುರು ಪಂಡಿತಾರಾಧ್ಯರು ಪ್ರತಿಯೊಂದು ಯುಗದಲ್ಲೂ ಅವತರಿಸಿರುವುದರಿಂದ ಇವರಿಗೆ ಕೃತಯುಗದಲ್ಲಿ ಶ್ರೀ ಜಗದ್ಗುರು ಚತುರಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ಶ್ರೀ ಜಗದ್ಗುರು ಚತುರ್ವಕ್ತ್ರ ಶಿವಾಚಾರ್ಯ, ದ್ವಾಪರಯುಗದಲ್ಲಿ ಶ್ರೀ ಜಗದ್ಗುರು ಧೇನುಕರ್ಣ ಶಿವಾಚಾರ್ಯ ಮತ್ತು ಕಲಿಯುಗದಲ್ಲಿ ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯ ಎಂಬ ನಾಮಗಳು ಪ್ರಸಿದ್ಧವಾಗಿದ್ದವು.

ಶ್ರೀ ಪಂಚಾಕ್ಷರಿ ಮಹಾಮಂತ್ರಗಳನ್ನು ಒಂದು ಸಾರೆ ಉಚ್ಚರಿಸಿ ಎಲ್ಲ ನಾರಕಿಗಳನ್ನೂ ಉದ್ಧಾರ ಮಾಡಿದ ಶ್ರೀ ಸಾನಂದ ಮಹರ್ಷಿಗಳು ಈ ಪೀಠದ ದ್ವಾಪರಯುಗದ ಆಚಾರ್ಯರಾದ ಶ್ರೀ ಜಗದ್ಗುರು ಧೇನುಕರ್ಣ ಶಿವಾಚಾರ್ಯ ಭಗವತ್ಪಾದರಿಂದ ಶಿವಾದ್ವೈತ (ವೀರಶೈವ ಸಿದ್ಧಾಂತ ತತ್ತ್ವಗಳ) ಉಪದೇಶವನ್ನು ಪಡೆದು ಧನ್ಯರಾಗಿದ್ದಾರೆ.

ಸನಾತನವಾದ ಈ ಪೀಠದ ಪ್ರಾಚೀನತೆಯನ್ನು ಪೌರಾಣಿಕ ಹಾಗೂ ಐತಿಹಾಸಿಕ ದಾಖಲೆಗಳಿಂದ ಸ್ಥಿರಗೊಳಿಸಬೇಕಾಗುತ್ತದೆ. ಶ್ರೀ ವ್ಯಾಸಮಹರ್ಷಿಗಳು ಸ್ಕಂದ ಪುರಾಣದ ಶಂಕರ ಸಂಹಿತೆಯ ಉತ್ತರ ಭಾಗದಲ್ಲಿಯ ಶ್ರೀಶೈಲ ಖಂಡದ ೮೫ನೇ ಅಧ್ಯಾಯದಲ್ಲಿ –

ತಸ್ಮಿನ್ ಶ್ರೀ ಪರ್ವತೇ ಪುಣ್ಯೇ ಸಂಸಾರಾಭಯ ಭೇಷಜೇ ।
ಅಸ್ತೇ ಲಿಂಗಾಂಗಸಂಬಂಧೀ ಸದಾನಂದಾಹ್ವಯೋ ಮುನಿಃ ॥ ೬೨॥
ಸರ್ವೋಪನಿಷದರ್ಥಜ್ಞಃ ಶಿವಧ್ಯಾನಪರಾಯಣಃ ।
ಭಸ್ಮಾವಲಿಪ್ತ ಸರ್ವಾಂಗೋ ರುದ್ರಾಧ್ಯಾಯಜಪಾಶ್ರಯಃ ॥೬೩॥
ರುದ್ರಾಕ್ಷಮಾಲಾ ಭರಣೋ ಧೃತಪಾಶುಪತವ್ರತಃ ।
ಅತಿವರ್ಣಾಶ್ರಮೀ ಯೋಗೀ ಜೀವನ್ಮುಕ್ತೋ ಜಗದ್ಗುರುಃ ॥೬೪॥

ಈ ರೀತಿಯಾಗಿ ಮಹಾಮಹಿಮಾಶಾಲಿಯಾಗಿ, ಯೋಗಿವರೇಣ್ಯರೂ ಆದ ಶ್ರೀ ಜಗದ್ಗುರು ಸದಾನಂದ ಮಹಾಸ್ವಾಮಿಗಳು ಶ್ರೀಶೈಲ ಪೀಠದ ಜಗದ್ಗುರುಗಳಾಗಿದ್ದರೆಂಬುದನ್ನು ವರ್ಣಿಸುತ್ತಾರೆ. ಇದೂ ಅಲ್ಲದೇ ಅವರ ಮಹಿಮೆಯನ್ನು ವರ್ಣಿಸುತ್ತಾ –

ಆಹೂಯ ಪಿಂಗಳಂ ಶಿಷ್ಯಮಿದಂ ವಾಕ್ಯಮಭಾಷತ ।
ಅದ್ಯ ಪ್ರಭೃತಿ ಸಾಧೋ ತ್ವಂ ತ್ರಿಪುಂಡ್ರಂ ಭಸ್ಮನಾವಹ ॥೧೧೨॥
ಸರ್ವಾಂಗೋದ್ಧೂಳನಂ ನಿತ್ಯಂ ಕುರು ಧರ್ಮಪರಾಯಣಃ ।
ಅಗ್ನಿರಿತ್ಯಾದಿಭಿರ್ಮಂತ್ರೈಃ ಶ್ರೀಮತ್ಪಂಚಾಕ್ಷರೇಣ ವಾ ॥೧೧೩॥

ರುದ್ರಮಂತ್ರ ಜಪಾಭ್ಯಾಸಪರೋ ಭವ ಸಮಾಹಿತಃ ।
ಯಾವಜ್ಜೀವಮಿದಂ ದತ್ತಮಿಷ್ಟಲಿಂಗಂ ಸಮರ್ಚಯ ॥೧೧೪॥
ಕರಾಬ್ಜಪೀಠೇ ವಿನ್ಯಸ್ಯ ತದ್ಧ್ಯಾನಾಸಕ್ತ ಮಾನಸಃ ।
ಲಿಂಗಾಂಗಸಂಗಿನಾ ವತ್ಸ ಪುನರ್ಜನ್ಮ ನ ವಿದ್ಯತೇ ॥೧೧೫॥

ಯುಗಪದ್ ಜ್ಞಾನಸಿದ್ಧಿಃಸ್ಯಾತ್ ತತೋ ಮೋಕ್ಷಮವಾಪ್ನುಯಾತ್ ।
ತಸ್ಮಾತ್ತ್ವಂ ಪ್ರಾಣಲಿಂಗಾಂಗ ಸಂಬಂಧೀ ಭವ ಸರ್ವದಾ ॥೧೧೬॥

ಈ ರೀತಿಯಾಗಿ ಶ್ರೀ ಸದಾನಂದ ಜಗದ್ಗುರುಗಳ ಕರ್ತೃತ್ವಶಕ್ತಿಯನ್ನು ಪ್ರತಿಪಾದಿಸಿರುತ್ತಾರೆ. ತಾತ್ಪರ್ಯವೇನೆಂದರೆ – ಶ್ವೇತನೆಂಬ ಶ್ರೀಮಂತನ ಮಗನಾದ ಪಿಂಗಳನಿಗೆ ಮಹಾರೋಗವು ಪ್ರಾಪ್ತವಾಗಿರುತ್ತದೆ. ಆಗ ಹರಪ್ರಿಯನೆಂಬ ಸದ್ಭಕ್ತನಿಂದ ಶ್ವೇತನು ಶ್ರೀ ಜಗದ್ಗುರು ಸದಾನಂದ ಮಹಾಸ್ವಾಮಿಗಳವರ ಮಹಿಮಾತಿಶಯವನ್ನು ತಿಳಿದು ತನ್ನ ಮಗನಾದ ಪಿಂಗಳನನ್ನು ಶ್ರೀಶೈಲಕ್ಕೆ ಕರೆದೊಯ್ದು ಶ್ರೀ ಜಗದ್ಗುರು ಮಹಾಸನ್ನಿಧಿಗೆ ಸಮರ್ಪಿಸುತ್ತಾನೆ. ಆಗ ಅವರು ಪಾದೋದಕ, ಪ್ರಸಾದಗಳಿಂದ ಅವನ ರೋಗವನ್ನು ನಿವಾರಿಸಿ, ಅವನಿಗೆ ದೀಕ್ಷೆಯನ್ನು ನೀಡಿ, ಇಷ್ಟಲಿಂಗ, ಭಸ್ಮ, ರುದ್ರಾಕ್ಷ ಮತ್ತು ಮಂತ್ರಗಳನ್ನು ಅನುಗ್ರಹಿಸಿ, ಶಿವಧ್ಯಾನದಲ್ಲಿ ಕಾಲಕಳೆಯುವಂತೆ ಅಪ್ಪಣೆ ಕೊಡಿಸುತ್ತಾರೆ.

ಸ್ಕಂದ ಪುರಾಣದ ಈ ವಿಷಯವನ್ನು ಅವಲೋಕಿಸಿದಾಗ ಶ್ರೀಶೈಲ ಪೀಠವು ಅದೆಷ್ಟು ಪ್ರಾಚೀನವಾದುದೆಂಬುದು ತಿಳಿದುಬರುತ್ತದೆ. ಶ್ರೀಶೈಲ ಮಲ್ಲಿಕಾರ್ಜುನ ದೇವಸ್ಥಾನ (ಶಿವಾಜಿ ಗೋಪುರ)ದ ಉತ್ತರ ಮಹಾದ್ವಾರದ ಕೋಟೆಯ ಗೋಡೆಯ ಮೇಲೆ ದಂಡ ಕಮಂಡಲುಧಾರಿಗಳಾದ ಐದು ಮೂರ್ತಿಗಳನ್ನು ಹಾಗೂ ಮುಂಭಾಗದಲ್ಲಿ ಮೇಳದವರು ಇರುವ ಚಿತ್ರವನ್ನು ಈಗಲೂ ಕಾಣಬಹುದು. ಇದರಿಂದ ಪಂಡಿತಾರಾಧ್ಯ ಪೀಠದ ಜಗದ್ಗುರುಗಳವರು ಉಳಿದ ನಾಲ್ಕು ಪೀಠದ ಜಗದ್ಗುರುಗಳನ್ನು ಬರಮಾಡಿಕೊಂಡು ಉತ್ಸವ ಮಾಡಿದ ವಿಷಯವು ತಿಳಿದುಬರುತ್ತದೆ. ಫೋಟೋ ಯುಗವಲ್ಲದ ಅಂದು ಆ ದೃಶ್ಯವನ್ನು ಶಿಲ್ಪಿಯೋರ್ವನು ಗೋಡೆಯ ಮೇಲೆ ಕೆತ್ತಿ ಸ್ಮಾರಕ ಮಾಡಿದ್ದಾನೆ.

ಅಂದು ಪಂಚಪೀಠಾಧೀಶ್ವರರು ಬಂದುಹೋದ ಸ್ಮಾರಕಗಳಾದ ಪಂಚಮಠಗಳು ಈಗಲೂ ವಿರಾಜಿಸುತ್ತಿವೆ. ಅವುಗಳಲ್ಲಿ ಘಂಟಾಮಠ (ಘಂಟಾಕರ್ಣಮಠ)ವು ಕೇದಾರ ಪೀಠಕ್ಕೆ ಸಂಬಂಧಪಟ್ಟಿದ್ದು. ಅಲ್ಲಿ ಈಗಲೂ ಘಂಟಾಕರ್ಣ ಶಿವಾಚಾರ್ಯರ ಮೂರ್ತಿ ಇದೆ. ಎರಡನೆಯದು ನಂದಿ (ನಂದುಲ) ಮಠವು ಉಜ್ಜಯಿನೀ ಪೀಠಕ್ಕೆ ಸಂಬಂಧಪಟ್ಟದ್ದು. ಮೂರನೆಯ ರುದ್ರಾಕ್ಷಿ ಮಠವು ಕಾಶೀಪೀಠಕ್ಕೆ ಸಂಬಂಧಪಟ್ಟದ್ದು. ಅದರಂತೆ ಸಾರಂಗ ಮಠವು ರಂಭಾಪುರೀ ಪೀಠಕ್ಕೆ ಸಂಬಂಧಪಟ್ಟಿದ್ದಾಗಿದೆ – ಎಂಬ ವಿಷಯವನ್ನು ಲಿಂ॥ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು "ವಿಶ್ವಧರ್ಮವಾದ ವೀರಶೈವ" ಎಂಬ ಪುಸ್ತಕದ ಪುಟ ೫–೮ರಲ್ಲಿ ಅಪ್ಪಣೆ ಕೊಡಿಸಿದ್ದಾರೆ.

ಕ್ರಿ.ಶ. ೯೪೦ರಲ್ಲಿ ಆಗಿಹೋದ ನನ್ನೆಚೋಳದೇವನೆಂಬ ಆಂಧ್ರರಾಜನು ತನ್ನಿಂದ ವಿರಚಿತವಾದ "ಕುಮಾರಸಂಭವ"ವೆಂಬ ಆಂಧ್ರಭಾಷೆಯ ಗ್ರಂಥವನ್ನು "ಶ್ರೀ ಜಂಗಮ ಮಲ್ಲಿಕಾರ್ಜುನ ದೇವಾಚಾರ್ಯ"ನಿಗೆ ಸಮರ್ಪಿಸಿ ಆತನ ಅಸದೃಶವಾದ ಪಾಂಡಿತ್ಯವನ್ನೂ, ಮಹಾಯೋಗಿತ್ವವನ್ನೂ ಮತ್ತು ಶ್ರೀಶೈಲ ಸಿಂಹಾಸನದ ಜಗದ್ಗುರುತ್ವವನ್ನೂ ಸ್ಪಷ್ಟವಾದ ಶಬ್ದಗಳಿಂದ ಪ್ರತಿಪಾದಿಸಿರುತ್ತಾನೆ. ಈ ಗ್ರಂಥವು ೧೯೦೯ರಲ್ಲಿ ರಾಜಮಹೇಂದ್ರ ನಗರ ನಿವಾಸಿಗಳಾದ ಪ್ರೊ. ಎಂ.ವಿ. ರಾಜಕೃಷ್ಣ ಕವಿಗಾರು ಎಂ.ಎ., ಇವರಿಂದ ಪ್ರಕಾಶಿಸಲ್ಪಟ್ಟಿದೆ.

ಇದೂ ಅಲ್ಲದೆ ಕ್ರಿ.ಶ. ೯೮೦ರಲ್ಲಿ ಜನಿಸಿ ೧೦೪೦ರಲ್ಲಿ ಶಿವೈಕ್ಯನಾಗಿರಬಹುದಾದ ಮುದೇನೂರಿನ ದಾಸಿಮಯ್ಯನು ಶ್ರೀಶೈಲ ಪೀಠಾಧೀಶ್ವರರಿಂದ ಶಿವಾದ್ವೈತ ತತ್ತ್ವೋಪದೇಶವನ್ನು ಹೊಂದಿದನೆಂದು ಚಿಲಕೂರಿ ನಾರಾಯಣರಾಯರು ತಿಳಿಸಿದ ವಿಷಯವು ಗಮನಾರ್ಹವಾಗಿದೆ. ಈ ಎಲ್ಲ ದಾಖಲೆಗಳಿಂದ ಶ್ರೀಶೈಲ ಪೀಠವು ೧೦ನೆಯ ಶತಮಾನದ ಪೂರ್ವದಲ್ಲಿಯೇ ಮಹಾವೈಭವಪೂರ್ಣವಾಗಿ ಮೆರೆಯುತ್ತಿತ್ತೆಂದು ವಿದಿತವಾಗುತ್ತದೆ.

ಅನಾದಿಕಾಲದಿಂದ ಅನೇಕ ಜಗದ್ಗುರುಗಳು ಈ ಪೀಠದ ಅಧಿಕಾರವನ್ನು ಹೊಂದಿ ಆಂಧ್ರಪ್ರದೇಶ ಹಾಗೂ ಸುತ್ತಮುತ್ತಲಿನ ಭಾಗಗಳಲ್ಲಿ ವೀರಶೈವ ಧರ್ಮೋಪದೇಶವನ್ನು ಮಾಡಿ ಜನರನ್ನು ಉದ್ಧಾರಗೊಳಿಸಿದ್ದಾರೆ. ಇವರಲ್ಲಿ ಶ್ರೀ ಜಗದ್ಗುರು ಆದಿಪಂಡಿತಾರಾಧ್ಯರ ನಂತರ ಬಂದ ಕೆಲ ಪ್ರಾಚೀನ ಆಚಾರ್ಯರ ಹೆಸರುಗಳು ಹೀಗಿವೆ :

ಶ್ರೀ ಜಗದ್ಗುರು ಸದಾನಂದ ಶಿವಾಚಾರ್ಯರು, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು, ಶ್ರೀ ಜಗದ್ಗುರು ಗಜಕರ್ಣ ಶಿವಾಚಾರ್ಯರು, ಶ್ರೀ ಜಗದ್ಗುರು ಸಂಗಮ ಶಿವಾಚಾರ್ಯರು, ಶ್ರೀ ಜಗದ್ಗುರು ತ್ರಿರಂಗುಷ್ಠ ಶಿವಾಚಾರ್ಯರು, ಶ್ರೀ ಜಗದ್ಗುರು ಅವ್ಯಯ ಶಿವಾಚಾರ್ಯರು, ಶ್ರೀ ಜಗದ್ಗುರು ಕಲ್ಯಾಣಪಂಡಿತ ಶಿವಾಚಾರ್ಯರು, ಶ್ರೀ ಜಗದ್ಗುರು ಉಮಾಧವ ಶಿವಾಚಾರ್ಯರು, ಶ್ರೀ ಜಗದ್ಗುರು ಪ್ರಭು ಶಿವಾಚಾರ್ಯರು, ಶ್ರೀ ಜಗದ್ಗುರು ಗೋಕರ್ಣ ಶಿವಾಚಾರ್ಯರು, ಶ್ರೀ ಜಗದ್ಗುರು ಮಂಚಣ ಪಂಡಿತಾರಾಧ್ಯರು, ಶ್ರೀ ಜಗದ್ಗುರು ಸಂಕೇತ ಶಿವಾಚಾರ್ಯರು, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು, ಶ್ರೀ ಜಗದ್ಗುರು ಮಲ್ಲಿಕಾರ್ಜುನ ಪಂಡಿತಾರಾಧ್ಯ ಶಿವಾಚಾರ್ಯರು, ಶ್ರೀ ಜಗದ್ಗುರು ಈಶ್ವರ ಶಿವಾಚಾರ್ಯರು, ಶ್ರೀ ಜಗದ್ಗುರು ಪಟ್ಟದ ಪ್ರಮಥೇಶ್ವರ ಶಿವಾಚಾರ್ಯರು, ಶ್ರೀ ಜಗದ್ಗುರು ಸಿದ್ಧಮಲ್ಲಿಕಾರ್ಜುನ ಶಿವಾಚಾರ್ಯರು ಮತ್ತು ಶ್ರೀ ಜಗದ್ಗುರು ತ್ರಿಲಿಂಗಚಕ್ರೇಶ್ವರ ಶಿವಾಚಾರ್ಯರು ಎಂಬುವವರು ಖ್ಯಾತನಾಮರಾಗಿದ್ದಾರೆ.

ಈ ಆಚಾರ್ಯರಲ್ಲಿ ಶ್ರೀ ಜಗದ್ಗುರು ಶ್ರೀಪತಿ ಪಂಡಿತಾರಾಧ್ಯರು, ಶ್ರೀ ಜಗದ್ಗುರು ಮಂಚಣ ಪಂಡಿತಾರಾಧ್ಯರು, ಮತ್ತು ಶ್ರೀ ಜಗದ್ಗುರು ಮಲ್ಲಿಕಾರ್ಜುನ ಪಂಡಿತಾರಾಧ್ಯ – ಈ ಮೂವರು ಆಚಾರ್ಯರೂ ಉದ್ದಾಮ ಪಂಡಿತರಾಗಿದ್ದರಿಂದ ಇವರು ಆಂಧ್ರ ಪ್ರದೇಶದಲ್ಲಿ "ಪಂಡಿತತ್ರಯ"ರೆಂದು ಪ್ರಸಿದ್ಧರಾಗಿದ್ದಾರೆ.

ಶ್ರೀಪತಿ ಪಂಡಿತಾರಾಧ್ಯರು ಃ

ಕ್ರಿ.ಶ. ೧೦೬೦ರಲ್ಲಿ ಆಗಿಹೋದ ಶ್ರೀಪತಿ ಪಂಡಿತಾರಾಧ್ಯರು ಬ್ರಹ್ಮಸೂತ್ರಗಳಿಗೆ ವೀರಶೈವ ಸಿದ್ಧಾಂತ ಪರವಾದ ಶಕ್ತಿವಿಶಿಷ್ಟಾದ್ವೈತ ಭಾಷ್ಯವನ್ನು ಬರೆದಿದ್ದಾರೆ. ಅದು "ಶ್ರೀಕರಭಾಷ್ಯ" ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇವರು ವಿಜಯವಾಟಿಕಾ ಅಥವಾ ಈಗಿನ ಆಂಧ್ರಪ್ರದೇಶದ ಬೆಜವಾಡ ನಗರದ ಜಿಮ್ಮಿದೊಡ್ಡಿ (ಶಮೀವಾಟಿಕಾ) ಎಂಬ ಸ್ಥಳದಲ್ಲಿ ಕುಳಿತು ಶ್ರೀಕರಭಾಷ್ಯವನ್ನು ರಚಿಸಿದ್ದಾರೆ.

ಶ್ರೀಪತಿ ಪಂಡಿತಾರಾಧ್ಯರು ಬೆಜವಾಡ ಶ್ರೀ ಮಲ್ಲೇಶ್ವರ ದೇವಸ್ಥಾನದ ಸಮೀಪದಲ್ಲಿಯೇ ಒಂದು ಶಮೀವೃಕ್ಷ (ಬನ್ನಿಯ ಗಿಡ)ಕ್ಕೆ ರೇಶ್ಮೆ ವಸ್ತ್ರದಲ್ಲಿ ಅಗ್ನಿಯನ್ನು ಕಟ್ಟಿ ನೇತುಹಾಕಿ ದೇವರ್ಷಿಗಳಿಗಿಂತಲೂ ಶಿವಭಕ್ತರೇ ಶ್ರೇಷ್ಠರೆಂಬ ತಮ್ಮ ಪ್ರತಿಜ್ಞೆಯನ್ನು ಸಾಧಿಸಿ ತೋರಿಸಿದ ಒಂದು ಪವಾಡವು ಬೆಜವಾಡದಲ್ಲಿ ಇಂದಿಗೂ ವಿದ್ಯಮಾನವಾದ ಪಲ್ಲಕೇತು ರಾಜನಿಂದ ಬರೆಯಿಸಲ್ಪಟ್ಟ ಶಿಲಾಶಾಸನದಿಂದ ತಿಳಿದುಬರುತ್ತದೆ.

ಶ್ರೀಪತಿ ಪಂಡಿತಾರಾಧ್ಯರ ಈ ಅಗ್ನಿಸ್ತಂಭನ ಮಹಿಮೆಯು ಸಂಸ್ಕೃತ ಬಸವ ಪುರಾಣದಲ್ಲಿ–

ಇತಿಹಾಸಾಂತರಂ ವಕ್ಷ್ಯೇ ಶೃಣು ರಾಜನ್ ಮಹಾಮತೇ ।
ಶಿವಭಕ್ತೋ ಮಹಾಯೋಗೀ ಶ್ರೀಮಾನ್ ಶ್ರೀಪತಿ ಪಂಡಿತಃ ॥
ಶಾಸ್ತ್ರವಾದಾತಿಕುಶಲೋ ಬ್ರಾಹ್ಮಣಾನಾಂ ಸಭಾಂತರೇ ।
........................................................................ ॥
ಅನಂತಪಾಲ ಭೂಪಾಲ ಸಮಕ್ಷಂ ಭಕ್ತಿತತ್ಪರಃ ।
ಇತಿ ಪ್ರತಿಜ್ಞಾಂ ಕೃತ್ವಾಶು ನೀತ್ವಾಂಗಾರಚಯಂ ಪರಂ ॥
ಪಟ್ಟ ವಸ್ತ್ರಾಂತರೇ ನ್ಯಸ್ಯಬಬಂಧ ಸದೃಢಂ ಪರಂ ।
(ಅಧ್ಯಾಯ ೩೭)

ಈ ರೀತಿಯಾಗಿ ಪ್ರತಿಪಾದಿಸಲ್ಪಟ್ಟಿದೆ. ಶ್ರೀಪತಿ ಪಂಡಿತಾರಾಧ್ಯರು ಅಗ್ನಿಸ್ತಂಭನ ಮಾಡಿ ಶಿವಭಕ್ತರ ಮಹಿಮೆಯನ್ನು ಹೆಚ್ಚಿಸಿದ ಈ ವಿಷಯವನ್ನು ಶ್ರೀ ಬಸವೇಶ್ವರರು ಬಿಜ್ಜಳ ಮಹಾರಾಜನಿಗೆ ತಿಳಿಯಪಡಿಸಿದ್ದಾರೆ.

ಇದೇ ಪ್ರಕಾರ ಪಾಲ್ಕುರಿಕೆ ಸೋಮನಾಥನು ಬರೆದ ಆಂಧ್ರ ಬಸವ ಪುರಾಣದಲ್ಲಿಯೂ ಶ್ರೀಪತಿ ಪಂಡಿತರ ಈ ಮಹಿಮೆಯು ವಿವರಿಸಲ್ಪಟ್ಟಿದೆ. ಅದರಂತೆ ಶ್ರೀ ಮಲ್ಲಿಕಾರ್ಜುನ ಪಂಡಿತರು ತಾವು ಬರೆದ "ಶಿವತತ್ತ್ವ ಸಾರಮು" ಎಂಬ ತೆಲುಗು ಗ್ರಂಥದಲ್ಲಿಯೂ ಶ್ರೀಪತಿ ಪಂಡಿತರ ಅಗಾಧವಾದ ಮಹಿಮೆಯು ವರ್ಣಿಸಲ್ಪಟ್ಟಿರುವುದರಿಂದ ಶ್ರೀಪತಿ ಪಂಡಿತರು ಶ್ರೀ ಬಸವೇಶ್ವರ, ಶ್ರೀ ಪಾಲ್ಕುರಿಕೆ ಸೋಮನಾಥ ಹಾಗೂ ಶ್ರೀ ಮಲ್ಲಿಕಾರ್ಜುನ ಪಂಡಿತರಿಗಿಂತಲೂ ಪ್ರಾಚೀನರೆಂಬುದು ತಿಳಿದುಬರುತ್ತದೆ.

ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಃ

ಆಂಧ್ರ ಸಾಹಿತ್ಯದಲ್ಲಿ ಹೆಸರುವಾಸಿಗಳಾದ ಇವರು ಆಂಧ್ರಪ್ರದೇಶೀಯರೇ ಆಗಿರುವರು. ಇವರು "ಶಿವತತ್ತ್ವ ಸಾರಮು" ಎಂಬ ಗ್ರಂಥವನ್ನು ಬರೆದಿದ್ದಾರೆಂದು ಹಿಂದೆ ಹೇಳಲಾಗಿದೆ. ಇದಲ್ಲದೇ ಗಣ ಸಹಸ್ರನಾಮಾವಳಿ, ಲಿಂಗೋದ್ಭವ ದೇವಗದ್ದಮು, ರುದ್ರಮಹಿಮೆ, ಅಮರೇಶ್ವರಾಷ್ಟಕ ಮತ್ತು ಪರ್ವತ ವರ್ಣನಮು – ಮುಂತಾದ ಗ್ರಂಥಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆಂಬ ವಿಚಾರವನ್ನು ಚಿಕ್ಕಮಣ್ಣೂರಿನ ಶ್ರೀ ಷ॥ಬ್ರ॥ ಗುರುದೇವ ಶಿವಾಚಾರ್ಯರು ನವಿಲಗುಂದ ಇವರು ವ್ಯಕ್ತಪಡಿಸಿದ್ದಾರೆ.

ಕ್ರಿ.ಶ. ೧೧೯೫ರಲ್ಲಿ ಪಾಲ್ಕುರಿಕೆ ಸೋಮನಾಥನು "ಮಲ್ಲಿಕಾರ್ಜುನ ಪಂಡಿತಾರಾಧ್ಯ" ಎಂಬ ಹೆಸರಿನ ಇವರ ಚರಿತ್ರೆ ಗ್ರಂಥವನ್ನು ಆಂಧ್ರ ಭಾಷೆಯಲ್ಲಿ ರಚಿಸಿದ್ದಾನೆ. ಅದರಂತೆ ಶ್ರೀ ಗುರುರಾಜ ಕವಿಗಳು "ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಂ" ಎಂಬ ಸಂಸ್ಕೃತ ಗ್ರಂಥವನ್ನು ರಚಿಸಿದ್ದಾರೆ. ಅದೇ ಪ್ರಕಾರ ಶ್ರೀ ನೀಲಕಂಠಾಚಾರ್ಯರು "ಪಂಡಿತಾರಾಧ್ಯರ ಚರಿತ್ರೆ" ಎಂದು ಕನ್ನಡದಲ್ಲಿ ಇವರ ಚರಿತ್ರೆಯನ್ನು ಬರೆದಿದ್ದಾರೆ.

ಆಂಧ್ರಪ್ರದೇಶದ ದ್ರಾಕ್ಷಾರಾಮ ಕ್ಷೇತ್ರದ ಭೀಮೇಶ್ವರಲಿಂಗದ ಪ್ರಧಾನ ಅರ್ಚಕರಾದ ಶ್ರೀ ಭೀಮನ ಪಂಡಿತ ಹಾಗೂ ಅವರ ಧರ್ಮಪತ್ನಿ ಗೌರಾಂಬಾದೇವಿಯರ ಪವಿತ್ರ ಗರ್ಭದಲ್ಲಿ ಇವರು ಜನಿಸಿದರೆಂದು "ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತಂ" ಎಂಬ ಸಂಸ್ಕೃತ ಗ್ರಂಥದ ದೀಕ್ಷಾ ಪ್ರಕರಣದ ೪೦ನೆಯ ಶ್ಲೋಕದಿಂದ ತಿಳಿದುಬರುತ್ತದೆ.

ಓರಂಗಲ್ ಗಣಪತಿರಾಯನ ವಂಶಕ್ಕೆ ಸೇರಿದ ಶ್ರೀ ಪ್ರತಾಪರುದ್ರನು ಕ್ರಿ.ಶ. ೧೩೦೦ರಲ್ಲಿ ಪಟ್ಟಕ್ಕೆ ಬಂದ ನಂತರ ಶ್ರೀಶೈಲ ಸಾಮ್ರಾಜ್ಯವನ್ನು ತನ್ನ ಸ್ವಾಧೀನಪಡಿಸಿಕೊಂಡು ಆ ಸಮಯದಲ್ಲಿ ಶ್ರೀಶೈಲ ಪೀಠಾಧಿಪತಿಗಳಾಗಿದ್ದ ಶ್ರೀ ಜಗದ್ಗುರು ಈಶ್ವರ ಶಿವಾಚಾರ್ಯರಿಗೆ ಶಿಷ್ಯನಾಗಿ ಅವರಿಗೆ ೭೦ ಗ್ರಾಮಗಳ ಉಂಬಳಿಯನ್ನು ಹಾಕಿಕೊಟ್ಟು ಶ್ರೀಶೈಲ ಮಲ್ಲಿಕಾರ್ಜುನ ಸ್ವಾಮಿಯ ನಿತ್ಯಪೂಜೆ, ನೈವೇದ್ಯ, ದೀಪಾರಾಧನೆ ಮುಂತಾದ ಎಲ್ಲ ವ್ಯವಸ್ಥೆಗಳೂ ಶ್ರೀಶೈಲ ಪೀಠಾಧಿಪತಿಗಳಿಂದಲೇ ನಡೆಸಲ್ಪಡಬೇಕು ಎಂಬುದಾಗಿ ಶಿಲಾಶಾಸನವನ್ನು ಬರೆಯಿಸಿದ್ದಾನೆ. ಈ ಶಾಸನವು ಇಂದಿಗೂ ಶ್ರೀಶೈಲ ಕ್ಷೇತ್ರದಲ್ಲಿ ವಿರಾಜಮಾನವಾಗಿದೆ. ಭಾರತ ಸರ್ಕಾರದ ಶಿಲಾಲಿಪಿ ಅಧಿಕಾರಿಗಳಾದ ಶ್ರೀ ಕೃಷ್ಣಶಾಸ್ತ್ರಿಗಳು ಈ ವಿಷಯವನ್ನು ವಿಶದವಾಗಿ ವರ್ಣಿಸಿದ್ದಾರೆ. ಅದರಂತೆ ಶ್ರೀಶೈಲ ಕ್ಷೇತ್ರದ ಟ್ರಸ್ಟ್ ಕಮಿಟಿಯ ಅಧ್ಯಕ್ಷರಾದ ರಾಮಪ್ಪನವರೂ ಈ ವಿಷಯವನ್ನು ಒಪ್ಪಿರುವುದಾಗಿ ಶ್ರೀ ಷ॥ಬ್ರ॥ ಗುರುದೇವ ಶಿವಾಚಾರ್ಯರು ಶ್ರೀಶೈಲ ಪೀಠದ ಇತಿಹಾಸರೂಪವಾದ ಹಸ್ತಪ್ರತಿಯಲ್ಲಿ ಪ್ರತಿಪಾದಿಸಿದ್ದಾರೆ.

೧೭ನೆಯ ಶತಮಾನದ ಪೆನಗೊಂಡ ಪುರವರಾಧೀಶ್ವರ ಕಾಚಕ್ಷಿಪಾಲನಿಂದ ದತ್ತವಾಗಿರುವ ತಾಮ್ರಶಾಸನದಿಂದ ಆಗ್ಗೆ ಶ್ರೀಶೈಲ ಸೂರ್ಯಸಿಂಹಾಸನದಲ್ಲಿ ವಿರಾಜಮಾನರಾಗಿದ್ದ ಶ್ರೀ ಜಗದ್ಗುರು ಪ್ರಮಥೇಶ್ವರ ದೇವರು ಅತ್ಯಂತ ಪ್ರಭಾವಶಾಲಿಗಳಾಗಿದ್ದರೆಂಬುದು ತಿಳಿದುಬರುತ್ತದೆ.

ಇತ್ತಿತ್ತಲಾಗಿ ಕ್ರಿ.ಶ. ೧೯೭೧ರ ವರೆಗೆ ಶ್ರೀಶೈಲ ಪೀಠಾಧಿಪತಿಗಳಾಗಿದ್ದ ಕೆಲವು ಮಹಾಸ್ವಾಮಿಗಳವರು ಕದಂಬ, ವಿಜಯನಗರ ಮೊದಲಾದ ಮಹಾರಾಜರಿಗೆ ಶಿವತತ್ತ್ವೋಪದೇಶವನ್ನು ಮಾಡಿ ಪ್ರಖ್ಯಾತಿಯನ್ನು ಪಡೆದಿದ್ದರು. ಹೀಗಿರುವ ಶ್ರೀಶೈಲ ಧರ್ಮಕ್ಷೇತ್ರವು ಕ್ರಿ.ಶ. ೧೭೯೩–೯೪ರಲ್ಲಿ ಮುಸಲ್ಮಾನರ ದಬ್ಬಾಳಿಕೆಗೀಡಾಗಿ ಬಹಳಷ್ಟು ಹಾನಿಯನ್ನು ಅನುಭವಿಸಬೇಕಾಯಿತು. ಆ ಸಮಯದ ಶ್ರೀಶೈಲ ಪೀಠಾಧಿಪತಿಗಳು ತಮ್ಮ ಧರ್ಮವನ್ನು ಉಳಿಸಿಕೊಳ್ಳಲು ತಮ್ಮ ಮೂಲಸ್ಥಾನವಾದ ಶ್ರೀಶೈಲವನ್ನು ಬಿಟ್ಟು ಕರ್ನೂಲು, ಆತ್ಮಕೂರು ಮತ್ತು ಗುಂತಕಲ್ಲುಗಳಲ್ಲಿ ಮಠಗಳನ್ನು ನಿರ್ಮಿಸಿಕೊಂಡು ವಾಸಿಸತೊಡಗಿದರು. ಈಗಲೂ ಈ ಮಠಗಳು ಶ್ರೀಶೈಲ ಪೀಠದ ಶಾಖಾಮಠಗಳಾಗಿ ಕಂಗೊಳಿಸುತ್ತಿವೆ.

ಈ ಪೀಠದ ಗುರುಪರಂಪರೆಯಲ್ಲಿ ಶ್ರೀ ಜಗದ್ಗುರು ಸಿದ್ಧಭಿಕ್ಷಾವರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಶಿವಪೂಜಾ ಧುರಂಧರರೂ, ತಪೋನಿಷ್ಠರೂ ಆಗಿದ್ದರು. ಇವರ ತರುವಾಯ ನಾಗಲೂಟಿ ಭಿಕ್ಷಾವರ್ತಿ ಶಿವಾಚಾರ್ಯ ಮಹಾಸ್ವಾಮಿಗಳು ಪೀಠಾರೋಹಣ ಮಾಡಿದರು.

ಇವರು ಕರ್ನೂಲು ಜಿಲ್ಲಾ ನಂದಿಕೊಟಕೂರ ತಾಲ್ಲೂಕು ಇಸಗ್ಯಾಳು ಎಂಬ ಗ್ರಾಮದ

ವೀರಮಾಹೇಶ್ವರ ವಂಶಸ್ಥರಾದ ಶ್ರೀ ಸಣ್ಣವೀರಭದ್ರಯ್ಯನವರು ಮತ್ತು ಅವರ ಧರ್ಮಪತ್ನಿ ಸೌ॥ ಸಣ್ಣರಾಚಮ್ಮ ಎಂಬ ದಂಪತಿಗಳ ಪವಿತ್ರಗರ್ಭದಲ್ಲಿ ಜನಿಸಿದರು. ಇವರು ಶಿವಯೋಗ ಸಂಪನ್ನರೂ, ಸಾತ್ವಿಕರೂ ಆಗಿ ೩೨ ವರ್ಷ ಪರ್ಯಂತವಾಗಿ ಶ್ರೀಶೈಲ ಪೀಠದ ಜಗದ್ಗುರುಗಳಾಗಿ ಆಂಧ್ರ, ಮಹಾರಾಷ್ಟ್ರ, ಕರ್ನಾಟಕ ಪ್ರಾಂತಗಳಲ್ಲಿ ಸಂಚರಿಸಿ ಪೀಠದ ಘನತೆ ಗೌರವಗಳನ್ನು ಹೆಚ್ಚಿಸಿದರು. ೧೯೧೮ರಲ್ಲಿ ಕಾಶಿಯಲ್ಲಿ ನೆರವೇರಿದ ಪಂಚಾಚಾರ್ಯರ ಸಮ್ಮೇಳನದಲ್ಲಿ ಇವರು ಭಾಗಿಗಳಾಗಿದ್ದರು.

ಕಾಲಾಂತರದಲ್ಲಿ ವಾರ್ಧಕ್ಯದಿಂದ ದೇಹದಲ್ಲಿ ಅಸ್ವಾಸ್ಥ್ಯ ಉಂಟಾಗಲು ವಿಕ್ರಮನಾಮ ಸಂವತ್ಸರ ಆಷಾಢ ಶು॥ ದ್ವಿತೀಯ ತಾ॥ ೭-೭-೧೯೪೦ರಂದು ತಮ್ಮ ಗುಂತಕಲ್ಲು ಮಠದಲ್ಲಿ ಉಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರನ್ನು ಬರಮಾಡಿಕೊಂಡು ಅವರ ಸನ್ನಿಧಿಯಲ್ಲಿಯೇ ಮುದೇನೂರು ಬೃಹನ್ಮಠಾಧ್ಯಕ್ಷರಾದ ಪಂ॥ ವಾಗೀಶ ಶಿವಾಚಾರ್ಯರಿಗೆ ವಿಧಿಪೂರ್ವಕವಾಗಿ ತಮ್ಮ ಉತ್ತರಾಧಿಕಾರವನ್ನು ಅನುಗ್ರಹಿಸಿ, ಅವರಿಗೆ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಎಂಬ ನೂತನ ನಾಮಕರಣವನ್ನು ಮಾಡಿದರು. ನಂತರ ವಿಕ್ರಮನಾಮ ಸಂವತ್ಸರ ಆಷಾಢ ಬ॥೧೨ ತಾ ೩೧-೭-೧೯೪೦ರಂದು ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವರ್ತಿ ಮಹಾಸ್ವಾಮಿಗಳವರು ಲಿಂಗೈಕ್ಯರಾದರು.

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರು :

ಶ್ರೀಶೈಲ ಪೀಠದ ಗುರುಪರಂಪರೆಯಲ್ಲಿ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ಕಾರ್ಯಕಾಲವು ಸುವರ್ಣಯುಗವೆಂದು ಪರಿಗಣಿಸಲ್ಪಡುತ್ತದೆ.

ಜನನ ಮತ್ತು ಶಿವದೀಕ್ಷೆ :

ಇವರು ಇಂದಿನ ಹಾವೇರಿ ಜಿಲ್ಲಾ ರಾಣೇಬೆನ್ನೂರು ತಾಲ್ಲೂಕು ಮುದೇನೂರು ಗ್ರಾಮದ ಹಿರೇಮಠದ ಶ್ರೀ ವೇ॥ ಬಸಯ್ಯನವರು ಹಾಗೂ ಅವರ ಧರ್ಮಪತ್ನಿ ಸೌ॥ ರುದ್ರಮ್ಮ ಎಂಬ ದಂಪತಿಗಳ ಪವಿತ್ರಗರ್ಭದಲ್ಲಿ ಶಾ.ಶ.೧೮೩೦ನೆಯ ಕೀಲಕನಾಮ ಸಂವತ್ಸರ ಜ್ಯೇಷ್ಠಮಾಸದ ಕೃಷ್ಣಪಕ್ಷದ ತ್ರಯೋದಶಿ ತಾ॥೨೬-೬-೧೯೦೮ನೇ ಶುಕ್ರವಾರದಂದು ಮಧ್ಯಾಹ್ನ ೧೪ ಘಳಿಗೆ ೨೪ ಘಳದ ಶುಭಮುಹೂರ್ತದಲ್ಲಿ ಜನಿಸಿದರು. ರೋಹಿಣಿ ನಕ್ಷತ್ರದ ೨ನೆಯ ಚರಣದಲ್ಲಿ ಇವರು ಜನಿಸಿದ ಕಾರಣ ನಕ್ಷತ್ರ ನಾಮಾನುಸಾರವಾಗಿ ಇವರಿಗೆ "ವಾಗೀಶ" ಎಂಬ ನಾಮಕರಣವಾಯಿತು. ಮುಂದೆ ಇವರಿಗೆ ೮ನೆಯ ವರ್ಷದಲ್ಲಿ ಶ್ರೀ ರಂಭಾಪುರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳ ನೇತೃತ್ವದಲ್ಲಿ ಶ್ರೀ ಎಡೆಯೂರು ಕ್ಷೇತ್ರದಲ್ಲಿ ಶಿವದೀಕ್ಷಾ ಸಂಸ್ಕಾರವಾಯಿತು.

ವಿದ್ಯಾಭ್ಯಾಸ ಹಾಗೂ ಸಾಹಿತ್ಯ ಸೇವೆ :

ಪೂಜ್ಯರು ಬಾಣಾವರ, ಬ್ಯಾಡಗಿ, ಬಾಗಿಲುಕೋಟೆ ಮತ್ತು ಅಥಣಿ ಮುಂತಾದ ಸ್ಥಳಗಳಲ್ಲಿ ಪ್ರಾಥಮಿಕ ಕನ್ನಡ ಹಾಗೂ ಸಂಸ್ಕೃತ ಅಧ್ಯಯನವನ್ನು ಮಾಡಿ ಹೆಚ್ಚಿನ ವ್ಯಾಸಂಗಕ್ಕೆ ಪಂ।ಕಾಶೀನಾಥ ಶಾಸ್ತ್ರಿಗಳವರ ಪ್ರೇರಣೆಯಂತೆ ಕಾಶಿಗೆ ಹೋಗಿ ಅಲ್ಲಿಯ ಜ್ಞಾನಪೀಠದ ಶ್ರೀ ವಿಶ್ವಾರಾಧ್ಯ ಗುರುಕುಲದಲ್ಲಿ ಪ್ರವೇಶ ಪಡೆದು, ಸ್ಥಳೀಯ ಟೀಕಮಣಿ ಸಂಸ್ಕೃತ ವಿದ್ಯಾಲಯ ಹಾಗೂ ಶಾರದ ಸಂಸ್ಕೃತ ವಿದ್ಯಾಲಯಗಳಲ್ಲಿ ಪ್ರೌಢ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದರು. ೧೯೨೭ರಲ್ಲಿ ವಿದ್ಯಾರ್ಥಿ ವೇತನವನ್ನು ಪಡೆದರು. ವಿದ್ಯಾರ್ಥಿ ಜೀವನದಲ್ಲಿ ಬಂದ ಅನೇಕ ಅಡೆತಡೆಗಳನ್ನು ಸಹಿಸಿಕೊಂಡು ಇವರು ೧೯೩೪ರಲ್ಲಿ "ಕಾವ್ಯತೀರ್ಥ ಪರೀಕ್ಷೆ" ಪಾಸಾದ ನಂತರ "ಸಾಹಿತ್ಯಾಚಾರ್ಯ" ಮತ್ತು "ವೇದಾಂತಾಚಾರ್ಯ" ಪರೀಕ್ಷೆಗಳಲ್ಲಿಯೂ ಉತ್ತೀರ್ಣರಾಗಿ ಕಾಶಿಯ ಎಲ್ಲ ಪ್ರೌಢ ವಿದ್ಯಾರ್ಥಿಗಳ ಸಹಯೋಗದಿಂದ ಜಂಗಮವಾಡಿ ಮಠದಲ್ಲಿ "ಕಾಶೀ ವೀರಶೈವ ವಿದ್ವತ್ ಸಂಘ" ಎಂಬ ಸಂಸ್ಥೆಯನ್ನು ಪ್ರಾರಂಭಿಸಿ ಅದರಿಂದ ಮಹಾ ನಾರಾಯಣೋಪನಿಷತ್ತು, ಸಿದ್ಧಾಂತ ಶಿಖಾಮಣಿ (ಮೂಲ), ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಮುಂತಾದ ಗ್ರಂಥಗಳನ್ನು ಪ್ರಕಾಶಪಡಿಸಿದರು. ಅಲ್ಲದೇ ಸಾಹಿತ್ಯ ದರ್ಪಣ, ಮೃಚ್ಛಕಟಿಕ, ಮುದ್ರಾರಾಕ್ಷಸ ಮುಂತಾದ ಸಂಸ್ಕೃತ ಗ್ರಂಥಗಳನ್ನೂ ಕನ್ನಡಕ್ಕೆ ಅನುವಾದಿಸಿದರು.

ರಾಜಕೀಯ ಸತ್ಯಾಗ್ರಹ :

ಶ್ರೀ ವಾಗೀಶ ಶಿವಾಚಾರ್ಯರು ತಮ್ಮ ವಿದ್ಯಾಭ್ಯಾಸದ ಜೊತೆಗೆ ಮಹಾತ್ಮಾ ಗಾಂಧೀಜಿಯವರ ಸಂಗಡ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ೧೯೩೬ರಲ್ಲಿ ಶ್ರೀ ಗಾಂಧೀಜಿಯವರ ಪ್ರೀತಿಗೆ ಪಾತ್ರರಾದರು. ಇದಲ್ಲದೇ ಶ್ರೀಗಳವರು ಕ್ರಾಂಗ್ರೆಸ್ ಸೇವಾದಳ (ಸ್ಕೌಟ್)ದಲ್ಲಿ ೬ ವರ್ಷ ಸೇವೆ ಸಲ್ಲಿಸಿ ದೇಶದ ಪ್ರಸಿದ್ಧ ನಾಯಕರ ಪರಿಚಯವನ್ನು ಪಡೆದರು.

ಶ್ರೀಶೈಲ ಪೀಠದ ಪಟ್ಟಾಭಿಷೇಕ :

ಲಿಂ॥ ಉಜ್ಜಯಿನೀ ಜಗದ್ಗುರು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಅನುಗ್ರಹಕ್ಕೆ ಪಾತ್ರರಾದ ಶ್ರೀ ವಾಗೀಶ ಶಿವಾಚಾರ್ಯರು ತಾ॥೭-೭-೧೯೪೦ರಂದು ಗುಂತಲಕಲ್ಲಿನಲ್ಲಿ ಉಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಶ್ರೀಶೈಲ ಜಗದ್ಗುರು ನಾಗಲೂಟಿ ಭಿಕ್ಷಾವರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರ ಅಮೃತಹಸ್ತದಿಂದ ಶ್ರೀಶೈಲ ಸೂರ್ಯಸಿಂಹಾಸನದ ಜಗದ್ಗುರುತ್ವವನ್ನು ಹೊಂದಿ ಶ್ರೀ ೧೦೦೮ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನೂತನ ನಾಮದಿಂದ ಪ್ರಸಿದ್ಧರಾದರು. ಶ್ರೀಗಳವರು ಅಧಿಕಾರ ವಹಿಸಿಕೊಂಡ ವರ್ಷವೇ ತಾ॥೨೨-೨-೧೯೪೧ ಮಹಾಶಿವರಾತ್ರಿಯ ದಿನ ಶ್ರೀಶೈಲ ಕ್ಷೇತ್ರದಲ್ಲಿ ಶ್ರೀಗಳವರ ಅಡ್ಡಪಲ್ಲಕ್ಕಿ ಮಹೋತ್ಸವವು ಮಹಾವೈಭವದಿಂದ ನೆರವೇರಿತು. ಆ ಸಂದರ್ಭದಲ್ಲಿ 'ಶ್ರೀಶೈಲ ವೀರಶೈವ ಮಹಾಸಭೆ'ಯೊಂದನ್ನು ಪ್ರಾರಂಭಿಸಿದರು. ಈ ಉತ್ಸವ ಹಾಗೂ ಸಭೆಗಳು ಇಂದಿಗೂ ಪ್ರತಿವರ್ಷ ಶಿವರಾತ್ರಿಯಲ್ಲಿ ಜರುಗುತ್ತಲಿವೆ.

ಪೀಠದ ಜೀರ್ಣೋದ್ಧಾರ ಹಾಗೂ ಶಿಕ್ಷಣ ಸಂಸ್ಥೆಗಳ ನಿರ್ಮಾಣ :

ಪೂಜ್ಯ ಶ್ರೀಗಳು ಪೀಠಾಧಿಕಾರ ಹೊಂದಿದ ಬಳಿಕ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶಗಳಲ್ಲಿ ಸಂಚರಿಸಿ ಭಕ್ತೋದ್ಧಾರವನ್ನು ಮಾಡುವುದರ ಜೊತೆಗೆ ಭಕ್ತರ ಯಾತ್ರಾ ಸೌಕರ್ಯಕ್ಕಾಗಿ ವಿಶೇಷ ಪ್ರಯತ್ನಮಾಡಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನೆರವಿನಿಂದ ೧೯೫೬ರಲ್ಲಿ ಶ್ರೀಶೈಲಕ್ಕೆ ರಾಜಮಾರ್ಗವನ್ನು ಮಾಡಿಸಿದರು. ಅಲ್ಲದೇ ಯಾತ್ರಿಕರಿಗೆ ಮಾರ್ಗದಲ್ಲಿ ಸೌಕರ್ಯವನ್ನು ಒದಗಿಸುವುದಕ್ಕಾಗಿ ಗುಂತಕಲ್ ಹಾಗೂ ಆತ್ಮಕೂರಿನಲ್ಲಿ ಯಾತ್ರಾ ನಿವಾಸಗಳನ್ನು

ಕಟ್ಟಿಸಿ ಅನ್ನ ದಾಸೋಹದ ವ್ಯವಸ್ಥೆಯನ್ನೂ ಮಾಡಿದ್ದಾರೆ.

ಅಂದಿನ ಭಾರತದ ರಾಷ್ಟ್ರಪತಿಗಳಾದ ಡಾ॥ ಬಾಬುರಾಜೇಂದ್ರ ಪ್ರಸಾದರನ್ನು ಸನ್ನಿಧಿಯವರು ಶ್ರೀಶೈಲಕ್ಕೆ ಬರಮಾಡಿಕೊಂಡು ಭವ್ಯವಾದ ಸ್ವಾಗತವನ್ನು ನೀಡಿ ಹಿಂದೀ ಭಾಷೆಯಲ್ಲಿ ಕ್ಷೇತ್ರದ ಪರಿಚಯ ಹಾಗೂ ಮಹಿಮೆಗಳನ್ನು ತಿಳಿಸಿದರು. ಅಲ್ಲದೇ ಪಾತಾಳಗಂಗೆಗೆ ಒಂದು ಅಣೆಕಟ್ಟನ್ನು ಕಟ್ಟಿಸಿ ವಿದ್ಯುದಾಗರವನ್ನು ಮಾಡಿಸಿಕೊಡುವಂತೆ ಕ್ಷೇತ್ರೋದ್ಧಾರ ಕಮಿಟಿಯವರಿಂದ ಒಪ್ಪಿಗೆಯನ್ನು ಪಡೆದರು. ಆ ಕಾರ್ಯವು ಈಗ ಪೂರ್ಣಗೊಂಡಿದೆ. ಈ ಜಲವಿದ್ಯುತ್ ಯೋಜನೆಯಿಂದ ಆಂಧ್ರಪ್ರದೇಶವೆಲ್ಲ ಬೆಳಗಿದೆ.

ಇದೇ ಪ್ರಕಾರ ಡಾ॥ ಎಸ್. ರಾಧಾಕೃಷ್ಣನ್‌ರೂ ತಾವು ರಾಷ್ಟ್ರಪತಿಗಳಿದ್ದಾಗ ಶ್ರೀಶೈಲಕ್ಕೆ ಆಗಮಿಸಿ ಪೂಜ್ಯ ಜಗದ್ಗುರುಗಳಿಂದ ಆಶೀರ್ವಾದ ಪಡೆದು ಹೋಗಿದ್ದಾರೆ.

ಶ್ರೀಶೈಲ ಮಲ್ಲಿಕಾರ್ಜುನ ಹಾಗೂ ಭ್ರಮರಾಂಬಾ ದೇವಸ್ಥಾನಗಳ ಮಧ್ಯದಲ್ಲಿ ಲಿಂ॥ ಶ್ರೀಶೈಲ ಜಗದ್ಗುರು ಜಂಗಮ ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳವರ ಸಮಾಧಿಯ ಮಗ್ಗುಲಲ್ಲಿ ಪ್ರಾಚೀನ ಕಾಲದಿಂದಲೂ ಬಹಳ ಜೀರ್ಣಾವಸ್ಥೆಯಲ್ಲಿದ್ದ ಶ್ರೀ ಜಗದ್ಗುರು ಪಂಡಿತಾರಾಧ್ಯ ಪೀಠವು ಬೆಂಗಳೂರು ಭಕ್ತರ ವಿಶೇಷ ಧನಸಹಾಯದಿಂದ ನೂತನವಾಗಿ ನಿರ್ಮಾಣಗೊಂಡಿದೆ.

೧೯೬೧ರಲ್ಲಿ ದೇವಾಲಯಗಳ ಕಮೀಶನರು ಶ್ರೀಶೈಲದಲ್ಲಿ ಪಂಡಿತಾರಾಧ್ಯ ಪೀಠವೇ ಇಲ್ಲವೆಂದು ಅಜ್ಞಾನಪೂರಿತವಾದ ವಾದವನ್ನು ಮಾಡಲು ೧೯೬೭ರಲ್ಲಿ ಆಂಧ್ರ ಸರ್ಕಾರದ ರಾಜೀ ಒಪ್ಪಿಗೆಯಂತೆ ಕರ್ನೂಲು ಜಿಲ್ಲಾ ನ್ಯಾಯಾಧೀಶರ ಕೋರ್ಟಿನಲ್ಲಿ ಪಂಡಿತಾರಾಧ್ಯ ಪೀಠ ಮತ್ತು ಶ್ರೀ ಜಗದ್ಗುರು ಜಂಗಮ ಮಲ್ಲಿಕಾರ್ಜುನ ಮಹಾಸ್ವಾಮಿಗಳವರ ಸಮಾಧಿಗಳು ಶ್ರೀಶೈಲ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಇರುವುದಾಗಿಯೂ, ಶ್ರೀಶೈಲ ಸೂರ್ಯಸಿಂಹಾಸನದ ಪಂಡಿತಾರಾಧ್ಯ ಶಿವಾಚಾರ್ಯರೇ ದೇವಾಲಯದ ಪೀಠಾಧಿಪತಿಗಳೆಂದೂ ಮತ್ತು ಶ್ರೀಶೈಲ ಜಗದ್ಗುರುಗಳಿಗೆ ಪಾದಕಾಣಿಕೆಗಳು ಸಲ್ಲಬಹುದೆಂದೂ ತೀರ್ಮಾನಿಸಿದರು. (ಔ.ಖ. ಓ. ೬೧/ ೬೪; ಔ.ಖ.ಓ. ೨೪/೬೭)

ಶ್ರೀಶೈಲ ಕ್ಷೇತ್ರದ ಧರ್ಮಾಧಿಕಾರಿಗಳಾದ ಪೂಜ್ಯರು ಶ್ರೀಶೈಲಕ್ಕೆ ನಿತ್ಯವೂ ಬರುವ ಯಾತ್ರಾರ್ಥಿಗಳಿಗೆ ವಸತಿ ಹಾಗೂ ಪ್ರಸಾದದ ಸೌಕರ್ಯಕ್ಕಾಗಿ ಲಕ್ಷಾಂತರ ರೂಪಾಯಿಗಳ ವೆಚ್ಚದಲ್ಲಿ "ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ನಿತ್ಯಾನ್ನ ಮಂದಿರ" ಹಾಗೂ "ಶ್ರೀಶೈಲ ಜಗದ್ಗುರು ಯಾತ್ರಾ ನಿವಾಸ" ಮಂದಿರಗಳನ್ನು ನಿರ್ಮಾಣ ಮಾಡಿ ಭಕ್ತಾದಿಗಳಿಗೆ ಬಹಳಷ್ಟು ಅನುಕೂಲತೆಗಳನ್ನು ಮಾಡಿಕೊಟ್ಟಿದ್ದಾರೆ.

ಬಹುಭಾಷಾ ವಿಶಾರದರೂ, ಸಕಲಶಾಸ್ತ್ರ ಪರಿಣತರೂ, ವರಕವಿಗಳೂ ಆದ ಪೂಜ್ಯರು ಅನೇಕ ಕಡೆಗಳಲ್ಲಿ ವಿದ್ಯಾಕೇಂದ್ರಗಳನ್ನು ಪ್ರಾರಂಭಿಸಿ ಜನತೆಯಲ್ಲಿ ಶಿಕ್ಷಣ ಪ್ರಸಾರವಾಗಲು ಅವಕಾಶ ಮಾಡಿಕೊಟ್ಟಿದ್ದಾರೆ. ಶ್ರೀ ಮಹಾಸನ್ನಿಧಿಯವರು ಸಂಸ್ಥಾಪಿಸಿದ ಗುಂತಕಲ್ಲು ಶ್ರೀ ಪಂಡಿತಾರಾಧ್ಯ ಹೈಯರ್ ಸೆಕೆಂಡರಿ ಸ್ಕೂಲ್, ಶಿವಮೊಗ್ಗ ಜಿಲ್ಲೆಯ ಸಂತೆಬೆನ್ನೂರು ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಹೈಸ್ಕೂಲ್, ಶಿರಾಳಕೊಪ್ಪದಲ್ಲಿ ಶ್ರೀಶೈಲ ಜಗದ್ಗುರು ಪಂಚಮಠದ ಹಾಸ್ಟೆಲ್, ಹರಿಹರ ಕ್ಷೇತ್ರದಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ವಿಶ್ವಧರ್ಮ ವಿದ್ಯಾಪೀಠ ಹಾಗೂ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಕಾಲೇಜುಗಳು ಬಹು ಪ್ರಖ್ಯಾತವಾಗಿವೆ.

೧೯೬೫ರಲ್ಲಿ ಗುಂತಕಲ್ಲಿನಲ್ಲಿ ನೆರವೇರಿದ ಪಟ್ಟಾಧಿಕಾರದ ರಜತ ಮಹೋತ್ಸವದ ಸಂದರ್ಭದಲ್ಲಿ ಪಂಚಾಚಾರ್ಯ ಸಮ್ಮೇಳನವನ್ನು ನೆರವೇರಿಸಿದರು. ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ ಸಾಹಿತ್ಯ ಗೋಷ್ಠಿಗಳನ್ನು ಏರ್ಪಡಿಸಿ ಆ ಸಂದರ್ಭದಲ್ಲಿ ಭಾಷಾ ಸೌಹಾರ್ದಕ್ಕೆ ನಾಂದಿ ಹಾಡಿದರು.

ಪೂಜ್ಯ ಜಗದ್ಗುರುಗಳವರ ವ್ಯಕ್ತಿತ್ವ ಹಾಗೂ ಕರ್ತೃತ್ವದ ಬಗ್ಗೆ ಅದೆಷ್ಟು ಬರೆದರೂ ಕಡಿಮೆಯೇ! ೧೬-೨-೧೯೮೧ರಂದು ಪೂಜ್ಯರ ಸುವರ್ಣ ಮಹೋತ್ಸವವು ಶ್ರೀಶೈಲ ಕ್ಷೇತ್ರದಲ್ಲಿ ಮಹಾವೈಭವದಿಂದ ನೆರವೇರಿತು. ಅದೇ ಸಂದರ್ಭದಲ್ಲಿ ಬಿಜಾಪುರ ಜಿಲ್ಲಾ ಬಸವನ ಬಾಗೇವಾಡಿಯ ಕುಲೀನ ಮಾಹೇಶ್ವರ ವಂಶದ ಶ್ರೀ ಉಮಾಪತಿದೇವರು ಎಂಬ ಹೆಸರಿನ ವಿದ್ಯಾವಿನಯ ಸಂಪನ್ನರಾದ ಸುಯೋಗ್ಯ ಮರಿದೇವರಿಗೆ ರಂಭಾಪುರಿ, ಕಾಶಿ ಮತ್ತು ಉಜ್ಜಯಿನಿ ಜಗದ್ಗುರುಗಳವರ ದಿವ್ಯ ಸನ್ನಿಧಿಯಲ್ಲಿ ಜಗದ್ಗುರು ಪಟ್ಟಾಧಿಕಾರವನ್ನು ಅನುಗ್ರಹಿಸಿ ಶ್ರೀ ೧೦೦೮ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನೂತನ ನಾಮಕರಣವನ್ನು ಮಾಡಿದರು.

ಶ್ರೀ ಜಗದ್ಗುರುಗಳವರ ಸಮದರ್ಶಿತ್ವ ಃ

ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು ಬಾಲ್ಯದಿಂದಲೇ ಸಮದರ್ಶಿಗಳಾಗಿದ್ದರು. ವೀರಶೈವ ಸಮಾಜವನ್ನು ದೂಷಿಸುವ ಗುರು-ವಿರಕ್ತವಾದವನ್ನು ನಿವಾರಿಸಲು ಬಹಳಷ್ಟು ಶ್ರಮಿಸಿದರು.

ಬೆಳಗು ಪಂಚಾಚಾರ್ಯ ತತ್ತ್ವವೆ ।
ಬೆಳಗು ಬಸವನ ಭಕ್ತಿ ತತ್ತ್ವವೆ ।
ಬೆಳಗು ವಿರತರ ಶೂನ್ಯ ತತ್ತ್ವವೆ ಸರ್ವಸಮತೆಯೊಳು ॥
ಬೆಳಗು ಜಂಗಮ ವಂಶ ದೀಪವೆ ।
ಬೆಳಗು ಭಕ್ತರ ವಂಶ ದೀಪವೆ ।
ಬೆಳಗು ದ್ವೇಷಾಸೂಯೆಗಳ ಕಡುಕತ್ತಲೆಯ ಕಳೆದು ॥

ಪೂಜ್ಯರ ಹೃದಯ ತುಂಬಿ ಹೊರಹೊರಟ ಅವರ ಈ ಉದ್ಗಾರ ಇನ್ನು ಮೇಲಾದರೂ ಜನತೆಯಲ್ಲಿ ಸಮತೆಯನ್ನು ಮೂಡಿಸಲಿ.

ಸೂರ್ಯಾಸ್ತ ಃ

ಅಖಂಡವಾಗಿ ೪೬ ವರ್ಷಗಳ ಪರ್ಯಂತ ಪೀಠ ಹಾಗೂ ಸಮಾಜೋದ್ಧಾರ ಕಾರ್ಯಗಳನ್ನು ಮಾಡಿ ವೃದ್ಧಾಪ್ಯದಿಂದ ಬಹು ಬಳಲಿದ ಪೂಜ್ಯ ಜಗದ್ಗುರುಗಳು ೧೫-೯-೧೯೮೬ನೆಯ ಸೋಮವಾರ ಪ್ರಾತಃಕಾಲ ತಮ್ಮ ೭೮ನೇ ವಯಸ್ಸಿನಲ್ಲಿ ಲಿಂಗೈಕ್ಯರಾದರು. ಪೂಜ್ಯರ ಲಿಂಗೈಕ್ಯದಿಂದ ಸೂರ್ಯಸಿಂಹಾಸನದ ವೀರಶೈವ ಸೂರ್ಯನೇ ಅಸ್ತವಾದಂತಾಗಿದೆ. ಪೂಜ್ಯರ ಕ್ರಿಯಾಸಮಾಧಿಯು ಅವರ ಪೂರ್ವದ ಸಂಕೇತದ ಮೇರೆಗೆ ದಾವಣಗೆರೆಯ ಪಂಚಾಚಾರ್ಯ ಮಂದಿರದಲ್ಲಿಯೇ ಮಾಡಲ್ಪಟ್ಟಿದೆ. ಈ ಸ್ಥಾನದಲ್ಲಿ ಶ್ರೀಮತಿ ಶ್ಯಾಮನೂರು ಸಾವಿತ್ರಮ್ಮ ಕಲ್ಲಪ್ಪ ಕಲ್ಯಾಣ ಮಂದಿರ, ಪಂಚಾಚಾರ್ಯರ ದೇವಮಂದಿರ, ಭ್ರಮರಾಂಬಾ

ಪಾಕಶಾಲೆ, ಪಾತಾಳಗಂಗಾ ಹೆಸರಿನ ಜಲಾಶಯ (ಬಾವಿ) ಮುಂತಾದವುಗಳು ತಯಾರಾಗಿರುವುದರಿಂದ ಇದೊಂದು ಪ್ರತಿ ಶ್ರೀಶೈಲದಂತೆ ಕಂಗೊಳಿಸುತ್ತಲಿದೆ. ಅಲ್ಲದೇ ಲಿಂಗೈಕ್ಯ ಜಗದ್ಗುರುಗಳ ಸಮಾಧಿ ಸ್ಥಳದಲ್ಲಿ ಅನೇಕ ಭಕ್ತರ ಅನುಪಮ ಕೊಡುಗೆಯಿಂದ ಅಮೃತಶಿಲಾಮಯ ಸುಂದರ ಮಂದಿರ ನಿರ್ಮಾಣವಾಗಿದೆ.

ಸೂರ್ಯೋದಯ :

ಸಮನ್ವಯಾಚಾರ್ಯರೆನಿಸಿದ್ದ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು ಬಹು ಸೂಕ್ಷ್ಮಮತಿಗಳು, ಗುಣಗ್ರಾಹಿಗಳು ಹಾಗೂ ದೂರದರ್ಶಿತ್ವವುಳ್ಳವರು. ಅಂತೆಯೇ ಶ್ರೀ ಸನ್ನಿಧಿಯು ಜೀವಂತವಾಗಿರುವಾಗಲೇ ಯೋಗ್ಯವ್ಯಕ್ತಿಯನ್ನು ಆಯ್ದುಕೊಂಡು ವಿಪತ್ತಿಗೆ ಹೆಸರಾದ ಶ್ರೀಶೈಲ ಪೀಠದ ಆಪತ್ತನ್ನು ದೂರೀಕರಿಸಬಲ್ಲ ತಾಕತ್ತನ್ನು ತುಂಬುವ ನಿರ್ಧಾರ ಮಾಡಿದರು. ಹತ್ತು – ಹಲವು ವ್ಯಕ್ತಿಗಳ ಅರ್ಥಾತ್ ವಟುಗಳ, ದೇಶಿಕರ, ಶಿವಾಚಾರ್ಯರ ಒಳಹೊರಗುಗಳನ್ನು ಅವಲೋಕಿಸಿ ಯೋಗ್ಯತೆಯನ್ನು ಗುರುತಿಸಲು ಸತತ ಪ್ರಯತ್ನ ನಡೆಸಿದರು. ಒಬ್ಬಿಬ್ಬರು ಯೋಗ್ಯರೆನಿಸಿದರೂ ಅವರಿಗೆ ಶ್ರೀಗಿರಿ ಪೀಠವನ್ನು ಆಳುವ ಭಾಗ್ಯವಿರಲಿಲ್ಲವೇನೋ? ಅವರೇ ಒಲ್ಲೆ ಎಂದು ಹಿಂಜರಿದರು. ಹಾಗೆ ಶೋಧ ಮಾಡುತ್ತಿರುವಾಗ ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಭಗವತ್ಪಾದರು ಪತ್ರವನ್ನು ಕೊಟ್ಟು ಶ್ರೀಉಮಾಪತಿ ದೇವರನ್ನು ಹರಿಹರಕ್ಕೆ ಕಳಿಸಿದರು. ಹರಿಹರ ಮುಕ್ಕಾಂನಲ್ಲಿದ್ದ ಶ್ರೀಶೈಲ ಜಗದ್ಗುರುಗಳವರು ಶ್ರೀ ಉಮಾಪತಿ ದೇವರನ್ನು ಆಪಾದಮಸ್ತಕ ಪರೀಕ್ಷಿಸಿ ಮುಗುಳುನಗೆ ನಕ್ಕರು. ಆ ಸಮಯಕ್ಕೆ ದಾವಣಗೆರೆಯ ಶ್ರೀ ಅಭಿನವ ಜಗದ್ಗುರು ರೇಣುಕಮಂದಿರದಲ್ಲಿ ಮುಕ್ಕಾಂ ಮಾಡಿದ್ದ ಶ್ರೀಮದ್ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯ ಭಗವತ್ಪಾದರ ಸನ್ನಿಧಿಗೆ ಕಳುಹಿಸಿಕೊಟ್ಟರು. ಅವರ ತೀಕ್ಷ್ಣದೃಷ್ಟಿ ಉಮಾಪತಿ ದೇವರ ಮೈಮನಗಳನ್ನು ಕಂಪಿಸುವಂತೆ ಮಾಡಿತು. ಸನ್ನಿಧಿಯವರ ದಿವ್ಯದೃಷ್ಟಿ-ದರ್ಶನ ರೋಮಾಂಚನಗೊಳಿಸಿತು. ಏನನ್ನೂ ಮಾತನಾಡದೆ ಶ್ರೀ ರಂಭಾಪುರಿ ಸನ್ನಿಧಿಯವರು ಉಮಾಪತಿ ದೇವರನ್ನು ಬೀಳ್ಕೊಟ್ಟರು.

ಅನಂತರ ಉಭಯ ಜಗದ್ಗುರುಗಳು ಆಪ್ತಾಲೋಚನೆ ಮಾಡಿ ಸೂರ್ಯಸಿಂಹಾಸನದ ಆಧಿಪತ್ಯಕ್ಕೆ ತಕ್ಕ ವ್ಯಕ್ತಿಯೆಂದು ಉಮಾಪತಿ ದೇವರನ್ನು ಗುರುತಿಸಿದರು.

ಬಸವಭೂಮಿಯ ಯಶೋಮೂರ್ತಿ :

ಬಿಜಾಪುರ ಜಿಲ್ಲೆಯ ಬಾಗೇವಾಡಿಯು ಜಗಜ್ಯೋತಿ ಶ್ರೀ ಬಸವೇಶ್ವರನಿಗೆ ಜನ್ಮವಿತ್ತ ಪುಣ್ಯ ಭೂಮಿ. ಮಾದರಸ – ಮಾದಲಾಂಬಿಕೆ ಎಂಬ ಶೈವಬ್ರಾಹ್ಮಣ ದಂಪತಿಗಳ ಸುಪುತ್ರನಾಗಿ ಜನಿಸಿದ ಬಸವಣ್ಣ ಕೂಡಲಸಂಗಮ ಕ್ಷೇತ್ರದ ಸಾರಂಗ ಮಠದ ಶ್ರೀ ಜಾತವೇದಮುನಿ ಶಿವಾಚಾರ್ಯ ಸ್ವಾಮಿಗಳವರ ಅನುಗ್ರಹಕ್ಕೆ ಪಾತ್ರನಾಗಿ ಲಿಂಗದೀಕ್ಷೆ ಪಡೆದು ಸಂಗಮನಾಥನ ಸತ್ಪುತ್ರನೆನಿಸಿದನು. ಆ ಪುಣ್ಯಪುರುಷನ ಅವತಾರದ ನಂತರ ಬಾಗೇವಾಡಿ 'ಬಸವನ ಬಾಗೇವಾಡಿ' ಎಂಬ ನಾಮಾಂಕಿತ ಪಡೆಯಿತು.

ಬಸವನ ಬಾಗೇವಾಡಿಯ ಹಿರಿಯ ಮಠದ ಶ್ರೀ ವೇ। ಸಂಗಯ್ಯ ಸ್ವಾಮಿಗಳು ಅವರ ಧರ್ಮಪತ್ನಿ ಶ್ರೀಮತಿ ಶಿವಲಿಂಗಮ್ಮನವರ ಸತ್ಪುತ್ರರಾಗಿ ದಿನಾಂಕ ೧೦-೩-೧೯೪೯ರಂದು ಜನಿಸಿದ ಬಾಲಕನೇ ಈ ಉಮಾಪತಿ. ಪ್ರಾಥಮಿಕ ಶಿಕ್ಷಣ ಹುಟ್ಟೂರಿನಲ್ಲೇ ಮುಗಿಯಿತು. ಉಮಾಪತಿಯ ತಾತ ಶ್ರೀ ವೇ। ವಿರೂಪಾಕ್ಷಯ್ಯನವರು ಮೊಮ್ಮಗನ ಹೃದಯ ಭೂಮಿಯಲ್ಲಿ ಧರ್ಮಸಿದ್ಧಾಂತಗಳ ಬೋಧನೆಯ ಬೀಜಗಳನ್ನು ಬಿತ್ತಿದರು. ತಾರುಣ್ಯದಲ್ಲಿ ಶ್ರೀ ಶಿವಯೋಗಿಮಂದಿರದ, ಹುಬ್ಬಳ್ಳಿಯ ಶ್ರೀ ಮೂರುಸಾವಿರಮಠ – ಮುಂತಾದ ಧರ್ಮಕೇಂದ್ರಗಳಲ್ಲಿ ಶಿವಯೋಗ ಸಾಧನೆಗೈಯುತ್ತ ಪ್ರೌಢಶಿಕ್ಷಣ ಪಡೆದರು. ಹುಬ್ಬಳ್ಳಿಯ ಹೊಸಮಠದ ಶ್ರೀ ಶಿವಬಸವ ಸ್ವಾಮಿಗಳವರ ಮಾರ್ಗದರ್ಶನದಲ್ಲಿ ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಗಳನ್ನು ಆಳವಾಗಿ ಅಧ್ಯಯನಗೈಯುತ್ತಿರುವಾಗಲೇ ಇವರ ಅಧ್ಯಯನಾಸಕ್ತಿಯನ್ನು ಕಂಡು ನಾನು ಅವಕ್ಕಾದೆನು. ಅನಂತರ ಶ್ರೀ ಉಮಾಪತಿ ದೇವರು ಸ್ನಾತಕೋತ್ತರ ಅಧ್ಯಯನಕ್ಕಾಗಿ ಕಾಶಿಗೆ ಹೋಗಿ ಡಾ। ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಸೇರ್ಪಡೆಯಾದರು. ಬಹಳ ಪರಿಶ್ರಮದಿಂದ ಬಿಡುವಿನ ವೇಳೆಯಲ್ಲಿ ಪುರಾಣ ಪ್ರವಚನಾದಿ ಕಾರ್ಯಗೈದು ಹಣ ಸಂಪಾದಿಸಿ ಆರೇಳು ವರ್ಷ ಉನ್ನತ ಶಿಕ್ಷಣ ಪಡೆದರು. ಸಾಹಿತ್ಯಾಚಾರ್ಯ, ಪ್ರಯಾಗ ವಿಶ್ವವಿದ್ಯಾಲಯದ ಸಾಹಿತ್ಯ ರತ್ನ, ಕಾಶೀ ಹಿಂದೂ ವಿಶ್ವವಿದ್ಯಾಲಯದ ಎಂ.ಎ. ಮುಂತಾದ ಪದವಿಗಳಿಂದ ಭೂಷಿತರಾದರು.

ಶ್ರೀಗಿರಿ ರಾಜ :

ಶ್ರೀ ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯರು ಶ್ರೀ ಕಾಶೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯರು ಮತ್ತು ಶ್ರೀ ರಂಭಾಪುರಿ ಜಗದ್ಗುರು ವೀರಗಂಗಾಧರ ಶಿವಾಚಾರ್ಯರು ಮತ್ತು ಶ್ರೀ ಉಜ್ಜಯಿನಿ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸನ್ನಿಧಾನಂಗಳಲ್ಲಿ ಶ್ರೀ ಉಮಾಪತಿ ದೇವರು ದಿನಾಂಕ ೧೬-೨-೧೯೮೧ರಂದು ಪಟ್ಟಾಭಿಷಕ್ತರಾಗಿ ಶ್ರೀಗಿರಿರಾಜ ಸೂರ್ಯಸಿಂಹಾಸನಾರೋಹಣ ಮಾಡಿದರು. ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯರು ಮುದ್ರಾಧಾರಣ – ಕಿರೀಟಧಾರಣಾದಿ ವಿಧಿ-ವಿಧಾನಗಳನ್ನು ನೆರವೇರಿಸಿ ಇವರಿಗೆ "ಶ್ರೀ ೧೦೦೮ ಶ್ರೀಶೈಲ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು" ಎಂಬ ಅಭಿಧಾನವನ್ನು ದಯಪಾಲಿಸಿದರು.

ನೂತನ ಜಗದ್ಗುರುಗಳವರು ಹಿರಿಯ ಜಗದ್ಗುರುಗಳವರ ದಕ್ಷ ಮಾರ್ಗದರ್ಶನದಲ್ಲಿ ಸುಮಾರು ೫ ವರ್ಷಗಳ ಕಾಲ ವಿಶೇಷ ತರಬೇತಿಯನ್ನು ಪಡೆದು ಮೋಡಗಳ ಮುಸುಕಿನಿಂದ ಹೊರ ಬಂದ ಸೂರ್ಯನಂತೆ ತೇಜೋಮೂರ್ತಿಗಳಾದರು. ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸನ್ನಿಧಿಯವರು ೧೫-೮-೧೯೮೬ರಲ್ಲಿ ಲಿಂಗೈಕ್ಯರಾದ ನಂತರ ತಾಯಿಯನ್ನು ಕಳೆದುಕೊಂಡ ತಬ್ಬಲಿಯಂತಾದ ವರ್ತಮಾನ ಜಗದ್ಗುರುಗಳವರು ಒಂದೆರಡು ತಿಂಗಳು ಕಳೆದ ನಂತರ ಮೈಕೊಡವಿ ಮೇಲೆದ್ದು ಧರ್ಮ ಜಾಗೃತಿಯಾತ್ರೆಗೆ ಸನ್ನದ್ಧರಾದರು. ವಿಶೇಷವಾಗಿ ಶ್ರೀಶೈಲ ಪೀಠದ ವ್ಯಾಜ್ಯದಲ್ಲಿ ಯಶೋದುಂದುಭಿ ಮೊಳಗಿಸುವ ಸಾಹಸಕ್ಕೆ ಕೈ ಹಾಕಿದರು. ಹಿರಿಯ ಜಗದ್ಗುರುಗಳವರ ಆಶೀರ್ವಾದ, ಭ್ರಮರಾಂಭ-ಮಲ್ಲೇಶ್ವರರ ಅನುಗ್ರಹ ಸನ್ನಿಧಿಯವರ ಸತ್ ಸಂಕಲ್ಪದಂತೆ ೨೩-೧೧-೧೯೮೯ರಂದು ಶ್ರೀಶೈಲ ಪೀಠಕ್ಕೆ ಅಂಟಿಕೊಂಡಿದ್ದ ಗ್ರಹಣ ನಿವಾರಣವಾಯಿತು.

ಶ್ರೀಶೈಲ ಸನ್ನಿಧಿಯವರ ಮುನ್ನಡೆ :

ಹಿರಿಯ ಜಗದ್ಗುರುಗಳು ಹಾಕಿಕೊಟ್ಟ ಹಾದಿಯಲ್ಲಿ ಮುನ್ನಡೆಯುತ್ತ ಆ ಹಾದಿಯನ್ನು

ಹೆದ್ದಾರಿಯನ್ನಾಗಿ ಮಾಡಿದ್ದಾರೆ. ಶ್ರೀ ಜಗದ್ಗುರು ಪಂಡಿತಾರಾಧ್ಯ ಯಾತ್ರಾನಿವಾಸವನ್ನು ನವೀಕರಿಸುವ ಹಾಗೂ ವಿಸ್ತರಿಸುವ ಕಾರ್ಯವನ್ನು ಯಶಸ್ವಿಯಾಗಿ ಎಸಗಿದ್ದಾರೆ. ನಿತ್ಯಾನ್ನದಾಸೋಹ ಪದ್ಧತಿಯನ್ನು ಆರ್ಥಿಕ ಭದ್ರ ತಳಹದಿಯ ಮೇಲೆ ಮುನ್ನಡೆಸಿದ್ದಾರೆ. ಶ್ರೀಶೈಲ ಕ್ಷೇತ್ರದಲ್ಲಿರುವ ತೆಲುಗು ವಿಶ್ವವಿದ್ಯಾಲಯದಲ್ಲಿ ವೀರಶೈವ ಸಿದ್ಧಾಂತ ಕುರಿತ ಅಧ್ಯಯನ – ಸಂಶೋಧನೆಗಳಿಗೆ ಪ್ರೋತ್ಸಾಹ ನೀಡಿದ್ದಾರೆ. ಶ್ರೀ ಭ್ರಮರಾಂಬ ದೇವಿಯ ದೇವಾಲಯದ ಮುಖ ಮಂಟಪದ ಗೋಪುರದ ಮೇಲೆ ಸುವರ್ಣಕಲಶಾರೋಹಣ ಕಾರ್ಯವನ್ನು ಇನ್ನುಳಿದ ಸಮಾನ ಪೀಠಾಚಾರ್ಯರೊಂದಿಗೆ ಯಶಸ್ವಿಯಾಗಿ ನೆರವೇರಿಸಿದ್ದಾರೆ. ದಿ. ೬–೭–೧೯೮೮ ರಂದು ನೆರವೇರಿದ ಈ ಕಾರ್ಯಕ್ರಮದಲ್ಲಿ ಶ್ರೀಜಗದ್ಗುರು ಪಂಚಪೀಠಾಧೀಶ್ವರರು ದಯಪಾಲಿಸಿದ ದರ್ಶನ – ಆಶೀರ್ವಾದಗಳಿಂದ ಲಕ್ಷಾಂತರ ಜನ ರೋಮಾಂಚನಗೊಂಡರು. ಶ್ರೀಶೈಲ ಕ್ಷೇತ್ರದಲ್ಲಿ ಯಾತ್ರಾರ್ಥಿಗಳ ವಾಸ್ತವ್ಯಕ್ಕಾಗಿ ಅನೇಕ ಅತಿಥಿಗೃಹಗಳು ಸುಸಜ್ಜಿತವಾಗಿ ತಲೆಯೆತ್ತಿ ನಿಂತಿವೆ.

ಲಿಂಗೈಕ್ಯ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರ ಕ್ರಿಯಾ ಸಮಾಧಿಯು ದಾವಣಗೆರೆ ಮಹಾನಗರದಲ್ಲಿ ಆದುದು ಸರ್ವಶೃತವಿದೆ. ೧೯೯೫ನೆಯ ಸೆಪ್ಟೆಂಬರ್ ೪,೫ ಮತ್ತು ೬ರಂದು ಆ ಪುಣ್ಯಾವರಣದಲ್ಲಿ ಜರುಗಿದ ೯ನೆಯ ಪುಣ್ಯಾರಾಧನೆಯು ಅಭೂತಪೂರ್ವವೆನಿಸಿ ಶ್ರೀಶೈಲ ಪೀಠದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕಂಥ ದಾಖಲೆ ನಿರ್ಮಿಸಿದೆ. ೨೫ ಲಕ್ಷ ರೂ.ಗಳಿಗೂ ಅಧಿಕ ವೆಚ್ಚದಿಂದ ನಿರ್ಮಿಸಲ್ಪಟ್ಟ ಅಮೃತ ಶಿಲಾಮಯ ಮಂದಿರವು ಅಂದೇ ಉದ್ಘಾಟಿಸಲ್ಪಟಿತು. ಆ ಕಾಲಕ್ಕೆ ಶ್ರೀ ಜಗದ್ಗುರು ಪಂಚಪೀಠಾಧೀಶ್ವರರ ದಿವ್ಯ ಸನ್ನಿಧಾನವು ಲಕ್ಷಾಂತರ ಜನರಿಗೆ ಲಭಿಸಿತು. ರಾಜ್ಯ ಹಾಗೂ ರಾಷ್ಟ್ರಮಟ್ಟದ ನಾಯಕರು ಆ ಕಾರ್ಯಕ್ರಮಗಳಲ್ಲಿ ಭಾಗಿಗಳಾಗಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಸಂಗೀತ–ಸಾಹಿತ್ಯ, ಸದ್ಧರ್ಮ ಗೋಷ್ಠಿಗಳು ಜನಮನಗಳನ್ನು ತಣಿಸಿದವು.

ಸೂರ್ಯಕಿರಣ ಪೃಥಕ್ಕರಣ ಃ

ವರ್ತಮಾನ ಶ್ರೀಶೈಲ ಜಗದ್ಗುರುಗಳವರು ಸಲೀಸಾಗಿ ಕಾರ್ಯ ಸಾಧನೆಗೈಯುವ ಸಮರ್ಥರೆನಿಸಿದ್ದಾರೆ. ಕಳೆದ ಇಪ್ಪತ್ತಾರು ವರ್ಷಗಳಲ್ಲಿ ಆಸೇತು ಹಿಮಾಚಲ ಸಂಚರಿಸಿ ತಮ್ಮ ವಾಗ್ಝರಿಯಿಂದ ಲಕ್ಷಾಂತರ ಜನರ ಭಾವಭಿತ್ತಿಯನ್ನು ಶುದ್ಧಗೊಳಿಸಿದ್ದಾರೆ. ಕನ್ನಡದಷ್ಟೇ ನಿರರ್ಗಳವಾಗಿ, ನಿರಾಳವಾಗಿ, ಸರಳವಾಗಿ ಹಿಂದಿ ಹಾಗೂ ತೆಲುಗು ಭಾಷೆಗಳಲ್ಲಿ ಆಶೀರ್ವಚನ ನೀಡಬಲ್ಲ ವಾಗ್ ವೈಖರಿ ಇವರಿಗೆ ಇರುವುದರಿಂದ ದೇಶ ಮಧ್ಯ ಸಂಚರಿಸಿ ಜನಮನ ಗೆದ್ದಿದ್ದಾರೆ. ಮುಂಬಾಯಿ, ದಿಲ್ಲಿ, ಬೆಂಗಳೂರು, ಸೊಲ್ಲಾಪುರ, ಕೊಲ್ಲಾಪುರ–ಮುಂತಾದ ಮಹಾನಗರಗಳಲ್ಲದೆ ಅನೇಕ ಹಳ್ಳಿ–ಪಟ್ಟಣಗಳಲ್ಲಿ ಧರ್ಮ ಜಾಗೃತಿ ಯಾತ್ರೆ ಕೈಗೊಂಡು ಧರ್ಮ ಪ್ರಚಾರ ಕಾರ್ಯವನ್ನು ಬಹು ಯಶಸ್ವಿಯಾಗಿ ನಡೆಸುತ್ತಿದ್ದಾರೆ.

ಕರ್ತೃತ್ವ ಶಕ್ತಿಯ ಜೊತೆಗೆ ಹಿರಿಯ ಜಗದ್ಗುರುಗಳು ನೀಡಿದ ತರಬೇತಿ ಇವರ ಸಾಮರ್ಥ್ಯವನ್ನು ಅಧಿಕಗೊಳಿಸಿದೆ. ಹುಬ್ಬಳ್ಳಿಯಲ್ಲಿ ಶ್ರೀ ಜಗದ್ಗುರು ಪಂಚಾಚಾರ್ಯ ಪುಣ್ಯಾಶ್ರಮ, ಶ್ರೀಶೈಲ ಮಠವನ್ನು ಸ್ಥಾಪಿಸಿ, ಅಲ್ಲಿ ಶ್ರೀಪೀಠದ ಪ್ರಭಾವವನ್ನು ವರ್ಧಿಸಿದ್ದಾರೆ. ಆತ್ಮಕೂರು ನಗರದಲ್ಲಿ ಶ್ರೀಶೈಲ ಕಂಬಿಮಠ ನಿರ್ಮಾಣವಾಗಿದೆ. ಶ್ರೀಶೈಲ ಕ್ಷೇತ್ರದಲ್ಲಿ "ಶ್ರೀ ಜಗದ್ಗುರು ಶ್ರೀಶೈಲ ಗಿರಿರಾಜ ಸೂರ್ಯಸಿಂಹಾಸನ ಕಲ್ಯಾಣಮಂಟಪ" ಕಾರ್ಯ ನಿರ್ವಹಿಸುತ್ತಲಿದೆ. ರಾಣೇಬೆನ್ನೂರು ನಗರದಲ್ಲಿ ಶ್ರೀ ಜಗದ್ಗುರು ವಾಗೀಶಪಂಡಿತಾರಾಧ್ಯ ಮಂಗಲ ಭವನ ನಿರ್ಮಾಣಕ್ಕಾಗಿ ನಿವೇಶನ ಪಡೆದಿದ್ದಾರೆ.

ಲಿಂಗೈಕ್ಯ ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು ವಿನೂತನ ಪರಂಪರೆಯೊಂದನ್ನು ಶ್ರೀ ಪೀಠಕ್ಕೆ ಉಡುಗೊರೆಯಾಗಿಕೊಟ್ಟರು. ಅದುವೇ "ದಸರಾ ದರ್ಬಾರು" ಎಂಬ ವಿಜಯ ದಶಮಿ ಮಹೋತ್ಸವವು. ಶ್ರೀ ಸನ್ನಿಧಿಯವರ ಹಾಗೂ ಶ್ರೀ ಪೀಠದ ಔನ್ನತ್ಯದ ದರ್ಶನ ಮಾಡಿಸುವ ಸಾಂಸ್ಕೃತಿಕ ಕಾರ್ಯಕ್ರಮ ಇದಾಗಿದೆ. ಪೂರ್ವಾಚಾರ್ಯರಂತೆ ಸದ್ಯದ ಸನ್ನಿಧಿಯವರೂ ಸಹ ಆ ಉತ್ತಮ ಹಾಗೂ ಉನ್ನತ ಪರಂಪರೆಯನ್ನು ಇನ್ನೂ ವ್ಯಾಪಕಗೊಳಿಸಿದ್ದಾರೆ. "ಶರನ್ನವರಾತ್ರಿ ದಸರಾ ದರ್ಬಾರು" ಕಾರ್ಯಕ್ರಮ ಕರ್ನಾಟಕ, ಆಂಧ್ರ ಹಾಗೂ ಮಹಾರಾಷ್ಟ್ರ ರಾಜ್ಯಗಳಲ್ಲಿ ಜನಮನ್ನಣೆ ಪಡೆದಿದೆ. ಅದಕ್ಕೆ ಎಲ್ಲೆಡೆ ಹಾರ್ದಿಕಸ್ವಾಗತವಿದೆ. ವೇಷ–ಭೂಷಣಗಳು, ಸಾಹಿತ್ಯಿಕ – ಜನಪದೀಯ ಹಾಗೂ ಸಂಗೀತ ಕಲಾಮಿಲನವೆನಿಸಿದ ಈ ಕಾರ್ಯಕ್ರಮವನ್ನು ಕಣ್ಣಾರೆ ಕಂಡು ಹಿರಿಹಿರಿ ಹಿಗ್ಗಿದವರೇ ಅದರ ಸೊಬಗನ್ನು ಅರಿಯಬಲ್ಲರು.

ಧರ್ಮ–ಸಂಸ್ಕೃತಿ, ಸಮಾಜ ಕಲ್ಯಾಣ ಕಾರ್ಯಗಳಲ್ಲಿ ಇರುವಷ್ಟು ಆಸಕ್ತಿ ಶಿಕ್ಷಣ ಕ್ಷೇತ್ರದ ಅಭಿವೃದ್ಧಿಯಲ್ಲಿಯೂ ಇದೆ. ಹಿರಿಯ ಜಗದ್ಗುರುಗಳು ಕಟ್ಟಿ ಬೆಳೆಸಿದ ವಿದ್ಯಾಸಂಸ್ಥೆಗಳಿಗೆ ಹೊಸ ಆಯಾಮ ಕಲ್ಪಿಸುವುದರೊಂದಿಗೆ ಅವು ಸುಸಜ್ಜಿತವಾಗಿ ಮುನ್ನಡೆಯುವಂತೆ ಮಾಡಿದ್ದಾರೆ. ಇತ್ತೀಚೆಗೆ ಕುಮಾರಪಟ್ಟಣಮ್‌ನಲ್ಲಿ "ಶ್ರೀಶೈಲ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಕೈಗಾರಿಕಾ ತರಬೇತಿ ಸಂಸ್ಥೆ" ತಲೆಯೆತ್ತಿ ಕಾರ್ಯನಿರ್ವಹಿಸುತ್ತಲಿದೆ.

ಮೈಸೂರು ಮುಕ್ತವಿಶ್ವವಿದ್ಯಾಲಯದ ಸ್ನಾತಕೋತ್ತರ ಕೇಂದ್ರವು ಶ್ರೀ ಸನ್ನಿಧಿಯವರ ದೂರದೃಷ್ಟಿಯಿಂದ ಹಾಗೂ ಆಡಳಿತ ಮಂಡಳಿಯವರ ಆಸಕ್ತಿಯಿಂದ ಹರಿಹರದ ಮಹಾವಿದ್ಯಾಲಯದಲ್ಲಿ ಪ್ರಾರಂಭವಾಗಿದೆ. ಇಂಗ್ಲೀಷ್ ಭಾಷಾ ಅಧ್ಯಯನಕ್ಕೆ, ಎಂ.ಎ. ತರಗತಿಯ ಅವಕಾಶ ಕಲ್ಪಿಸಲಾಗಿದೆ. ಅದೇ ಮಹಾವಿದ್ಯಾಲಯದಲ್ಲಿ ಕಂಪ್ಯೂಟರ್ ಇಂಡಸ್ಟ್ರಿಯಲ್ ಶಿಕ್ಷಣ, ಬಯೋಟೆಕ್ನಾಲಜಿಯಲ್ಲಿ ವಿಶೇಷ ಅಧ್ಯಯನ ಮುಂತಾದವುಗಳಿಗೆ ಅವಕಾಶ ಕಲ್ಪಿಸಲಾಗಿದೆ. ಕಳೆದ ವರ್ಷ ಶ್ರೀಶೈಲ ಜಗದ್ಗುರು ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯವು ಸ್ವಾಯತ್ತ (ಂಣಣಂಟಿಂಟಂಣ) ಮಹಾವಿದ್ಯಾಲಯವಾಗಿ ಪರಿವರ್ತಿತಗೊಂಡಿದೆ. ಇದೊಂದು ಅಪರೂಪದ ಕೊಡುಗೆ ಎಂದು ಹೇಳಬಹುದು. ಶ್ರೀಶೈಲ ಸನ್ನಿಧಿಯವರು ಸಿಂಧನೂರು ತಾಲೂಕಿನ ಗುಂಡ ಎಂಬ ಗ್ರಾಮದಲ್ಲಿ ಇತ್ತೀಚೆಗೆ ಒಂದು ಹೊಸಕ್ಷೇತ್ರವನ್ನು ಹುಟ್ಟುಹಾಕಿ ಅದನ್ನು ವಿಸ್ತರಿಸುವ ಸಾಹಸ ಮಾಡಿದ್ದಾರೆ. ಈಗಾಗಲೇ ಅಲ್ಲಿ ಶ್ರೀಶೈಲ ಜಗದ್ಗುರು ಶ್ರೀಪಂಡಿತಾರಾಧ್ಯಮಠ, ಶ್ರೀಶೈಲ ಮಲ್ಲಿಕಾರ್ಜುನ ಮಂದಿರ, ವಿದ್ಯಾರ್ಥಿವಸತಿ ನಿಲಯ, ಅನ್ನದಾನ ಮಂದಿರ(ದಾಸೋಹ) ಹಾಗೂ ಶ್ರೀ ಅಮರೇಶ್ವರ ಮಂದಿರ ಮುಂತಾದ ಕಟ್ಟಡಗಳು ಅಲ್ಪಾವಧಿಯಲ್ಲಿಯೇ ತಲೆಯೆತ್ತಿ ನಿಂತಿವೆ. ಅದೊಂದು ಶ್ರೀಶೈಲ ಮಹಾಪೀಠದ ಖಾಸಾ ಸಂಸ್ಥಾನವಾಗಲಿದೆ. ಹರಿಹರ ತಾಲೂಕು ಮಲೆಬೆನ್ನೂರಿನಲ್ಲಿ ಶ್ರೀಶೈಲ ಪೀಠಕ್ಕೆ ಸೇರಿದ ಪಾಳುಬಿದ್ದ ಮಠ ಒಂದಿತ್ತು. ಅದನ್ನ ವಿನೂತನವಾಗಿ ಸಂಪೂರ್ಣ ಶಿಲಾಮಂಟಪವಾಗಿ ನಿರ್ಮಾಣ

ಮಾಡಿಸುತ್ತಿದ್ದಾರೆ.

ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀಶೈಲ ಗಿರಿರಾಜ ಸೂರ್ಯ ಸಿಂಹಾಸನ ಆರೋಹಣ ಮಾಡಿ ಇಪ್ಪತ್ತೈದು ವಸಂತಗಳು ಸಂದ ಸವಿನೆನಪಿಗಾಗಿ ೨೦೦೬ ರ ಜನವರಿಯಲ್ಲಿ ಶ್ರೀ ಪೀಠದ ಭಕ್ತಾಭಿಮಾನಿಗಳು ಹುಬ್ಬಳ್ಳಿಯಲ್ಲಿ ರಜತಮಹೋತ್ಸವವನ್ನು ಅದ್ದೂರಿಯಾಗಿ ಆಚರಿಸಿದರು. ಆ ಸಂದರ್ಭದಲ್ಲಿ ವಿದ್ವತ್‌ಗೋಷ್ಠಿಗಳು, ವಿಚಾರಸಂಕಿರಣಗಳು, ಸಾಮೂಹಿಕ ವಿವಾಹ ಹಾಗೂ ದೀಕ್ಷಾದಿ ಕಾರ್ಯಕ್ರಮಗಳು ನೆರವೇರಿದವು. ಶ್ರೀ ಸನ್ನಿಧಿಯವರ ಪೀಠಾರೋಹಣದ ರಜತಮಹೋತ್ಸವದೊಂದಿಗೆ ಅವರ ವಯೋಮಾನದ ಸುವರ್ಣಮಹೋತ್ಸವ ಸಂಭ್ರಮವೂ ಸೇರಿ ಬಂಗಾರಕ್ಕೆ ಕುಂದಣವನ್ನಿಟ್ಟಂತೆ ಆಗಿತ್ತು. ಶ್ರೀ ಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯರ ಸುವರ್ಣ ಯುಗವು ಇವರ ಕಾಲದಲ್ಲಿ ರಜತಗಿರಿಯನೇರಿ ವಿಜೃಂಭಿಸುವಂತಾಯಿತು. ಹೊಸ ಹೊಸ ಯೋಜನೆಗಳು, ಅವುಗಳನ್ನು ಕಾರ್ಯಗತಗೊಳಿಸುತ್ತಿರುವುದು ಶ್ರೀ ಸನ್ನಿಧಿಯವರ ಕರ್ತೃತ್ವ ಶಕ್ತಿಗೆ ಹಿಡಿದ ಕನ್ನಡಿಯಾಗಿದೆ. ಶ್ರೀ ಪೀಠದಿಂದ ಕೆಲವು ಉಪಯುಕ್ತ ಗ್ರಂಥಗಳು ಪ್ರಕಟವಾಗುತ್ತಿರುವುದು ಸನ್ನಿಧಿಯವರ ಸಾಹಿತ್ಯಾಸಕ್ತಿಯ ಸಂಕೇತವಾಗಿದೆ.

ಇಂತು ಎಲ್ಲಾ ಕ್ಷೇತ್ರಗಳಲ್ಲಿಯೂ ಸಮಾನ ಆಸಕ್ತಿ – ಅಭಿರುಚಿ –ಕ್ರಿಯಾಶೀಲತೆ ಹೊಂದಿರುವ ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸನ್ನಿಧಿಯವರು ಈ ದೇಶಕ್ಕೆ, ಈ ಜನಾಂಗಕ್ಕೆ ಇನ್ನೂ ಹೆಚ್ಚಿನ ಕೊಡುಗೆ ನೀಡುವ ಶಕ್ತಿಯನ್ನು ಶ್ರೀ ಭ್ರಮರಾಂಬ ಸಹಿತ ಶ್ರೀ ಮಲ್ಲೇಶನು ಅನುಗ್ರಹಿಸಲೆಂದು ಆಶಿಸೋಣ.

ಶ್ರೀಶೈಲ ಸೂರ್ಯಸಿಂಹಾಸನ ಪೀಠದ ಜಗದ್ಗುರು ಪರಂಪರೆ

ಶ್ರೀ ಜಗದ್ಗುರು ಚತುರಕ್ಷರ ಶಿವಾಚಾರ್ಯ ಭಗವತ್ಪಾದರು (ಕೃತಯುಗದ ಆದಿ)
ಶ್ರೀ ಜಗದ್ಗುರು ಚತುರ್ವಕ್ತ್ರ ಶಿವಾಚಾರ್ಯ ಭಗವತ್ಪಾದರು (ತ್ರೇತಾಯುಗದ ಆದಿ)
ಶ್ರೀ ಜಗದ್ಗುರು ಧೇನುಕರ್ಣ ಶಿವಾಚಾರ್ಯ ಭಗವತ್ಪಾದರು (ದ್ವಾಪರಯುಗದ ಆದಿ)
ಶ್ರೀ ಜಗದ್ಗುರು ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು (ಕಲಿಯುಗದ ಆದಿ)

೧. ಶ್ರೀ ಜಗದ್ಗುರು ಸದಾನಂದ ಶಿವಾಚಾರ್ಯರು
೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು (ಕ್ರಿ.ಶ. ೯೪೦)
೩. ಶ್ರೀ ಜಗದ್ಗುರು ಶಂಕರ ಶಿವಾಚಾರ್ಯರು
೪. ಶ್ರೀ ಜಗದ್ಗುರು ಶ್ರೀಪತಿ ಪಂಡಿತಾರಾಧ್ಯ ಶಿವಾಚಾರ್ಯರು (ಕ್ರಿ.ಶ. ೧೦೬೦)
೫. ಶ್ರೀ ಜಗದ್ಗುರು ಗಜಕರ್ಣ ಶಿವಾಚಾರ್ಯರು
೬. ಶ್ರೀ ಜಗದ್ಗುರು ಸಂಗಮ ಶಿವಾಚಾರ್ಯರು
೭. ಶ್ರೀ ಜಗದ್ಗುರು ತ್ರಿರಂಗುಷ್ಠ ಶಿವಾಚಾರ್ಯರು
೮. ಶ್ರೀ ಜಗದ್ಗುರು ಅವ್ಯಯ ಶಿವಾಚಾರ್ಯರು
೯. ಶ್ರೀ ಜಗದ್ಗುರು ಕಲ್ಯಾಣಪಂಡಿತ ಶಿವಾಚಾರ್ಯರು
೧೦. ಶ್ರೀ ಜಗದ್ಗುರು ಉಮಾಧವ ಶಿವಾಚಾರ್ಯರು
೧೧. ಶ್ರೀ ಜಗದ್ಗುರು ಪ್ರಭು ಶಿವಾಚಾರ್ಯರು
೧೨. ಶ್ರೀ ಜಗದ್ಗುರು ಗೋಕರ್ಣ ಶಿವಾಚಾರ್ಯರು
೧೩. ಶ್ರೀ ಜಗದ್ಗುರು ಮಂಚಣ ಪಂಡಿತಾರಾಧ್ಯ ಶಿವಾಚಾರ್ಯರು
೧೪. ಶ್ರೀ ಜಗದ್ಗುರು ಸುರೇಶ ಶಿವಾಚಾರ್ಯರು
೧೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
೧೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಪಂಡಿತಾರಾಧ್ಯ ಶಿವಾಚಾರ್ಯರು (ಕ್ರಿ.ಶ. ೧೧೯೫)
೧೭. ಶ್ರೀ ಜಗದ್ಗುರು ಈಶ್ವರ ಶಿವಾಚಾರ್ಯರು(ಕ್ರಿ.ಶ. ೧೩೦೦)
೧೮. ಶ್ರೀ ಜಗದ್ಗುರು ಪಟ್ಟದ ಪ್ರಮಥೇಶ್ವರ ಶಿವಾಚಾರ್ಯರು (ಕ್ರಿ.ಶ. ೧೭೦೦)
೧೯. ಶ್ರೀ ಜಗದ್ಗುರು ಸಿದ್ಧಮಲ್ಲಿಕಾರ್ಜುನ ಶಿವಾಚಾರ್ಯರು
೨೦. ಶ್ರೀ ಜಗದ್ಗುರು ತ್ರಿಲಿಂಗ ಚಕ್ರೇಶ್ವರ ಶಿವಾಚಾರ್ಯರು
೨೧. ಶ್ರೀ ಜಗದ್ಗುರು ಸಿದ್ಧಭಿಕ್ಷಾವರ್ತಿ ಶಿವಾಚಾರ್ಯರು
೨೨. ಶ್ರೀ ಜಗದ್ಗುರು ನಾಗಲೂಟಿ ಭಿಕ್ಷಾವರ್ತಿ ಶಿವಾಚಾರ್ಯರು (ಕ್ರಿ.ಶ. ೧೯೦೮–೧೯೪೦)
೨೩. ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯರು (ಕ್ರಿ.ಶ. ೧೯೪೦–೧೯೮೬)
೨೪. ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯರು (ಕ್ರಿ.ಶ. ೧೯೮೧)

ವಿಶೇಷ ಸೂಚನೆ : ಸನಾತನವಾದ ಶ್ರೀ ಶೈಲ ಪೀಠಕ್ಕೂ ಅನೇಕ ಜಗದ್ಗುರುಗಳು ಆಗಿ ಹೋಗಿದ್ದಾರೆ. ಆದರೆ ಈ ಪರಂಪರೆಯ ಅನೇಕ ಜಗದ್ಗುರುಗಳವರ ಹೆಸರು ಹಾಗೂ ಚರಿತ್ರೆಗಳು ಕಾಲಗರ್ಭದಲ್ಲಿ ಅಡಗಿಹೋಗಿರುವುದರಿಂದ ದೊರೆತವುಗಳನ್ನು ಮಾತ್ರ ಪ್ರಕಟಿಸಲಾಗಿದೆ.

ಶ್ರೀ ಕಾಶೀ ಪೀಠದ ಪರಂಪರೆ

ಭಾರತ ದೇಶದ ಅತ್ಯಂತ ಪ್ರಾಚೀನ ಪುಣ್ಯತೀರ್ಥ ಕ್ಷೇತ್ರಗಳಲ್ಲಿ ಕಾಶಿಯು ಪ್ರಮುಖವಾಗಿದೆ. "ಕಾಶ್ಯತೇ ಪ್ರಕಾಶ್ಯತೇ ಇತಿ ಕಾಶೀ" – ಅಂದರೆ ತನ್ನ ಸರ್ವೋತ್ಕೃಷ್ಟಗಳಾದ ವೈಶಿಷ್ಟ್ಯಗಳಿಂದ ಪ್ರಕಾಶಮಾನವಾದ ಈ ಕ್ಷೇತ್ರಕ್ಕೆ "ಕಾಶೀ" ಎಂಬ ಪವಿತ್ರ ನಾಮವು ಪ್ರಾಪ್ತವಾಗಿದೆ. ಅಂತೆಯೇ ಬಹುದೂರದಲ್ಲಿರುವ ಕಾಶಿಗೆ ಬರಲು ಅಶಕ್ತರಾದ ಭಾವುಕ ಜನರು ತಮ್ಮೂರಿನಲ್ಲಿಯೇ ಇದ್ದು ಅನನ್ಯವಾದ ಭಕ್ತಿಯಿಂದ ಕಾಶೀ, ಕಾಶೀ, ಕಾಶೀ ಎಂದು ಮೂರು ಸಾರೆ ಕ್ಷೇತ್ರವನ್ನು ಮನಸ್ಸಿನಲ್ಲಿ ಧ್ಯಾನಿಸಿದ ಮಾತ್ರಕ್ಕೆ ಕಾಶೀಯಾತ್ರೆಯನ್ನು ಮಾಡಿದ ಫಲವು ಪ್ರಾಪ್ತವಾಗುವುದೆಂಬ ಪ್ರೌಢೋಕ್ತಿಯು ಪ್ರಚಾರದಲ್ಲಿದೆ.

ಭಾರತದ ಎಲ್ಲ ಪ್ರದೇಶಗಳ, ಎಲ್ಲ ಭಾಷೆಗಳ, ಎಲ್ಲ ಧರ್ಮಗಳ ಜನರು ಸ್ಥಾಯೀರೂಪವಾಗಿ ಕಾಶಿಯಲ್ಲಿ ಬಹುಕಾಲದಿಂದ ವಾಸಮಾಡಿದ್ದಾರೆ. ಸಮಸ್ತ ಭಾರತವನ್ನು ಒಂದೇ ಊರಿನಲ್ಲಿ ನೋಡಬೇಕಾಗಿದ್ದರೆ ಕಾಶಿಗೆ ಬಂದರೆ ಸಾಕು. ಆದ್ದರಿಂದ ವಿದೇಶದಿಂದ ಯಾತ್ರಾರ್ಥಿಗಳಾಗಿ ಬಂದ ಜನರು ಪ್ರಥಮವಾಗಿ ಈ ಕ್ಷೇತ್ರಕ್ಕೇನೇ ಭೇಟಿ ನೀಡುತ್ತಾರೆ.

ಕಾಶಿಯಲ್ಲಿ ವಿಭಿನ್ನ ಸಂಪ್ರದಾಯಗಳ ೩೦೦ ಮಠಗಳು ಹಾಗೂ ೧೫೫೦

ದೇವಸ್ಥಾನಗಳಿವೆ. ಇಲ್ಲಿಯ ಜನಗಣತಿಯ ಪ್ರಕಾರ ೨೪೦ ಜನರಿಗೆ ಒಬ್ಬ ಸನ್ಯಾಸಿಯಂತೆ ಮಹಾತ್ಮರು ಸ್ಥಾಯೀರೂಪವಾಗಿ ವಾಸಮಾಡಿದ್ದಾರೆ. (ಇದು ೧೯೩೧ರ ಜನಗಣತಿಯನ್ನು ಆಧರಿಸಿದೆ) ಇವರಲ್ಲಿ ಬಹುಪಾಲು ಜನರು ಶಿವಭಕ್ತರೇ ಇದ್ದಾರೆ. ಇಂದಿನವರೆಗೆ ಅಸ್ತಿತ್ವದಲ್ಲಿರುವ ಕಾಶಿಯ ಮಠಗಳಲ್ಲಿ "ಶ್ರೀ ಜಂಗಮವಾಡಿ ಮಠ" ಅತ್ಯಂತ ಪ್ರಾಚೀನವಾದುದು. ಈ ವಿಷಯವನ್ನು ಶ್ರೀ ವೈದ್ಯನಾಥ ಸರಸ್ವತಿ ಎನ್ನುವವರು "ಸ್ವತಂತ್ರ ಭಾರತ" ಎಂಬ ವಾರಾಣಸಿಯ ಹಿಂದೀ ದಿನಪತ್ರಿಕೆಯಲ್ಲಿ ತಾ॥೨೬–೧೧–೧೯೮೬ರಂದು "ಕಾಶೀಮೇ ಜಿತನೇ ಭೀ ಜೀವಿತ ಮಠ ಹೈ ಉನಮೇ ಸಬಸೇ ಪ್ರಾಚೀನ ಹೈ ವೀರಶೈವೋಂಕಾ ಜಂಗಮವಾಡೀ ಮಠ, ಜಿಸಕೀ ಸ್ಥಾಪನಾ ಛಠೀ ಶತಾಬ್ದೀ ಮೆ ಹುಯೀ ಮಾನೀ ಜಾತೀ ಹೈ। ಇನಮೇ ಸರ್ವಾಧಿಕ ಸಂಖ್ಯಾ ಉನ ಮಠೋಂಕೀ ಹೈ ಜಿನಕೀ ಸ್ಥಾಪನಾ ೧೮೦೧ ಸೇ ೧೯೩೮ ಕೇ ಬೀಚ್ ಹುಯೀ ಹೈ।" ಅಂದರೆ ಕಾಶಿಯಲ್ಲಿರುವ ಎಲ್ಲ ಮಠಗಳಲ್ಲಿ ವೀರಶೈವ ಧರ್ಮದ ಈ ಜಂಗಮವಾಡಿ ಮಠವು ಕ್ರಿ.ಶ. ೬ನೆಯ ಶತಮಾನಕ್ಕಿಂತಲೂ ಪೂರ್ವದ್ದಾಗಿದೆ. ಇಲ್ಲಿಯ ಉಳಿದ ಧರ್ಮಗಳ ಮಠಗಳು ಕ್ರಿ.ಶ. ೧೮೦೧ರಿಂದ ೧೯೩೮ರ ಮಧ್ಯಾವಧಿಯಲ್ಲಿ ಸ್ಥಾಪಿತವಾಗಿರುತ್ತವೆ ಎಂಬುದಾಗಿ ಉಲ್ಲೇಖ ಮಾಡಿದ್ದಾರೆ.

ಅತ್ಯಂತ ಪ್ರಾಚೀನ ಕಾಲದಿಂದ ಶ್ರೀ ವಿಶ್ವನಾಥ ದೇವಸ್ಥಾನದ ನಂತರ ಶ್ರೀ ಜಂಗಮವಾಡಿ ಮಠವೇ ದರ್ಶನೀಯ ಸ್ಥಾನವಾಗಿದೆ. ಸ್ಥಳೀಯ ಹಾಗೂ ಪರಸ್ಥಳೀಯ ಜನರು ಪ್ರತಿದಿವಸ ಶ್ರೀ ಮಠದ ಕರ್ತೃಗದ್ದುಗೆಯ ದರ್ಶನಕ್ಕಾಗಿ ಬರುತ್ತಿರುತ್ತಾರೆ. ವಿಶೇಷವಾಗಿ ಮಹಾಶಿವರಾತ್ರಿಯ ದಿವಸ ಸಹಸ್ರಾರು ಜನರು ಇಲ್ಲಿಗೆ ದರ್ಶನಾರ್ಥಿಗಳಾಗಿ ಬರುವುದು ಉಲ್ಲೇಖನೀಯ.

ಶ್ರೀ ಜಗದ್ಗುರು ವಿಶ್ವಾರಾಧ್ಯರ ಅವತಾರ ಃ

ಮಹಾಶಿವರಾತ್ರಿಯು ಈ ಪೀಠದ ಮೂಲ ಸಂಸ್ಥಾಪಕರಾದ ಶ್ರೀ ಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರ ಅವತಾರದ ದಿನವಾಗಿದೆ. ಪರಶಿವನ ಅಪ್ಪಣೆಯ ಪ್ರಕಾರ ಭೂಲೋಕದಲ್ಲಿ ವೀರಶೈವ ಧರ್ಮವನ್ನು ಪ್ರತಿಷ್ಠಾಪಿಸುವುದಕ್ಕಾಗಿ ಶ್ರೀ ಜಗದ್ಗುರು ಪಂಚಾಚಾರ್ಯರಲ್ಲೊಬ್ಬರಾದ ಶ್ರೀ ಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರು ಅವತರಿಸಿದರು.

ಕಾಶ್ಯಾಂ ವಿಶ್ವೇಶಲಿಂಗಾಚ್ಚ ವಿಶ್ವಾರಾಧ್ಯಸ್ಯ ಸಂಭವಃ ।
ಸ್ಥಾನಂ ಶ್ರೀ ಕಾಶಿಕಾಕ್ಷೇತ್ರೇ ಶ್ರುಣು ಪಾರ್ವತಿ ಸಾದರಮ್ ॥
(ಸ್ವಾಯಂಭುವಾಗಮ)

ಸ್ಕಂದಗೋತ್ರಾದಿನಾಥಶ್ಚ ಮಹಾಸಿಂಹಾಸನಾಗ್ರಣೀ ।
ವಿಶ್ವಾರಾಧ್ಯ ಇತಿ ಖ್ಯಾತೋ ಜಗದ್ಗುರೂತ್ತಮಶ್ಚ ಸಃ ॥
(ಸುಪ್ರಬೋಧಾಗಮ)

ಈ ಆಗಮೋಕ್ತಿಗಳ ಪ್ರಮಾಣಾನುಸಾರವಾಗಿ ಕಾಶಿಯ ಸುಪ್ರಸಿದ್ಧ ಜ್ಯೋತಿರ್ಲಿಂಗವಾದ ಶ್ರೀ ವಿಶ್ವನಾಥ ಶಿವಲಿಂಗದಿಂದ ಮಹಾಶಿವರಾತ್ರಿಯ ದಿವಸ ಶ್ರೀ ಜಗದ್ಗುರು ವಿಶ್ವಾರಾಧ್ಯರು ದಿವ್ಯದೇಹಧಾರಿಗಳಾಗಿ ಅವತರಿಸಿದರು.

ಏತೇ ಯುಗಚತುಷ್ಕೇ ತು ಪಂಚಾರಾಧ್ಯಾ ಯಥಾವಿಧಿ ।
ಮಮ ಲಿಂಗಮುಖೋದ್ಭೂತಾ ಲೋಕವಿಶ್ರುತ ಕೀರ್ತಯಃ ॥
(ಸ್ವಾಯಂಭುವಾಗಮ)

ಎನ್ನುವ ಆಗಮ ಪ್ರಮಾಣದಿಂದ ಶಿವನ ಈಶಾನ ಮುಖಸಂಜಾತರೂ, ಸ್ಕಂದ ಗೋತ್ರಾಧಿಪತಿಗಳೂ, ವಿಶ್ವಕರ್ಣ ಶಾಖಾನುವರ್ತಿಗಳೂ ಆದ ಶ್ರೀ ಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರು ಪ್ರತಿಯೊಂದು ಯುಗದಲ್ಲೂ ಅವತರಿಸುತ್ತ ಬಂದಿದ್ದಾರೆ. ಇವರಿಗೆ ಕೃತಯುಗದಲ್ಲಿ ಪಂಚಾಕ್ಷರ ಶಿವಾಚಾರ್ಯ, ತ್ರೇತಾಯುಗದಲ್ಲಿ ಪಂಚವಕ್ತ್ರ ಶಿವಾಚಾರ್ಯ, ದ್ವಾಪರಯುಗದಲ್ಲಿ ವಿಶ್ವಕರ್ಣ ಶಿವಾಚಾರ್ಯ ಮತ್ತು ಕಲಿಯುಗದಲ್ಲಿ ವಿಶ್ವಾರಾಧ್ಯ ಶಿವಾಚಾರ್ಯ ಎಂಬ ಹೆಸರುಗಳು ಪ್ರಸಿದ್ಧವಾಗಿವೆ.

ಕಾಶೀ ಜ್ಞಾನಸಿಂಹಾಸನದ ದ್ವಾಪರಯುಗದ ಆಚಾರ್ಯರಾದ ಶ್ರೀ ಜಗದ್ಗುರು ವಿಶ್ವಕರ್ಣ ಶಿವಾಚಾರ್ಯ ಭಗವತ್ಪಾದರು ಸುಪ್ರಸಿದ್ಧನಾದ ಶ್ರೀ ದೂರ್ವಾಸ ಮಹರ್ಷಿಗೆ ವೀರಶೈವ ತತ್ತ್ವೋಪದೇಶವನ್ನು ಮಾಡಿದ್ದಾರೆ. ಶ್ರೀ ಜಗದ್ಗುರು ವಿಶ್ವಕರ್ಣ ಶಿವಾಚಾರ್ಯರು ಉಪದೇಶ ಮಾಡಿದ ಆ ಸ್ಥಾನವೇ ಇಂದು "ಜ್ಞಾನಪೀಠ" ಅರ್ಥಾತ್ "ಜಂಗಮವಾಡಿ ಮಠ" ಎಂಬಭಿಧಾನದಿಂದ ಕರೆಯಲ್ಪಡುತ್ತಿದೆ. ಸುಪ್ರಸಿದ್ಧವಾದ ಕಾಶೀಖಂಡದಲ್ಲಿ ಈ ಸ್ಥಾನವು "ಹರಿಕೇಶ ನಂದನವನ"ವೆಂದು ಕರೆಯಲ್ಪಟ್ಟಿದೆ. ಪ್ರಾಚೀನ ಕಾಲದಲ್ಲಿ ಅನೇಕ ಮಹರ್ಷಿಗಳು ಈ ಸ್ಥಾನದಲ್ಲಿ ತಪಸ್ಸನ್ನಾಚರಿಸಿ ಅಂತ್ಯಕಾಲದಲ್ಲಿ ತಮ್ಮ ಹೆಸರಿನ ಶಿವಲಿಂಗಗಳನ್ನು ಸಂಸ್ಥಾಪಿಸಿದ್ದಾರೆ. ಈ ಸ್ಥಾನದ ಮಹಿಮೆಯನ್ನರಿತ ಅನೇಕ ಯಾತ್ರಾರ್ಥಿಗಳು ತಮ್ಮ ತಮ್ಮ ಪೂರ್ವಜರ ಸ್ಮೃತಿಗಾಗಿ ಶಿವಲಿಂಗಗಳನ್ನು ಅನಾದಿಕಾಲದಿಂದ ಸಂಸ್ಥಾಪಿಸುತ್ತ ಬಂದಿದ್ದಾರೆ. ಇದರಿಂದ ದರ್ಶನಾರ್ಥಿಗಳಾಗಿ ಬಂದ ಭಕ್ತರಿಗೆ ಈ ಜಂಗಮವಾಡಿ ಮಠವು ಶಿವಲಿಂಗಮಯವಾಗಿ ಕಂಗೊಳಿಸುತ್ತಿದೆ.

ಈ ಜ್ಞಾನಪೀಠದ ಕಲಿಯುಗದ ಆಚಾರ್ಯರಾದ ಶ್ರೀ ಜಗದ್ಗುರು ವಿಶ್ವಾರಾಧ್ಯರು ಯುಗಾರಂಭದಲ್ಲಿ ಅವತರಿಸಿ ೧೧೦೦ ವರ್ಷ ಪರ್ಯಂತವಾಗಿ ಅನಂತ ಲೀಲೆಗಳನ್ನಾಚರಿಸಿ ಉತ್ತರ ಭಾರತದಲ್ಲೆಲ್ಲ ವೀರಶೈವ ತತ್ತ್ವಗಳನ್ನು ಉಪದೇಶಿಸಿ ಶ್ರೀ ಮಲ್ಲಿಕಾರ್ಜುನರೆಂಬ ಶಿಷ್ಯರಿಗೆ ಜ್ಞಾನಪೀಠಾಧಿಕಾರವನ್ನು ಕೊಟ್ಟು ತಾವು ಪುನಃ ಶ್ರೀ ವಿಶ್ವನಾಥ ಜ್ಯೋತಿರ್ಲಿಂಗದಲ್ಲಿಯೇ ಸಮರಸರಾದರು.

ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿಗಳು ಃ

ಶ್ರೀ ಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರ ತರುವಾಯ ಅಧಿಕಾರಕ್ಕೆ ಬಂದ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳು ಕ್ರಿ.ಶ. ಪೂರ್ವ ೨೦೪೦ರಲ್ಲಿ ಪೀಠಾಧಿಕಾರಿಗಳಾಗಿದ್ದರೆಂದು ಈ ಪೀಠದ ಜಗದ್ಗುರುಗಳ ವಂಶಾವಳಿಯಿಂದ ತಿಳಿದುಬರುತ್ತದೆ. ಇವರು ತಮ್ಮ ಶಿವಯೋಗ ಸಾಮರ್ಥ್ಯದಿಂದ ೩೧೧ ವರ್ಷಗಳವರೆಗೆ ಪೀಠಾಧ್ಯಕ್ಷರಾಗಿದ್ದು ಕೊನೆಗೆ ಸಜೀವ ಸಮಾಧಿಯನ್ನು ಹೊಂದಿದ ಕಾರಣ ಇವರಿಗೆ "ಗಾದೀ ಸ್ವಾಮಿ" ಎಂಬ ಹೆಸರು ಪ್ರಸಿದ್ಧವಾಯಿತು. ಇವರ ಈ ಸಜೀವ ಸಮಾಧಿಯೇ ಇಂದು ಶ್ರೀ ಜಂಗಮವಾಡಿ ಮಠದಲ್ಲಿ ಕರ್ತೃಗದ್ದುಗೆಯಾಗಿ ಪೂಜೆಗೊಳ್ಳುತ್ತಿದೆ.

ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳು ಅತ್ಯಂತ ಮಹಿಮಾಶಾಲಿಗಳಾದ್ದರಿಂದ ಈ ಪೀಠಕ್ಕೆ ಮುಂದೆ ಉತ್ತರಾಧಿಕಾರಿಗಳಾಗಿ ಬಂದ ಮಹಾಸ್ವಾಮಿಗಳಿಗೆಲ್ಲ ಅವರ ಹೆಸರನ್ನೇ ಇಡುವ ಪದ್ಧತಿಯು ಬೆಳೆದುಬಂದಿತು. ಅಂತೆಯೇ

ಇವರ ತರುವಾಯ ಈ ಪೀಠಕ್ಕೆ ಬಂದ ೭೭ ಜನ ಮಹಾಸ್ವಾಮಿಗಳ ಹೆಸರುಗಳು ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರೆಂದೇ ಈ ಪೀಠದ ಪರಂಪರಾಗತ ವಂಶಾವಳಿಯಲ್ಲಿ ಬರೆಯಲ್ಪಟ್ಟಿದೆ.

ಐತಿಹಾಸಿಕ ದಾಖಲೆಗಳು :

ಶ್ರೀ ಕಾಶೀ ಜಂಗಮವಾಡಿ ಮಠವು ಕೇವಲ ಪೌರಾಣಿಕ ದಾಖಲೆಗಳಿಂದ ಕೂಡಿದ್ದಲ್ಲ, ಆದರೆ ಅತಿ ಮಹತ್ವಪೂರ್ಣವಾದ ಐತಿಹಾಸಿಕ ಶಾಸನಗಳಿಂದಲೂ ಯುಕ್ತವಾಗಿದೆ. ಈ ಪೀಠದಲ್ಲಿ ಇರುವ ಅನೇಕ ದಾನಪತ್ರಗಳಲ್ಲಿ ಕಾಶೀ ಜಯನಂದದೇವನಿಂದ ಕೊಡಲ್ಪಟ್ಟ ದಾನಪತ್ರವೇ ಅತಿ ಪ್ರಾಚೀನವಾದದ್ದು.

ಈ ಪೀಠ ಪರಂಪರೆಯಲ್ಲಿ ೫೧ನೆಯ ಪೀಠಾಧಿಪತಿಗಳಾದ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳು (ಮಲ್ಲಿಕಾರ್ಜುನ ಜಂಗಮ) ಕ್ರಿ.ಶ. ೫೫೩ರಿಂದ ೬೭೪ರವರೆಗೆ ಅಂದರೆ ೧೨೧ ವರ್ಷ ಪೀಠಾಧ್ಯಕ್ಷರಾಗಿದ್ದರು. ಇವರ ಕಾಲದಲ್ಲಿಯೇ ಕಾಶಿಯ ರಾಜನಾಗಿದ್ದ ಶ್ರೀ ಜಯನಂದದೇವ ರಾಜನು ವಿಕ್ರಮನಾಮ ಸಂವತ್ಸರ ೬೩೧ (ಕ್ರಿ.ಶ. ೫೭೪)ರ ಪ್ರಬೋಧಿನೀ ಏಕಾದಶೀ (ಕಾರ್ತಿಕ ಶುದ್ಧ ಏಕಾದಶಿ) ದಿನದಂದು ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯ ಮಹಾಸ್ವಾಮಿಗಳಿಗೆ ಭೂದಾನವನ್ನು ಮಾಡಿ, ದಾನಶಾಸನವನ್ನು ಬರೆದು ಕೊಟ್ಟಿದ್ದಾನೆ. ಇಂದಿಗೆ ೧೪೩೩ ವರ್ಷದಷ್ಟು ಪ್ರಾಚೀನದ ಆ ದಾನಪತ್ರವು ಶ್ರೀ ಜಂಗಮವಾಡಿ ಮಠದಲ್ಲಿ ಇಂದಿಗೂ ಸುರಕ್ಷಿತವಾಗಿದೆ. ಪ್ರಾಚೀನ ಹಿಂದೀ ಭಾಷೆಯಲ್ಲಿಯ ಆ ದಾನಪತ್ರವು ಇಂತಿದೆ –

ಶ್ರೀ ಗಣೇಶಾಯ ನಮಃ

ಪಾಠ ಸಹೀ

ಶ್ರೀ ವಿಶ್ವೇಶ್ವರ

ಸ್ವಸ್ತಿ ಮಹಾರಾಜಾಧಿರಾಜ ಶ್ರೀ ಶ್ರೀ ಮಹಾರಾಜ ಜೈನಂದದೇವ ಕಾಶೀ ನರೇಶ ಆದೇಸಾತಿ ಶ್ರೀ ಶ್ರೀ ಶ್ರೀ ವಿಶ್ವಾರಾಧ್ಯ ಸಿಂಹಾಸನಕಂಹ ಗೋಸಾಯೀ ಮಲ್ಲಿಕಾರ್ಜುನ ಜಂಗಮಕಂಹ ಭೂಮಿದೀನ್ಹ ಕರ್ದಮೇಶ್ವರ ಮಹಾದೇವ ಗಂಗಾಜೀಕೇ ಮಧ್ಯ ಗೌಚಾರನವನ ಮಧ್ಯೇ ಶಿವಪ್ರೀತಿನೆ ದಿಶಿಕ ಪ್ರಮಾಣ ಪೂರ್ವ ಪಶ್ಚಿಮ ಪರಗ ೮೦೦ ಉತ್ತರ ದಕ್ಷಿಣ ಪರಗ ೮೦೦ ಏಹಿ ಭೂಮಿಮಹ ಜೇ ಕಿಛು ಉತ್ಪನ್ಯಹೋಪ ಏಸಭ ಗೋಸಾಯೀ ಮಲ್ಲಿಕಾರ್ಜುನ ಸಂಪ್ರದಾಯ ಸದಾ ಸರ್ವದಾ ಭೋಗಕರಹೀ ಏಹಿ ಭೂಮಿಪರಜೇ ಮಂದದೃಷ್ಟಿನೇ ದೇಖೇಗಾ ಸೋ ಧೋಖಾ ಉರಾವೇಗಾ.

ಸ್ವದತ್ತಾಂ ಪರದತ್ತಾಂ ವಾ ಯೋ ಹರೇತ್ ಪೃಥಿವೀಮಿಮಾಮ್।
ಷಷ್ಟಿವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕೃಮಿಃ ॥೧॥
ಆದಿತ್ಯಚಂದ್ರಾವನಿಲೋನಲಶ್ಚ ದ್ಯೌರ್ಭೂಮಿರಾಪೋ ಹೃದಯಂ ಯಮಶ್ಚ
ಅಹಶ್ಚ ರಾತ್ರಿಶ್ಚ ಉಭೇ ಚ ಸಂಧ್ಯೇ ಧರ್ಮಶ್ಚ ಜಾನಾತಿ ನರಸ್ಯವೃತ್ತಮ್॥೨॥
ದಾನಪಾಲನಯೋರ್ಮಧ್ಯೇ ದಾನಾಚ್ಛ್ರೇಯೋನುಪಾಲನಮ್ ।
ದಾನಾತ್ಸರ್ಗಮವಾಪ್ನೋತಿ ಪಾಲನಾದದ್ಭುತಂ ಪದಮ್ ॥೩॥
ಸ್ವದತ್ತಾದ್ದ್ವಿಗುಣಂ ಪುಣ್ಯಂ ಪರದತ್ತಾನುಪಾಲನಮ್ ।
ಪರದತ್ತಾಪಹಾರೇಣ ಸ್ವದತ್ತಂ ನಿಷ್ಫಲಂ ಭವೇತ್ ॥೪॥

ಮಿತೀ ಕಾರ್ತಿಕ ಸುದಿ ದೇವೋತ್ಥಾನ ಏಕಾದಶೀ ಸಂವತ್ ೬೩೧.......... ೬೩೧ ಮೆ ಜೈನಂದದೇವ ಕಾಶೀ ನರೇಶನೇ ಜೋ ಸನದ ದಿಯಾ ಥಾ ಉಸಕಾ ಅವಿಕಲ ಪ್ರತಿಲಿಪಿ ಹೈ ಯಹ ಹಮನೇ ದೇಖಲಿಯಾ ಉಸಕೇ ಪುರಾನಾ ಹೋನೇಕೇ ವಜಹಸೇ ಯಹ ತಾಮ್ರ ಪಟಪರ ಲಿಖಾಗಯಾ ಸಂವತ್ ೧೯೮೨ ಮಿಃ ಆಷಾಢಾ ಬದೀ ೮ ॥

ಪ್ರಭುನಾರಾಯಣಸಿಂಹಃ

ಕಾಶೀರಾಜಃ

ಈ ದಾನಶಾಸನದ ಭಾವವೇನೆಂದರೆ – "ಶಿವಾನುಗ್ರಹದ ಪ್ರಾಪ್ತಿಗಾಗಿ ವಿಶ್ವಾರಾಧ್ಯ ಸಿಂಹಾಸನದ ಮಲ್ಲಿಕಾರ್ಜುನ ಜಂಗಮ ಗೋಸಾಯಿ (ಶಿವಯೋಗಿ)ಯವರಿಗೆ ಕರ್ದಮೇಶ್ವರ ದೇವಸ್ಥಾನದಿಂದ ಗಂಗಾನದಿಯ ದಂಡೆಯವರೆಗೆ ಗೋವುಗಳು ಸಂಚರಿಸುವ ವಿಶಾಲವಾದ ಭೂಭಾಗವು ದಾನವಾಗಿ ಕೊಡಲ್ಪಟ್ಟಿದೆ. ಈ ಭೂಭಾಗದಲ್ಲಿ ಬೆಳೆಯುವ ಎಲ್ಲ ಬೆಳೆಯನ್ನು ಉಪಯೋಗಿಸುವ ಅಧಿಕಾರವು ಶ್ರೀ ಮಲ್ಲಿಕಾರ್ಜುನ ಜಂಗಮ ಸಂಪ್ರದಾಯದವರಿಗೇನೇ ಇರುತ್ತದೆ. ಯಾರಾದರೂ ಈ ಭೂಮಿಯನ್ನು ಆಕ್ರಮಿಸುವ ದುರ್ಬುದ್ಧಿಯುಳ್ಳವರಾದರೆ ಅವರು ಅವಶ್ಯವಾಗಿ ನಾಶವನ್ನು ಹೊಂದುತ್ತಾರೆ."

ಕಾಗದದ ಮೇಲೆ ಬರೆದ ಈ ಶಾಸನವು ಅತಿ ಜೀರ್ಣವಾಗಿದ್ದರಿಂದ ಅವರ ವಂಶೀಯನಾದ ಶ್ರೀ ಪ್ರಭುನಾರಾಯಣಸಿಂಹ ಕಾಶೀರಾಜನು ವಿಕ್ರಮ ಸಂವತ್ಸರದ ೧೯೮೨ (ಕ್ರಿಸ್ತಶಕ ೧೯೦೮) ಆಷಾಢ ಶುದ್ಧ ಅಷ್ಟಮಿ ದಿನದಂದು ಆ ಶಾಸನವನ್ನೇ ಪುನಃ ತಾಮ್ರಪಟದಲ್ಲಿ ಬರೆಯಿಸಿ ಹಸ್ತಾಕ್ಷರವನ್ನು ಮಾಡಿಕೊಟ್ಟಿದ್ದಾನೆ. ಇದನ್ನು ಶ್ರೀಪೀಠದಲ್ಲಿ ಸುರಕ್ಷಿತವಾಗಿ ಇಡಲಾಗಿದೆ.

ಕಾಶೀರಾಜರಿಂದ ಕೊಡಲ್ಪಟ್ಟ ಈ ಸ್ಥಾನದಲ್ಲಿಯೇ ೧೯೧೬ ರಂದು "ಕಾಶೀ ಹಿಂದೂ ವಿಶ್ವವಿದ್ಯಾಲಯ"ವು ಸ್ಥಾಪಿತವಾಗಿದೆ. ಈ ವಿಶ್ವವಿದ್ಯಾಲಯದ ಹಿಂಬದಿಯಲ್ಲಿ ಆ ಪ್ರಾಚೀನವಾದ 'ಜಂಗಮಪುರ' ಎಂಬ ಸಣ್ಣ ಹಳ್ಳಿಯು ಇಂದಿಗೂ ಇದೆ. ಈ ವಿಶ್ವವಿದ್ಯಾಲಯದ ಪರಿಸರದಲ್ಲಿ ಈ ಪೀಠದ ಪೂರ್ವ ಜಗದ್ಗುರುಗಳವರ ಒಂದೆರಡು ಸಮಾಧಿಗಳು ಇವೆ. ಅವುಗಳು ಇಂದಿಗೂ 'ಜಂಗಮಬಾಬಾ ಸಮಾಧಿ' ಎಂಬ ಹೆಸರಿನಿಂದ ಪೂಜೆಗೊಳ್ಳುತ್ತಿವೆ.

ಕ್ರಿಸ್ತಶಕ ೧೮೭೯ ರಂದು ಈ ಪೀಠಕ್ಕೆ ೮೦ನೆಯ ಪೀಠಾಧ್ಯಕ್ಷರಾದ ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ೧೨ ವರ್ಷ ಕಾಲ ಈ ಪೀಠದ ಉನ್ನತಿಗಾಗಿ ಬಹಳಷ್ಟು ಶ್ರಮಿಸಿದ್ದಾರೆ. ಇವರು ಆಂಧ್ರಪ್ರದೇಶದ 'ಬೋಧನಮಠ'ದ ಪಟ್ಟಾಧ್ಯಕ್ಷರಾಗಿದ್ದರು. ಪೀಠದ ಆರ್ಥಿಕ ಸ್ಥಿತಿಯನ್ನು ಭದ್ರಪಡಿಸುವದಕ್ಕಾಗಿ ಇವರು ಪೀಠದಲ್ಲಿಯೇ "ಶ್ರೀ ವಿಶ್ವಾರಾಧ್ಯ ಬ್ಯಾಂಕ್"ನ್ನು ಸ್ಥಾಪಿಸಿ, ಜನರಿಂದ ಹಣವನ್ನು ಠೇವಣಿಯಾಗಿ ಪಡೆದು, ಅವರ ಹಣವನ್ನು ಸಂರಕ್ಷಿಸುವುದರ ಜೊತೆಗೆ ಯೋಗ್ಯ ಬಡ್ಡಿಯನ್ನು ಕೊಡುತ್ತಿದ್ದರು. ಇವರ ಕಾಲದಲ್ಲಿ ಈ ಬ್ಯಾಂಕ್ ಬಹಳಷ್ಟು ಹೆಸರುವಾಸಿಯಾಗಿತ್ತು. ಶ್ರೀ ಪೂಜ್ಯ ಜಗದ್ಗುರುಗಳವರು ಕಾಶೀ ಕ್ಷೇತ್ರದಲ್ಲಿ ಸ್ಥಳೀಯ ಬಡಜನರಿಗೆ ಹಾಗೂ ಯಾತ್ರಾರ್ಥಿಗಳಾಗಿ ಬಂದ ಭಕ್ತರಿಗೆ ಉಚಿತವಾಗಿ ಪ್ರಸಾದದ ವ್ಯವಸ್ಥೆಯನ್ನು ಮಾಡುವುದರ ಜೊತೆಗೆ ವೇದಾಧ್ಯಯನಕ್ಕಾಗಿ ಬಂದ ವಿದ್ಯಾರ್ಥಿಗಳಿಗೆಲ್ಲ ಉಚಿತವಾದ ಭೋಜನ, ನಿವಾಸ ಹಾಗೂ ಮತ್ತಿತರ ಎಲ್ಲ ವ್ಯವಸ್ಥೆಯನ್ನೂ ಮಾಡುತ್ತಿದ್ದರು.

ಪೂಜ್ಯ ಜಗದ್ಗುರುಗಳು ದಿ. ೧೮.೦೮.೧೯೮೧ ರಂದು ತಮ್ಮ ೪೮ನೆಯ ವಯಸ್ಸಿನಲ್ಲಿ ಅಕಸ್ಮಾತ್ ಲಿಂಗೈಕ್ಯರಾದರು. ಇವರ ತರುವಾಯ ಮೃತ್ಯುಪತ್ರದ ಪ್ರಕಾರ ಇವರ ಶಿಷ್ಯಂದಿರಾದ ಶ್ರೀ ರಾಜೇಶ್ವರ ಮಹಾಸ್ವಾಮಿಗಳು ಈ ಪೀಠದ ೮೧ ನೆಯ ಜಗದ್ಗುರುಗಳಾಗಿ ಅಧಿಕಾರವನ್ನು ವಹಿಸಿಕೊಂಡರು. ಇವರು ಆಂಧ್ರಪ್ರದೇಶದ 'ರಾಜಮಹೇಂದ್ರ'ಭಾಗದ ಮಠಾಧೀಶರಾಗಿದ್ದು ಅಧ್ಯಯನಕ್ಕಾಗಿ ಕಾಶಿಗೆ ಬಂದಿದ್ದರು. ಇವರು ಪ್ರಶಾಂತಮೂರ್ತಿಗಳೂ, ಮಹಾತಪಸ್ವಿಗಳೂ, ಉದಾರ ಹೃದಯಿಗಳೂ ಆಗಿದ್ದರು. ಅಂದಿನ ಸಮಯದಲ್ಲಿ ಇವರ ತಪಸ್ಸು ಹಾಗೂ ಔದಾರ್ಯಕ್ಕೆ ಮನಸೋತ ಕಾಶೀವಾಸಿಗಳು ಇವರನ್ನು 'ಜಂಗಮರಾಜಾ' ಎಂದು ಕರೆಯುತ್ತಿದ್ದರು. ಕಾಶಿಯ ವಿದ್ವನ್ಮಂಡಲಿಯವರು ಇವರ ಆಜ್ಞಾಧಾರಕರಾಗಿದ್ದರು. ಅಂದಿನ ಕಾಲದಲ್ಲಿ ಸಾಕ್ಷಾತ್ ವಿಶ್ವನಾಥನ ಪ್ರತಿರೂಪರೆಂದು ಹೆಸರಾಗಿದ್ದ ಮಹಾಮಹೋಪಾಧ್ಯಾಯ ಶ್ರೀ ಶಿವಕುಮಾರಮಿಶ್ರ ಶಾಸ್ತ್ರಿಗಳವರು ಇವರ ಪ್ರೇರಣೆಯಿಂದ "ಲಿಂಗಧಾರಣ ಚಂದ್ರಿಕ" ಎಂಬ ಅತ್ಯಮೂಲ್ಯವಾದ ವೀರಶೈವ ಗ್ರಂಥಕ್ಕೆ ಶರನ್ನಾಮಿಕಾ ಸಂಸ್ಕೃತ ವ್ಯಾಖ್ಯಾನವನ್ನು ಬರೆದು ವೀರಶೈವ ಧರ್ಮದ ವೈದಿಕತ್ವವನ್ನು ಪ್ರಖ್ಯಾತಪಡಿಸಿದ್ದಾರೆ. ಈ ಗ್ರಂಥವು ಕ್ರಿಸ್ತಶಕ ೧೯೦೫ರಲ್ಲಿಯೇ ಪೀಠದಿಂದ ಪ್ರಕಾಶಿಸಲ್ಪಟ್ಟಿತು.

ಹೀಗೆ ಪಾಮರ ಪಂಡಿತರಿಗೆಲ್ಲ ಉದಾರ ಮನಸ್ಸಿನಿಂದ ಶ್ರೀ ಜಗದ್ಗುರು ರಾಜೇಶ್ವರ ಸ್ವಾಮಿಗಳು ಶ್ರೀ ವಿಶ್ವಾರಾಧ್ಯ ಬ್ಯಾಂಕಿನಲ್ಲಿಯ ಹಣವನ್ನೆಲ್ಲ ದಾನವಾಗಿ ಕೊಡುತ್ತಿದ್ದರು. ಅಲ್ಲದೇ ಮೈಸೂರಿಗೆ ದಯಮಾಡಿಸಿ ಮರಳಿ ಕಾಶಿಗೆ ಬರುವಾಗ ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ ಪ್ರಾಂತಗಳ ಸುಮಾರು ೨೦೦ ಜನ ಮಹೇಶ್ವರ ವಟುಗಳನ್ನು ಸಂಸ್ಕೃತಾಧ್ಯಯನಕ್ಕಾಗಿ ಕರೆದುಕೊಂಡು ಬಂದರು. ಈ ಎಲ್ಲ ವಿದ್ಯಾರ್ಥಿಗಳಿಗೆ ಮಠದಿಂದಲೇ ವಸತಿ, ಭೋಜನಾದಿಗಳ ವ್ಯವಸ್ಥೆಯನ್ನು ಮಾಡುತ್ತಿದ್ದರು. ಇದರಿಂದಾಗಿ ಬ್ಯಾಂಕಿನಲ್ಲಿಯ ಠೇವಣಿ ಹಣವೆಲ್ಲ ಧರ್ಮಕ್ಕಾಗಿ ಕರಗತೊಡಗಿತು. ೧೬ ವರ್ಷ ಪೀಠಾಧ್ಯಕ್ಷರಾಗಿದ್ದ ಇವರು ದಿ॥ ೩೧-೭-೧೯೦೭ರಂದು ಲಿಂಗೈಕ್ಯರಾದರು. ಇವರಿಗೆ ಆಗ ೮೦ ವರ್ಷ ವಯಸ್ಸಾಗಿತ್ತು.

ಶ್ರೀ ಜಗದ್ಗುರು ರಾಜೇಶ್ವರ ಮಹಾಸ್ವಾಮಿಗಳ ಮೃತ್ಯುಪತ್ರದ ಪ್ರಕಾರ ಇವರ ಪ್ರಿಯಶಿಷ್ಯರೂ, ನ್ಯಾಯಶಾಸ್ತ್ರ ಪಂಡಿತರೂ, ಮೊದಲಿನಿಂದಲೂ ಸಂಸ್ಥಾನದ ಯೋಗಕ್ಷೇಮದ ಹೊಣೆ ಹೊತ್ತು ಸೇವೆ ಸಲ್ಲಿಸುತ್ತಿರುವವರೂ ಆದ ಮಹಾರಾಷ್ಟ್ರದ ಶ್ರೀ ಶಿವಲಿಂಗ ಸ್ವಾಮಿಗಳು ಈ ಪೀಠದ ೮೨ನೆಯ ಜಗದ್ಗುರುಗಳಾಗಿ ಅಧಿಕಾರವನ್ನು ವಹಿಸಿಕೊಂಡರು. ಇವರು ೧೯೧೮ನೆಯ ಮಾರ್ಚ್ ೨೩ರಂದು ಕಾಶೀಪೀಠಕ್ಕೆ ಉಳಿದ ನಾಲ್ಕು ಪೀಠದ ಆಚಾರ್ಯರನ್ನೂ ಬರಮಾಡಿಕೊಂಡು ಪಂಚಾಚಾರ್ಯ ಸಮ್ಮೇಳನದ ಸ್ಮಾರಕವಾಗಿ ಜಂಗಮವಾಡಿಮಠದಲ್ಲಿಯೇ "ವಿಶ್ವಾರಾಧ್ಯ ಗುರುಕುಲ"ವನ್ನು ಸ್ಥಾಪಿಸಿ ಮಹತ್ವಪೂರ್ಣವಾದ ಕಾರ್ಯವನ್ನು ಮಾಡಿದರು.

ಜಗದ್ಗುರು ಶಿವಲಿಂಗ ಮಹಾಸ್ವಾಮಿಗಳು ೨೫ ವರ್ಷಗಳವರೆಗೆ ಪೀಠಾಧಿಪತಿಗಳಾಗಿದ್ದು, ಮಠದ ಎಲ್ಲ ವ್ಯವಹಾರಗಳನ್ನು ಜಾಗರೂಕವಾಗಿ ನೋಡಿಕೊಳ್ಳುತ್ತ ಬ್ಯಾಂಕಿನ ವ್ಯವಹಾರವನ್ನು ಸರಿಪಡಿಸಲು ಬಹಳಷ್ಟು ಶ್ರಮಿಸಿದರು. ಆದರೂ ಶ್ರೀ ಜಗದ್ಗುರು ರಾಜೇಶ್ವರ ಮಹಾಸ್ವಾಮಿಗಳು ತಮ್ಮ ಕಾಲದಲ್ಲಿ ಬಡವರಿಗೆ, ಪಂಡಿತರಿಗೆ ದಾನವಾಗಿ ಕೊಡಲ್ಪಟ್ಟ ಬ್ಯಾಂಕಿನ ಠೇವಣಿ ಹಣವನ್ನು ಕೂಡಿಸುವುದು ಕಷ್ಟಸಾಧ್ಯವಾಯಿತು. ಬ್ಯಾಂಕಿನ ಮೂಲಧನವು ಕರಗಿಹೋದ ವಿಷಯವು ಪ್ರಚಾರದಲ್ಲಿ ಬಾರದ್ದರಿಂದ ಬ್ಯಾಂಕಿನ ವ್ಯವಹಾರವು ಯಥಾವತ್ತಾಗಿಯೇ ಸಾಗಿತ್ತು. ಮುಂದೆ ಶಾ.ಶ. ೧೮೫೩ ಮಾಘಶುದ್ಧ ದ್ವಾದಶಿ ದಿ॥ ೧೯-೨-೧೯೩೨ರಂದು ತಮ್ಮ ಪ್ರೀತಿಯ ಶಿಷ್ಯರಾದ ಮಹಾರಾಷ್ಟ್ರದ ಸಾಂಗ್ಲಿ ಜಿಲ್ಲಾ ತಾಸಗಾಂವದ ಹಿರೇಮಠದ ಶ್ರೀ ಪಂಚಾಕ್ಷರ ಶಿವಾಚಾರ್ಯರನ್ನು ಶ್ರೀ ವಿಶ್ವಾರಾಧ್ಯ ಸಿಂಹಾಸನದ ೮೩ನೆಯ ಪೀಠಾಚಾರ್ಯರನ್ನಾಗಿ ಮಾಡಿ ಮುಂದೆ ಶಾ.ಶ. ೧೮೫೩ ಫಾಲ್ಗುಣ ಕೃಷ್ಣ ೩೦ ದಿ॥ ೫-೪-೧೯೩೨ ಮಂಗಳವಾರ ದಿವಸ ಲಿಂಗೈಕ್ಯರಾದರು.

ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ಪೀಠಾಧ್ಯಕ್ಷರಾದ ನಂತರ ಆಡಳಿತ ವರ್ಗದ ಅನವಧಾನದ ಮೂಲಕ ಶ್ರೀ ವಿಶ್ವಾರಾಧ್ಯ ಬ್ಯಾಂಕಿನ ಸ್ಥಿತಿಯು ಕೆಡುತ್ತ ಬಂದು ಸಂಪೂರ್ಣವಾಗಿ ದಿವಾಳಿ ತೆಗೆಯಿತು. ಆಗ ಬ್ಯಾಂಕಿನಲ್ಲಿ ಠೇವಣಿ ಮಾಡಿದ ಬಹಳಷ್ಟು ಜನರು ಈ ಮಠದ ಸ್ಥಾವರ ಹಾಗೂ ಜಂಗಮ ಆಸ್ತಿಯನ್ನು ಮಾರಾಟ ಮಾಡಿ ತಮ್ಮ ಠೇವಣಿ ಹಣವನ್ನು ವಾಪಾಸ್ ಕೊಡಿಸಬೇಕೆಂದು ಬನಾರಸ್ ಸಬ್‌ಜಡ್ಜ್ ಕೋರ್ಟಿನಲ್ಲಿ ದಾವೆ ಹೂಡಿದರು. ಆಗ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು - " ಶ್ರೀ ಜಂಗಮವಾಡಿ ಮಠವು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿದೆ. ಈ ಮಠಕ್ಕೆ ಹಿಂದೂ ಹಾಗೂ ಮುಸಲ್ಮಾನ ರಾಜಮಹಾರಾಜರು ಭೂದಾನ ಮಾಡಿ ಶಾಸನಗಳನ್ನು ಬರೆದುಕೊಟ್ಟಿರುತ್ತಾರೆ. ದಾನವಾಗಿ ಬಂದ ಸಂಪತ್ತನ್ನು ಮಾರಲು ಬರುವುದಿಲ್ಲ. ಆದರೆ ಮಠಕ್ಕೆ ಬಂದ ಆದಾಯದಲ್ಲಿ ಠೇವಣಿದಾರರ ಹಣವನ್ನು ವಾಪಾಸ್ ಮಾಡುತ್ತೇವೆ" ಎಂಬುದಾಗಿ ತಿಳಿಸಿ ಠೇವಣಿದಾರರಲ್ಲಿ ಕೆಲವರನ್ನು ಪ್ರತಿವಾದಿಗಳನ್ನಾಗಿ ಮಾಡಿ ೧೯೩೨ರಲ್ಲಿ ಬನಾರಸ್ ಕೋರ್ಟಿನಲ್ಲಿ ೧೨ನೆಯ ನಂಬರಿನ ದಾವೆಯನ್ನು ಮಾಡಿದರು. ಆ ದಾವೆಯ ಜೊತೆಗೆ ಮಠದಲ್ಲಿಯ ದಾನಪತ್ರಗಳನ್ನೆಲ್ಲ ಹಾಜರುಪಡಿಸಿದರು. ಇವುಗಳಲ್ಲಿ ಕಾಶೀ ಶ್ರೀ ಜಯನಂದದೇವನ (ಕ್ರಿ.ಶ. ೫೭೪) ಶಾಸನವೇ ಅತೀ ಪ್ರಾಚೀನವಾದುದು.

ಬನಾರಸ್ ಸಬ್‌ಜಡ್ಜ್ ಕೋರ್ಟಿನಲ್ಲಿ ಅಂದಿನ ಮೆ॥ ಬಾಬು ವಿಂಧ್ಯಾವಾಸಿ ಪ್ರಸಾದರವರು ಶ್ರೀ ಜಗದ್ಗುರು ಪೀಠದ ಪ್ರಾಚೀನ ದಾನಶಾಸನಗಳನ್ನೆಲ್ಲ ಕೂಲಂಕಷವಾಗಿ ವಿಚಾರಮಾಡಿ ಕಾಶೀಪೀಠದ ಪ್ರಾಶಸ್ತ್ಯವನ್ನು ಬಹು ಚೆನ್ನಾಗಿ ತೀರ್ಮಾನಿಸಿದ್ದಾರೆ.

ಕ್ರಿ.ಶ. ೫೭೪ರಲ್ಲಿ ಜಯನಂದದೇವನು ಕಾಶಿಯ ರಾಜನಾಗಿರಲಿಲ್ಲ. ಹೀಗಿರುವಾಗ ಈ ದಾನಪತ್ರವನ್ನು ಅವನು ಹೇಗೆ ಕೊಟ್ಟನು? ಎಂಬ ಪ್ರತಿವಾದಿಗಳ ಈ ವಾದವನ್ನು ಖಂಡಿಸುತ್ತ ಅವರು ಹೀಗೆ ನಿರ್ಣಯವನ್ನು ಕೊಟ್ಟಿರುತ್ತಾರೆ -

ಖಿಡಿಣಾಜ, ಘಿಣಠಡಿಥಿ,ಽಠತಿ ಣುಚಿಣ ಚಿಛಠಣಾಣ ಣುಜ ೫ಣು ಛಿಜಟಿಣಣಾಡಿಥಿ ಣುಜ ಏಚಿರಿಚಿ ಠಜಿ ಏಚಿಟಿಚಿಣಾರಿ ಽಚಿಜ ಠಛಿಣಚುಟಿಜಜ ಟಛಿಣಾಜಡಿಥಿ ಠತಜಡಿ ಃಜಟಿಚಿಡಿಛಿ, ಛಣಾಣ ಣುಜಡಿಜ ಽ ಟಿಠಣುಟಿರ ಣಠ,ಽಠತಿ ಣುಚಿಣ ಣುಜ ಏಚಿರಿಚಿ ಠಜಿ ಃಜಟಿಚಿಡಿಛಿ ತಿಛಿ ಜಜಠಿಡಿುತಜಜ ಠಜಿ ಚಿಟಟ ಘಿ ಠಿಠತಿಜಡಿ. ಘುಚಿಣ ಚಿಠಿಠಿಜಚಿಥಿ ಣಠ ಽಚಿತಜ ಽಚಿಠಿ- ಠಿಜಟಿಜಜ ತಿಛಿ ಣುಚಿಣ ಏಚಿರಿಚಿ ಠಜಿ ಏಚಿಟಿಚಿಣಾರಿ ಛಜಛಿಚಿಟಜ ಣುಜ, ಣಾದಜಡಿುಚಿಟಿ ಠಿಠತಿಜಡಿ, ಛಣಾಣ ಣುಜ ಏಚಿರಿಚಿ ಠಜಿ ಏಛಿು ಛಿಠಟಿಣುಟಿಣಾಜಜ ಣಾಟಿಜಜಡಿ ಘಟ. ಊಜ ಛಿಠಟಿಣುಟಿಣಾಛ ಣಾಠಿಣಠ ಣು ಜಚಿಥಿ.

ಖ್ನಿಜ ಜಜಜಿಜಟಿಜಚಿಟಿಣ ಛಿಂಟಿಣಜಟಿಣುಂಟ ಛಿ ಡಿಜಂಚಿಡಿಜ ಣು ಜಂಛಿಣ–ಟಜಟಿಣ ಣುಜಡಿಜಜಿಂಡಿಜ ಜಿಚಿಟ. ಖ ್ರಂಟಜ ಣುಚಿಣ ಇಥ.೧ ೃ ಚಿ ರಜಟಿಣುಟಿಜ ಜಂಛಿಣಟಜಟಿಣ ಚಿಟಿಜ ಇಥ. ೨ ೃ ್ಣ ಛಿಂಂಥಿ ಂಟ ಛಿಂಂಂಜಡಿ ಂಟಚಿಣಜ. ಖಿಡಿಣಜ ಚಿಛಂಣಣ ಣುಜ ಛಿಂಂಂಜಡಿ ಂಟಚಿಣಜ ಣುಜಂಡಿಥಿ, ಣುಜಡಿಜ ೃ ಣುಜ ಜತುಜಜಟಿಛಿಜ ಂಜಿ ಣುಜ ಂಟುಜಿಜಿ ಂಟಿಟಥಿ, ಛಣಣ ್ಣ ಣಚಿಟಿಘ ಣಟ–ಡಿಜಛಣಣಣಜಜ ಚಿಟಿಜ ಚಿಟಣುಂಣಾಝ ಣುಜ ಜಜಜಿಜಟಿಜಚಿಟಿಣ ್ಚಿಜ ಚಿಟಂಟಜ ಂಂಂಂಡಿಣಣಟುಣಥಿ ಣಂ ಂಡಿಂತಜ ಣುಚಿಣ ೃ ತಿಛಿ ಟಿಂಣ ರಜಟಿಣುಟಿಜ, ಥಿಜಣ ಜುಜ ಟಿಂಣ ಣಟಟಂಟ ಚಿಟಿಥಿ ಂಟಿಜ ಜಿಡಿಂಟ ಃಜಟಿಚಿಡಿಛಿ ಖಣಚಿಣಜ ಣಂ ಘಣಚಿಛಟು ್ಣ. ಖ್ನಿಜ ಂಡಿಘಣಟಂ–ಣುಂಟ ೃ ್ಟ ಜಿಚಿತಂಣಡಿ ಂಜಿ ರಜಟಿಣುಟಿಜಟಿಘ.

ಇದೂ ಅಲ್ಲದೆ ಪ್ರಾಚೀನ ಇತಿಹಾಸ ಗ್ರಂಥವಾದ ಶ್ರೀ ಗದಾಧರಭಟ್ಟ ವಿರಚಿತ "ವಿಜಯವಜ್ರ ವಿಲಾಸ" ಎಂಬ ಪುಸ್ತಕದಲ್ಲಿ ಶ್ರೀ ಜಯನಂದದೇವನು ದೇವತಾಸಮಾನನಾಗಿ ಕಾಶಿಯ ಜನರು ಅವನನ್ನು ಸಾಕ್ಷಾತ್ ದೇವರೆಂದೇ ತಿಳಿಯುತ್ತಿದ್ದರು. ಇವನ ತಂದೆಯ ಹೆಸರು ಅನಂತದೇವ. ಶ್ರೀ ಜಯನಂದದೇವನಿಗೆ ಗೋವಿಂದದೇವನೆಂಬ ಮಗನಿದ್ದನು. ಅವನು ಅತ್ಯಂತ ಶೂರನೂ, ವೀರನೂ ಆಗಿದ್ದನು. (೨/೫–೬) ಎನ್ನುವ ಪ್ರಮಾಣವನ್ನು ಉದಾಹರಿಸುತ್ತ "ವ್ಯೋಮಕೇಶ" ಎಂಬ ಹೆಸರಿನ ಅಲಹಾಬಾದಿನ ಪ್ರಸಿದ್ಧ ಲೇಖಕರೊಬ್ಬರು ಮುಂಬಾಯಿಯ ಭಾರತೀ ವಿದ್ಯಾಭವನದ ಹಿಂದೀ ಮಾಸಿಕವಾದ "ನವನೀತ" (ವರ್ಷ ೩೩, ಅಂಕ ೪, ಮೇ ೧೯೮೪, ಪುಟ ೧೦೬–೧೦೭) ಎಂಬ ಪತ್ರಿಕೆಯಲ್ಲಿ "ಜಂಗಮವಾಡಿ ಮಠ ಕಾಶೀ ಮೇ ಸುರಕ್ಷಿತ ಚೌದಹ ಸೌ ವರ್ಷ ಪುರಾನಾ ಶಾಸನಾದೇಶ" ಎಂಬ ಶೀರ್ಷಿಕೆಯ ಲೇಖನವನ್ನು ಬರೆದು, ಉಕ್ತ ಸಮಯದಲ್ಲಿ ಶ್ರೀ ಜಯನಂದದೇವನು ಕಾಶಿಯ ಮಾಂಡಲೀಕ ರಾಜನಾಗಿದ್ದದ್ದನ್ನು ಸಪ್ರಮಾಣವಾಗಿ ಸಿದ್ಧಪಡಿಸಿದ್ದಾರೆ. ಇದರಿಂದ ಶ್ರೀ ಕಾಶೀ ಜಂಗಮವಾಡಿಮಠವು ಕ್ರಿ.ಶ. ೬ನೆಯ ಶತಮಾನಕ್ಕಿಂತಲೂ ಅತಿ ಪ್ರಾಚೀನವಾದದ್ದೆಂದು ಐತಿಹಾಸಿಕ ದಾಖಲೆಯಿಂದ ಸಿದ್ಧವಾಗುತ್ತದೆ.

ಅದರಂತೆ ಕ್ರಿ.ಶ. ೧೫೩೦ರಿಂದ ೧೬೬೮ರ ವರೆಗೆ ಹುಮಾಯೂನ್, ಅಕ್ಬರ್, ಜಹಾಂಗೀರ್, ಷಾಜಹಾನ್, ಔರಂಗಜೇಬ ಮತ್ತು ಮಹಮದ್ ಷಾ ಬಾದಶಹರ ೧೭ (ಫರ್ಮಾನ್) ಭೂದಾನ ಪತ್ರಗಳಿವೆ. ಎಲ್ಲ ದಾನಪತ್ರಗಳಲ್ಲಿಯ ಭೂಮಿಯೂ ೩೦೦ರಿಂದ ೪೮೦ ಬೀಘಾ ಆಗುವುದು. ಒಂದು ಬೀಘಾ ಅಂದರೆ ೩ ಎಕರೆ ಆಗುತ್ತದೆ. ಇದರಿಂದ ಮೊಗಲ ಚಕ್ರವರ್ತಿಗಳಿಂದ ಶ್ರೀ ಜಂಗಮವಾಡಿಮಠಕ್ಕೆ ದೊರೆತ ಭೂಮಿಯು ೧೪೪೦ ಎಕರೆ ಆಗುತ್ತದೆ. ಇದರ ಪೈಕಿ ೪೫೦ ಎಕರೆ ಭೂಮಿಯು ಕಾಶಿಯಲ್ಲಿ ಮತ್ತು ಉಳಿದ ಭೂಮಿಗಳೆಲ್ಲ ಚುನಾರ (ಮಿರ್ಜಾಪುರ ಜಿಲ್ಲಾ) ಅಲಹಾಬಾದ್ ಹಾಗೂ ಗಯಾಗಳಲ್ಲಿ ಇದ್ದದ್ದು ತಿಳಿದುಬರುತ್ತದೆ.

ಅಂದಿನ ಕಾಲದಲ್ಲಿ ಮಿರ್ಜಾಪುರ ಜಿಲ್ಲೆಯ ಚುನಾರ, ಕಾಶೀ, ಅಲಹಾಬಾದ್ ಮತ್ತು ಗಯಾಗಳಲ್ಲಿ ಜಂಗಮ ಸನ್ಯಾಸಿಗಳು (ಶಿವಯೋಗಿಗಳು) ಬಹಳ ಸಂಖ್ಯೆಯಲ್ಲಿ ಇರುತ್ತಿದ್ದರು. ಅವರು ತ್ಯಾಗಿಗಳೂ, ತಪಸ್ವಿಗಳೂ ಆಗಿದ್ದರು. ಇವರೆಲ್ಲ ಶ್ರೀ ಜಂಗಮವಾಡಿ ಮಠದ ಜಗದ್ಗುರುಗಳ ಶಿಷ್ಯರಾಗಿದ್ದರು. ಇವರ ತಪಃಶಕ್ತಿಯಿಂದ ಪ್ರಭಾವಿತರಾದ ಮೊಗಲ ಬಾದಶಹರು ಈ ಜಂಗಮರ ಅನುಗ್ರಹವಿದ್ದರೆ ನಮ್ಮ ಶಾಸನವು ಅನೂಚಾನವಾಗಿ ಸಾಗುವುದೆಂಬ ಭಾವನೆಯುಳ್ಳವರಾಗಿ ಪ್ರತಿಯೊಬ್ಬರೂ ತಮ್ಮ ತಮ್ಮ ಕಾಲದಲ್ಲಿ ಹೊಸಹೊಸ ಫರ್ಮಾನ್‌ಗಳನ್ನು ಹೊರಡಿಸಿ, ಅವರಿಗೆ ತಮ್ಮ ಪೂರ್ವದ ಚಕ್ರವರ್ತಿಗಳು ಕೊಟ್ಟ ಭೂಮಿಯನ್ನು ಸ್ಥಿರಪಡಿಸಿದ್ದು ಸದ್ಯ ಮಠದಲ್ಲಿ ಉಪಲಬ್ಧವಿರುವ ಫರ್ಮಾನ್‌ಗಳಿಂದ ತಿಳಿದುಬರುತ್ತದೆ.

ಅದರಂತೆ ಶ್ರೀ ಜಂಗಮವಾಡಿಮಠದ ಅಂದಿನ ಪೀಠಾಧಿಪತಿಗಳೂ, ಮಹಾತಪಸ್ವಿಗಳೂ, ಶಿವಯೋಗಸಿದ್ಧರೂ ಆಗಿದ್ದರು. ಅವರು ಆಕಾಶಮಾರ್ಗವಾಗಿ ನೇಪಾಳ, ಅಲಹಾಬಾದ್ ಮತ್ತು ಗಯಾ ಮುಂತಾದ ಸ್ಥಳಗಳಲ್ಲಿರುವ ತಮ್ಮ ಶಾಖಾಮಠಗಳಿಗೆ ಹೋಗಿಬರುತ್ತಿದ್ದರೆಂಬ ವಿಷಯವು ಬನಾರಸ್ ಗೆಜೆಟಿಯರಿನ ೧೨೩ನೆಯ ಪುಟದಲ್ಲಿದೆ.

"ಖ್ನಿಜ ಒಚುಚಿಟಿಣ ಚಿಡಿಜ ಛಿಡಿಜಜುಣಜಜ ತಿಣು ಂಂತಿಜಡಿ ಂಜಿ ಂಜಡಿಜಿಂಡಿಟುಟಿಂ ಟುಡಿಚಿಛಿಟಘ ಚಿಟಿಜ ್ಣ ತಿಛಿ ಣುಡಿಂಣಾಝ ಣುಜ ಝಂಟಚಿಥಿ ಂಜಿ ಣು ಂಂತಿಜಡಿ ್ಟ ಣುಜ ್ಚಿಂಜ ಂಜಿ ಚಿ ರಿಂಣಡಿಟಿಜಥಿ ಣುಡಿಂಣಾಝ ಣುಜ ಚಿಡಿ ಣಂ ಓಜಂಚಿಟ ಚಿಟಿಜ ಜಟಜತ್ಣುಜಡಿಜ ಛಜಜಿಂಡಿಜ ೦ಣಡಿಚಿಟಿಂಚಿದಜಛ ಣುಚಿಣ ಟಚಿಣು ಛಣುಟಜುಟಿಂ ತಿಛಿ ಂಡಿಘಜಡಿತಜಜ."

ಅದರಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿದೆ. "ಮೊಗಲರಲ್ಲಿ ಅತ್ಯಂತ ಕ್ರೂರನೂ, ಹಿಂದೂ ದ್ವೇಷಿಯೂ ಆದ ಔರಂಗಜೇಬನು ಕಾಶಿಯ ವಿಶ್ವನಾಥ ಮಂದಿರವನ್ನು ಧ್ವಂಸಮಾಡಿ ಇಲ್ಲಿಯ ಜಂಗಮವಾಡಿಮಠಕ್ಕೆ ಬಂದಾಗ, ಮಹಾದ್ವಾರದಲ್ಲಿಯೇ ವಿಶಾಲ ಶರೀರದ, ಕಪ್ಪು ಛಾಯೆಯ, ಕೆಂಪು ನೇತ್ರವುಳ್ಳ ಉಗ್ರವಾದ ಮೂರ್ತಿಯು ಅವನನ್ನು ತಡೆಯಿತಲ್ಲದೇ, ಅವನನ್ನು ನುಂಗಲು ಹೋಯಿತು. ಆಗ ಭಯಗ್ರಸ್ತನಾದ ಔರಂಗಜೇಬನು ಶರಣಾಗತನಾಗಿ ಮಠಕ್ಕೆ ಭೂದಾನವನ್ನು ಮಾಡಿ ಶಾಸನವನ್ನು ಬರೆದುಕೊಟ್ಟಿದ್ದಾನೆ". ಆ ಶಾಸನದಲ್ಲಿ ತನಗಾದ ಅನುಭವವನ್ನೆಲ್ಲ ಬರೆಯಿಸಿ ತಾನು ಹಸ್ತಾಕ್ಷರ ಮಾಡಿಕೊಟ್ಟಿದ್ದಾನೆ. ಈ ಶಾಸನವೂ ಮಠದಲ್ಲಿ ಇದೆ.

ಮೊಗಲ ಚಕ್ರವರ್ತಿಗಳ ಎಲ್ಲ ದಾನಪತ್ರಗಳೂ ಶ್ರೀ ವಿಶ್ವಾರಾಧ್ಯ ಸಿಂಹಾಸನದ ೭೧ರಿಂದ ೭೭ನೆಯ ಪೀಠಾಧ್ಯಕ್ಷರ ಸಮಕ್ಷಮದಲ್ಲಿ ಕೊಡಲ್ಪಟ್ಟಿವೆ. ಈ ಎಲ್ಲ ದಾನಪತ್ರಗಳೂ ಬನಾರಸ್ ಜಿಲ್ಲಾ ಕೋರ್ಟಿನಿಂದ ಅಲಹಾಬಾದಿನ ಹೈಕೋರ್ಟಿನವರೆಗೆ ೧೯೩೨ರಲ್ಲಿ ಪರೀಕ್ಷಿಸಲ್ಪಟ್ಟು ಅಧಿಕೃತವಾದವುಗಳೆಂದು ಸಿದ್ಧಮಾಡಲ್ಪಟ್ಟಿವೆ.

ನೇಪಾಳ ದೇಶದ ಭಕ್ತಪುರ (ಭಾತಗಾಂವ)ದಲ್ಲಿಯೂ ಈ ಪೀಠದ ಒಂದು ಶಾಖಾಮಠವಿದೆ. ಅಲ್ಲಿಯೂ ಜಂಗಮಮಠವೆಂದೇ ಕರೆಯುತ್ತಾರೆ. ಈ ಮಠಕ್ಕೆ ವಿಕ್ರಮ ಸಂವತ್ಸರ ೬೯೨ (ಕ್ರಿ.ಶ. ೬೧೮) ಜ್ಯೇಷ್ಠ ಶುದ್ಧ ಅಷ್ಟಮಿಯಂದು ನೇಪಾಳದ ರಾಜನಾದ ಶ್ರೀ ವಿಶ್ವಮಲ್ಲನು ಈ ಪೀಠದ ೫೧ನೆಯ ಪೀಠಾಧಿಪತಿಗಳಾದ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಯತಿವರ್ಯರಿಗೆ ಭೂದಾನವನ್ನು ಮಾಡಿದ್ದಾನೆ. ಕಲ್ಲಿನಲ್ಲಿ ಕೆತ್ತಿಸಿದ ಆ ದಾನಶಾಸನವು ನೇಪಾಳದ ಮಠದಲ್ಲಿ ಇಂದಿಗೂ ಇದೆ. ಸದ್ಯ ಆ ಮಠದಲ್ಲಿ ಗೃಹಸ್ಥಾಶ್ರಮಿಗಳಾದ ಜಂಗಮರು ವಾಸಮಾಡುತ್ತಿದ್ದಾರೆ. ಅವರೆಲ್ಲರ ಮನೆತನದ ಹೆಸರು ಜಂಗಮವೆಂದೇ ಇದೆ. ಗೋವಿಂದಹರಿ ಜಂಗಮರ ಮಕ್ಕಳಾದ ಭರತಮಣಿ ಜಂಗಮ, ಪುಷ್ಕರಮಣಿ ಜಂಗಮ ಮುಂತಾದವರು ಸದ್ಯ ಅಲ್ಲಿ ವಾಸಿಸುತ್ತಿದ್ದಾರೆ. ಅವರು ಆಗಾಗ್ಗೆ ಕಾಶಿಗೆ ಬಂದು ದೀಕ್ಷಾ, ಲಿಂಗಧಾರಣಾದಿ ಧಾರ್ಮಿಕ

ಕ್ರಿಯೆಗಳನ್ನು ಹೊಂದಿ ಹೋಗುತ್ತಿರುತ್ತಾರೆ.

ಅದರಂತೆ ಗಯಾ ಕ್ಷೇತ್ರದ ಶಿಸೋರಿಯಾ ಮೊಹಲ್ಲಾ (ಓಣಿ)ದಲ್ಲಿಯ ಜಂಗಮವಾಡಿ ಮಠವು ೧೯೩೨ರ ವರೆಗೂ ಈ ಪೀಠದ ಅಧೀನದಲ್ಲಿಯೇ ಇತ್ತು. ಆದರೆ ನಮ್ಮವರು ಅಲ್ಲಿ ಯಾರೂ ವಾಸಮಾಡದ ಕಾರಣ ಅನ್ಯರ ಸ್ವಾಧೀನವಾಗಿದೆ. ಆದರೆ ಅಲಹಾಬಾದಿನ ದಾರಾಗಂಜ್ ಮೊಹಲ್ಲಾದಲ್ಲಿಯ ಜಂಗಮವಾಡಿಮಠವು ಇಂದಿನವರೆಗೂ ಕಾಶೀ ಜಂಗಮವಾಡಿಮಠದ ಸ್ವಾಧೀನದಲ್ಲಿಯೇ ಇರುತ್ತದೆ. ಯಾತ್ರಿಕರಿಗೆ ಇಳಿದುಕೊಳ್ಳುವ ಉತ್ತಮ ವ್ಯವಸ್ಥೆ ಇದೆ. ಅಲ್ಲಿಯ ಪೂಜಾದಿಗಳಿಗಾಗಿ ಒಬ್ಬ ಜಂಗಮರನ್ನು ನೇಮಿಸಲಾಗಿದೆ.

ಕಾಶೀ ಜಂಗಮವಾಡಿಮಠದ ಭವ್ಯ ಪರಂಪರೆಯಲ್ಲಿ ಇಲ್ಲಿಯವರೆಗೆ ೮೪ ಜನ ಪೀಠಾಚಾರ್ಯರು ಆಗಿಹೋಗಿದ್ದಾರೆ. ಈ ಪೀಠದ ೭೯ನೆಯ ಜಗದ್ಗುರುಗಳಾದ ಹರೀಶ್ವರ ಶಿವಾಚಾರ್ಯ (ಸಿದ್ಧಲಿಂಗ) ಸ್ವಾಮಿಗಳು ಕ್ರಿ.ಶ. ೧೮೨೫ರಿಂದ ೧೮೭೯ರ ವರೆಗೆ ಅಂದರೆ ೫೪ ವರ್ಷ ಪೀಠಾಧಿಪತಿಗಳಾಗಿದ್ದರು.

ಮೈಸೂರಿನ ಮಹಾರಾಜರಾದ ಶ್ರೀ ಕೃಷ್ಣರಾಜ ಒಡೆಯರ್ ಶ್ರೀ ಜಗದ್ಗುರು ಹರೀಶ್ವರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಬರಮಾಡಿಕೊಂಡು "ಪ್ರತಿದಿವಸ ಕಾಶಿಯಲ್ಲಿ ೧೨ ಜನ ಮಾಹೇಶ್ವರರಿಗೆ ಪ್ರಸಾದ ವ್ಯವಸ್ಥೆಯನ್ನು ನಿರಂತರ ಮಾಡಬೇಕು" ಎಂದು ನಿವೇದಿಸಿಕೊಂಡು, ಪ್ರತಿವರ್ಷ ೬೦೦ (ಆರುನೂರು) ರೂಪಾಯಿಗಳನ್ನು ತಮ್ಮ ವರ್ಧಂತಿಯ ದಿವಸ ಹುಂಡೀ ಮುಖಾಂತರವಾಗಿ ಕಳಿಸುವುದಾಗಿ ದಿ॥ ೧೦-೭-೧೮೪೬ರಂದು ಒಂದು ತಾಮ್ರಪತ್ರವನ್ನು ಬರೆದುಕೊಟ್ಟಿದ್ದಾರೆ. ಈ ದಾನದ ಪ್ರಕಾರ ಸಂಸ್ಥಾನಗಳ ವಿಲೀನೀಕರಣವಾಗುವವರೆಗೆ ಈ ವರ್ಷಾಶನವು ಜಂಗಮವಾಡಿಮಠಕ್ಕೆ ಬರುತ್ತಿತ್ತು.

ಈ ಪೀಠ ಪರಂಪರೆಯಲ್ಲಿ ಆಗಿಹೋದ ಎಲ್ಲ ಮಹಾಸ್ವಾಮಿಗಳು ತಪಸ್ವಿಗಳೂ, ಶಿವಯೋಗಸಿದ್ಧರೂ ಆಗಿದ್ದರಲ್ಲದೇ ಮಹಾವಿದ್ವಾಂಸರೂ ಆಗಿದ್ದರು. ಇವರಲ್ಲಿ ಈ ಪೀಠದ ೮೪ನೆಯ ಪೀಠಾಧಿಪತಿಗಳಾಗಿದ್ದ ಶ್ರೀ ಜಗದ್ಗುರು ಮಲ್ಲಿಕಾರ್ಜುನ ಮಹಾಸ್ವಾಮಿ(ಶ್ರೀ ಜಗದ್ಗುರು ವೀರಭದ್ರ)ಗಳವರ ವಿದ್ವತ್ತು ಆಧುನಿಕ ವಿದ್ವಾಂಸರನ್ನು ಮಂತ್ರಮುಗ್ಧಗೊಳಿಸುವಂತಹುದು.

ಜನನ ಮತ್ತು ಬಾಲ್ಯ :

ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳವರು ಶ್ರೀ ಜಗದ್ಗುರು ರೇಣುಕಾಚಾರ್ಯರ ಅವತಾರ ಸ್ಥಾನವಾದ ಆಂಧ್ರಪ್ರದೇಶದ ಕೊಲನುಪಾಕ ಕ್ಷೇತ್ರ ಸಮೀಪದಲ್ಲಿರುವ ನಲಗೊಂಡ (ಜಿಲ್ಲಾ)ದ ವೀರಗೋತ್ರೀಯ ಚಿದಿರೆಮಠದ ಶ್ರೀ ವೇ॥ ನಾಗಭೂಷಣ ಶಾಸ್ತ್ರಿಗಳು ಹಾಗೂ ಅವರ ಧರ್ಮಪತ್ನಿ ಸೌ॥ ಶ್ಯಾಮಲಾಂಬ ಎಂಬ ದಂಪತಿಗಳ ಪವಿತ್ರಗರ್ಭದಲ್ಲಿ ಜನಿಸಿದರು. ಇವರ ತಂದೆಯವರಾದ ಶ್ರೀ ವೇ॥ಪಂ॥ ನಾಗಭೂಷಣ ಶಾಸ್ತ್ರಿಗಳು ವೈದಿಕ, ಜ್ಯೋತಿಷ್ಯ, ಆಯುರ್ವೇದ, ಮಂತ್ರಶಾಸ್ತ್ರ ಮುಂತಾದ ಶಾಸ್ತ್ರವಿದ್ಯೆಗಳಲ್ಲಿ ಪರಿಣತರಾಗಿದ್ದರು.

ಈ ಚಿದಿರೆಮಠದ ಶ್ರೀ ವೇ॥ ಶಿವಲೆಂಕಯ್ಯ, ಶ್ರೀ ವೇ॥ ಪ್ರಾಣಲಿಂಗಯ್ಯ, ಶ್ರೀ ವೇ॥ ಗಂಗಾಧರಯ್ಯ ಮುಂತಾದ ವ್ಯಕ್ತಿಗಳು ಮಹಾವಿಭೂತಿಗಳಾಗಿ ಹೋಗಿದ್ದಾರೆ. ಇಂತಹ ಪ್ರಾಚೀನ ಪಂಡಿತ ಪರಂಪರೆಯನ್ನು ಹೊಂದಿದ ಚಿದಿರೆ ಮಠದ ಶ್ರೀ ವೇ॥ಪಂ॥ ನಾಗಭೂಷಣ ಶಾಸ್ತ್ರಿಗಳವರಿಗೆ ೪೫ನೆಯ ವಯಸ್ಸಿನಲ್ಲಿ ಪುತ್ರರತ್ನನ ಜನನವಾಯಿತು. ಈ ಶಿಶುವಿಗೆ ವೀರಭದ್ರಯ್ಯನೆಂಬ ನಾಮಕರಣವನ್ನು ಮಾಡಿದರು.

ಚಿ॥ ವೀರಭದ್ರಯ್ಯ ಅಥವಾ ವೀರಭದ್ರ ಶರ್ಮ ಇವರು ಪ್ರಾಥಮಿಕ ಶಿಕ್ಷಣವನ್ನು ಸ್ವಂತ ಗ್ರಾಮವಾದ ನಲಗೊಂಡಾದಲ್ಲಿಯೇ ಪ್ರಾರಂಭಿಸಿ ತಮ್ಮ ೧೩ನೆಯ ವಯಸ್ಸಿನ ಸಮಯಕ್ಕೆ ತೆಲುಗು ೯ನೆಯ ಇಯತ್ತೆಯವರೆಗೆ ಅಭ್ಯಾಸ ಮಾಡಿದರು. ಆಗ ಇವರ ತಂದೆತಾಯಿಗಳ ದೇಹಾಂತವಾಗಿ ಬಹಳ ಕಠಿಣ ಪ್ರಸಂಗವು ಬಂದೊದಗಿದ ಕಾರಣ ಜೀವನೋಪಾಯಕ್ಕಾಗಿ ಅನಿವಾರ್ಯವಾಗಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಒಂದು ವರ್ಷ ಸೇವೆ ಸಲ್ಲಿಸಿದರು.

ವಿದ್ಯಾದಾಹ :

ಮುಂದೆ ವಿದ್ಯಾನಿಧಿಯಾಗಬಹುದಾದ ಇವರಿಗೆ ಈ ಅಲ್ಪಶಿಕ್ಷಣದಿಂದ ವಿದ್ಯಾದಾಹ ನೀಗಲಿಲ್ಲ. ಅಂತೆಯೇ ಇವರು ಹೈದರಾಬಾದಿಗೆ ಹೋಗಿ ಅಲ್ಲಿ ಸಂಸ್ಕೃತದ ಪ್ರಾಥಮಿಕ ಅಧ್ಯಯನದ ಜೊತೆಗೆ ಉರ್ದು ಭಾಷೆಯನ್ನು ಸಹ ಅಭ್ಯಾಸ ಮಾಡಿದರು. ಹೈದರಾಬಾದಿನಲ್ಲಿ ಒಂದು ವರ್ಷ ಅಧ್ಯಯನ ಮಾಡಿದ ನಂತರ ಹೆಚ್ಚಿನ ಸಂಸ್ಕೃತ ವ್ಯಾಸಂಗಕ್ಕಾಗಿ ನೀರಡಗುಂಭ ಮತ್ತು ರಾಮಗಡ್ಡೆಯ ಶ್ರೀ ಸಿದ್ಧಲಿಂಗ ಮಹಾರಾಜ ಸಂಸ್ಕೃತ ಪಾಠಶಾಲೆಗೆ ಸೇರಿದರು. ಅಷ್ಟರ ತನಕವೂ ಇವರಿಗೆ ಕನ್ನಡ ಅಕ್ಷರಗಳ ಜ್ಞಾನವೂ ಇರಲಿಲ್ಲ. ಆದರೆ ಆರು ತಿಂಗಳಲ್ಲಿ ಕನ್ನಡವನ್ನು ಚೆನ್ನಾಗಿ ಅಭ್ಯಾಸ ಮಾಡಿ ಸಂಸ್ಕೃತದ ಜೊತೆಗೆ ಕನ್ನಡ ಭಾಷೆಯನ್ನು ಸಹ ಕರಗತ ಮಾಡಿಕೊಂಡರು. ಇನ್ನೂ ಹೆಚ್ಚಿನ ವ್ಯಾಸಂಗ ಮಾಡುವ ಉದ್ದೇಶದಿಂದ ಶ್ರೀ ವೀರಭದ್ರ ಶರ್ಮಾಜಿಯವರು ನಾರಾಯಣಪೇಟೆಯ ಸಂಸ್ಕೃತ ಪಾಠಶಾಲೆಗೆ ತೆರಳಿದರು. ಅಲ್ಲಿ ಇವರು ೩ ವರ್ಷ ಸತತ ಪರಿಶ್ರಮವನ್ನು ಮಾಡಿ ಪಂಚಕಾವ್ಯ ಲಘು ಕೌಮುದೀ, ಸಂಸ್ಕೃತ ನಾಟಕ, ಪಂಚಾಂಗ, ಗಣಿತ, ಪೌರೋಹಿತ್ಯ ಮುಂತಾದ ವಿಷಯಗಳಲ್ಲಿ ಪ್ರಖರ ಪಾಂಡಿತ್ಯವನ್ನು ಸಂಪಾದಿಸಿದರು.

ಪ್ರಥಮ ಸಾರ್ವಜನಿಕ ಭಾಷಣ :

ಗುರುಮಠಕಲ್ಲದ ಶ್ರೀ ಶಾಂತವೀರ ಸ್ವಾಮಿಗಳ ಪ್ರಯತ್ನದಿಂದ ಇಟಗಿಯಲ್ಲಿ ನಿಜಾಮ್ ಪ್ರಾಂತದ ವೀರಶೈವ ಮಹಾಸಭೆಯು ನೆರವೇರಿತು. ಈ ಸಭೆಯ ಅಧ್ಯಕ್ಷತೆಯನ್ನು ಹೈದರಾಬಾದ್ ಹೈಕೋರ್ಟ್ ವಕೀಲರಾದ ಶ್ರೀಮಾನ್ ಬಾಪೂರಾವ್ ದೇಶಮುಖ್ ಇವರು ವಹಿಸಿದ್ದರು. ಈ ಸಭೆಯಲ್ಲಿ ಶ್ರೀ ವೀರಭದ್ರ ಶರ್ಮರು ತಮ್ಮ ಅಸ್ಖಲಿತವಾದ ವಿದ್ವತ್‌ಪೂರ್ಣ ಭಾಷಣದಿಂದ ಸಭಿಕರನ್ನೆಲ್ಲ ಸಂತುಷ್ಟಗೊಳಿಸಿದರಲ್ಲದೇ ವಿದ್ವಾಂಸರ ಪ್ರಶಂಸೆಗೆ ಪಾತ್ರರಾದರು. ಆ ಸಭೆಯಲ್ಲಿ ಇವರನ್ನು ಪ್ರಶಂಸಿಸಿದವರಲ್ಲಿ ಶ್ರೀ ಹರ್ಡೇಕರ್ ಮಂಜಪ್ಪನವರು ಹಾಗೂ ಧಾರವಾಡ ಮುರುಘಾಮಠದ ಶ್ರೀ ಮ.ನಿ.ಪ್ರ. ಮೃತ್ಯುಂಜಯ ಸ್ವಾಮಿಗಳೂ ಇದ್ದರು. ಅಂದಿನ ಸಭೆಯಲ್ಲಿ ಪುರಸ್ಕಾರ ರೂಪವಾಗಿ ಜನರು ಇವರಿಗೆ ೮೦ ರೂಪಾಯಿಗಳನ್ನು ಅರ್ಪಿಸಿದ್ದರು.

ಸಭಾಧ್ಯಕ್ಷರಾದ ಶ್ರೀ ಬಾಪೂರಾವ್ ದೇಶಮುಖ್ ವಕೀಲ ಸಾಹೇಬ್ ಇವರ ಪಾಂಡಿತ್ಯದಿಂದ ಪ್ರಭಾವಿತರಾಗಿ "ಶ್ರೀ ವೀರಭದ್ರ ಶರ್ಮಾಜಿಯವರು ಹೆಚ್ಚಿನ ವ್ಯಾಸಂಗಕ್ಕಾಗಿ ಕಾಶೀ ಅಥವಾ ಮತ್ತಿತರ ಯಾವುದೇ ಸ್ಥಳಕ್ಕೆ ಹೋಗಬಯಸಿದರೆ ಅವರು ಎಲ್ಲಿಯವರೆಗೆ ಅಧ್ಯಯನ ಮಾಡುವರೋ ಅಲ್ಲಿಯವರೆಗೆ ಅವರ ಸಂಪೂರ್ಣ ಖರ್ಚಿನ ಹೊಣೆಯನ್ನು ನಾನು ಹೊತ್ತುಕೊಳ್ಳುತ್ತೇನೆ" ಎಂಬುದಾಗಿ ಸಭೆಯಲ್ಲಿ ಪ್ರಸ್ತುತಪಡಿಸಿದರು.

ಕಾಶೀಕ್ಷೇತ್ರಕ್ಕೆ ಆಗಮನ :

ಶ್ರೀ ಬಾಪೂರಾವ್ ದೇಶಮುಖರ ಉದಾರಾಶ್ರಯ ದೊರೆತಾಗ ಶ್ರೀ ವೀರಭದ್ರ ಶರ್ಮಾಜಿಯವರ ಹೃದಯ ಕುಸುಮವು ಅರಳಿ ಉತ್ಸಾಹಭರಿತವಾಯಿತು. ಅದೇ ಸಮಯದಲ್ಲಿ ಪರಳಿ ವೈದ್ಯನಾಥ ಕ್ಷೇತ್ರದಲ್ಲಿ ವೀರಶೈವರಿಗೆ ವೇದಾಧಿಕಾರ ಉಂಟೋ ಇಲ್ಲವೋ ಎಂಬ ವಿಷಯದಲ್ಲಿ ಮಹಾನ್ ಕೋಲಾಹಲವೇ ಪ್ರಾರಂಭವಾಗಿತ್ತು. ಶ್ರೀ ಶರ್ಮಾಜಿಯವರು ಆ ಪ್ರಸಂಗದಲ್ಲಿ ಅಲ್ಲಿಗೆ ಹೋಗಿ ವೇದಾಧ್ಯಯನ ಮಹತ್ವವನ್ನರಿತು ವೇದಾಧ್ಯಯನಕ್ಕಾಗಿ ವಿದ್ಯಾಕೇಂದ್ರವಾದ ಕಾಶೀಕ್ಷೇತ್ರಕ್ಕೆ ಬಂದು ಇಲ್ಲಿಯ ಜ್ಞಾನಪೀಠದ ಆಶ್ರಯದಲ್ಲಿದ್ದು ವೇದಾಧ್ಯಯನವನ್ನು ಪ್ರಾರಂಭಿಸಿದರು. ಮೂರು ವರ್ಷದ ಸತತ ಪರಿಶ್ರಮದ ಪರಿಣಾಮವಾಗಿ ಕಲ್ಕತ್ತಾದ ಬಂಗಾಲ ಸಂಸ್ಕೃತ ಅಸೋಸಿಯೇಶನ್‌ನ "ವೇದತೀರ್ಥ" ಪರೀಕ್ಷೆಯನ್ನು ೧೯೩೦ರಲ್ಲಿ ೮೦% ಅಂಕಗಳನ್ನು ಪಡೆದು ಕಾಲೇಜಿಗೇ ಪ್ರಥಮ ರ್‍ಯಾಂಕನ್ನು ಪಡೆದರು. ಈ ವೇದತೀರ್ಥ ಪರೀಕ್ಷೆಯಲ್ಲಿ ಪಾಸಾದೊಡನೆ ಶ್ರೀಗಳು ಪರಳಿ ಕ್ಷೇತ್ರಕ್ಕೆ ಬಂದು ತಾವೇ ಸ್ವತಃ ವೈದ್ಯನಾಥನಿಗೆ ಮಹಾ ರುದ್ರಾಭಿಷೇಕವನ್ನು ಮಾಡಿ ವೀರಶೈವ ವೇದಾಧಿಕಾರವನ್ನು ಸ್ಥಿರಗೊಳಿಸಿದರು.

ಭಾರತದ ಸಂಸ್ಕೃತಿಯು ಅತ್ಯಂತ ಪ್ರಾಚೀನವಾದದ್ದಲ್ಲದೇ ಲೋಕಕಲ್ಯಾಣಕಾರಿ ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಈ ಸಂಸ್ಕೃತಿಯು ವೇದ, ಆಗಮ, ಪುರಾಣ, ಉಪನಿಷತ್, ಸಾಂಖ್ಯ, ಯೋಗ, ಮೀಮಾಂಸಾ, ನ್ಯಾಯ, ವೈಶೇಷಿಕ, ಜ್ಯೋತಿಷ್ಯ, ವ್ಯಾಕರಣಾದಿ ಶಾಸ್ತ್ರಗಳಲ್ಲಿ ನಿಹಿತವಾಗಿದೆ. ಆದ್ದರಿಂದ ಭಾರತೀಯ ಸಂಸ್ಕೃತಿಯನ್ನು ರಕ್ಷಿಸಬೇಕಾದರೆ ಈ ಶಾಸ್ತ್ರಗಳ ರಕ್ಷಣೆಯು ಅತ್ಯವಶ್ಯಕವಾದದ್ದು. ಈ ಮರ್ಮವನ್ನರಿತ ಶ್ರೀಗಳು ಕಾಶಿಯಲ್ಲಿ ೧೦ ವರ್ಷ ಪರ್ಯಂತವಾಗಿ ಸತತ ಪರಿಶ್ರಮವನ್ನು ಮಾಡಿ, ೧೯೩೧ರಲ್ಲಿ ಕಾವ್ಯತೀರ್ಥ, ೧೯೩೪ರಲ್ಲಿ ಸ್ಮೃತಿತೀರ್ಥ, ೧೯೩೬ರಲ್ಲಿ ದರ್ಶನ ತೀರ್ಥ ಮುಂತಾದ ಪರೀಕ್ಷೆಗಳಲ್ಲಿ ಉತ್ತಮ ಶ್ರೇಣಿಯಲ್ಲಿ ಪಾಸಾದರು. ದಕ್ಷಿಣ ಭಾರತದ ಯಾವ ವಿದ್ವಾಂಸನೂ ಇಷ್ಟು ತೀರ್ಥ ಪರೀಕ್ಷೆಗಳಲ್ಲಿ ಇದುವರೆಗೂ ಪಾಸಾಗಿಲ್ಲ. ಇದೂ ಅಲ್ಲದೆ ಮಥುರಾವ್ರಜ ಮಂಡಲದ "ಸಾಹಿತ್ಯ ವಿಶಾರದ" ಮತ್ತು "ಧರ್ಮಾಚಾರ್ಯ" ಪರೀಕ್ಷೆಗಳಲ್ಲಿಯೂ ಇವರು ಪಾಸಾದರು. ಹೀಗೆ ವೇದವೇದಾಂತಾದಿ ಸಕಲ ಶಾಸ್ತ್ರಗಳಲ್ಲೂ ಅನುಪಮ ವಿದ್ವಾಂಸರಾಗಿ ಮೆರೆದರು.

ಕಾಶೀ ವಿದ್ವಾಂಸರಿಂದ ಪ್ರಶಸ್ತಿ ಪ್ರಾಪ್ತಿ :

ಕಾಶಿಯ ಅತಿ ಪ್ರಾಚೀನವಾದ "ಸಂಸ್ಕೃತ ಸಾಹಿತ್ಯ ಸಮಾಜ" ಎಂಬ ಸಂಸ್ಥೆಯು ಪ್ರತಿವರ್ಷ ವಾರ್ಷಿಕೋತ್ಸವವನ್ನು ನೆರವೇರಿಸಿ ಆ ವರ್ಷದ ಸುಯೋಗ್ಯ ವಿದ್ವಾಂಸರಿಗೆ ಪ್ರಶಸ್ತಿ ಪತ್ರಗಳನ್ನು ಕೊಡುವ ಪದ್ಧತಿಯುಂಟು. ಅದೇ ಪ್ರಕಾರ ೧೯೩೬ನೆಯ ಮಾರ್ಚ್ ೨ರಂದು ಈ ಸಂಸ್ಥೆಯ ೧೦ನೆಯ ವಾರ್ಷಿಕೋತ್ಸವವು ಮಹಾಮಹೋಪಾಧ್ಯಾಯ ಶ್ರೀ ಪಂ। ಮುಕುಂದಝಾ ಭಕ್ಷಿ ಇವರ ಅಧ್ಯಕ್ಷತೆಯಲ್ಲಿ ನೆರವೇರಿತು. ಅಂದಿನ ಸಭೆಯಲ್ಲಿ ಪಂ॥ ವೀರಭದ್ರ ಶರ್ಮರವರ ಅಪಾರ ಪಾಂಡಿತ್ಯವನ್ನು ಮೆಚ್ಚಿಕೊಂಡ ಸಭೆಯು ಇವರಿಗೆ "ವಿದ್ಯಾರತ್ನ" ಎಂಬ ಪದವಿಯನ್ನು ಕೊಟ್ಟು ಸತ್ಕರಿಸಿತು. ಇದು ಸಮಸ್ತ ವೀರಶೈವ ಸಮಾಜಕ್ಕೆ ಒಂದು ಹೆಮ್ಮೆಯ ವಿಷಯವಾಗಿದೆ. ಇದೇ ಪ್ರಕಾರ ಕಾಶೀ ಜ್ಞಾನಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಸಂಸ್ಥಾನದ ಪರವಾಗಿ ಇವರಿಗೆ "ವಿದ್ಯಾನಿಧಿ" ಎಂಬ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಿದರು.

ಬಹುಭಾಷಾ ಪಾಂಡಿತ್ಯ :

ಶ್ರೀ ವೀರಭದ್ರ ಶರ್ಮಾಜಿಯವರ ಬುದ್ಧಿ ಕುಶಲತೆಯು ಅಗಾಧವಾಗಿತ್ತು. ಇವರು ಸಂಸ್ಕೃತ, ಪ್ರಾಕೃತ, ಪಾಲೀ, ತೆಲುಗು, ಕನ್ನಡ, ಹಿಂದೀ, ಮರಾಠಿ ಭಾಷೆಗಳಲ್ಲಿ ಸಂಪೂರ್ಣ ಪ್ರಭುತ್ವವನ್ನು ಸಂಪಾದಿಸಿದ್ದರಲ್ಲದೇ, ಉರ್ದು, ಬಂಗಾಲಿ, ತಮಿಳು, ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ತಕ್ಕಮಟ್ಟಿಗೆ ಜ್ಞಾನವನ್ನು ಸಂಪಾದಿಸಿದ್ದರು.

ಇವರ ಬಹುಭಾಷಾ ಪಾಂಡಿತ್ಯದ ಪ್ರತೀಕಗಳಾಗಿರುವ ಲಿಂಗಧಾರಣ ಸಿದ್ಧಾಂತ, ಸಂಸ್ಕೃತ ವಾಙ್ಮಯ ಪರಿಚಯ, ಮಾಲವಿಕಾಗ್ನಿಮಿತ್ರ (ಪ್ರಥಮಾಷ್ಟಕ), ಶಿವಪಂಚಸ್ತವ, ಶ್ರೀ ರೇಣುಕ ವಿಜಯ ಪುರಾಣ ಮುಂತಾದ ತೆಲುಗು ಭಾಷೆಯ ಗ್ರಂಥಗಳು; ಆಂಧ್ರ ವೀರಶೈವರು, ಮೀಮಾಂಸಾ ಪರಿಭಾಷಾ, ತರ್ಕಸಂಗ್ರಹ ಮುಂತಾದ ಕನ್ನಡ ಗ್ರಂಥಗಳು; ಅದರಂತೆ ಕಾಶೀ ಪೀಠಾಚೆ ಪ್ರಾಚೀನತ್ವ ಮುಂತಾದ ಮರಾಠೀ ಗ್ರಂಥಗಳು ಇಂದಿಗೂ ಜೀವಂತ ಸಾಕ್ಷಿಗಳಾಗಿವೆ.

ಸಮಾಜದಲ್ಲಿಯ ದೂಷಿತ ಪದ್ಧತಿಗಳನ್ನು ದೂರಮಾಡುವುದಕ್ಕಾಗಿ ಜಗದ್ಗುರುಗಳು "ಸಮಾಜ ಕಾ ಅಗ್ನಿಕುಂಡ", "ಲಗ್ನ ಯಾ ಭಗ್ನ", "ವರಶುಲ್ಕ ವ್ಯಾಪ್ರ", "ರುಪಯೋಂಕಾ ರೂಪ" ಮುಂತಾದ ಸಣ್ಣ ಸಣ್ಣ ಕಥೆಗಳನ್ನು ಬರೆದು ಪ್ರಕಾಶಪಡಿಸಿದ್ದರು. ಅವೆಲ್ಲವುಗಳು ಅಂದಿನ ಸಮಾಜದ ಹಿತಚಿಂತಕರಿಂದ ಆದರಿಸಲ್ಪಟ್ಟಿರುವುದಲ್ಲದೇ ಇಂದಿಗೂ ಆದರ್ಶಗಳಾಗಿವೆ.

ಪುರಾತತ್ತ್ವ ಪಾಂಡಿತ್ಯ :

ಶ್ರೀ ಚಿದಿರೇಮಠದ ವೀರಭದ್ರ ಶರ್ಮರು ಕೇವಲ ಬಹುಭಾಷಾ ವಿಶಾರದರಷ್ಟೇ ಅಲ್ಲ, ಬಹುಲಿಪಿಗಳ ಜ್ಞಾತೃಗಳೂ ಆಗಿದ್ದರು. ಭಾರತ ದೇಶದ ಸುಮಾರು ೪೦ ತರಹದ ಪ್ರಾಚೀನ ಲಿಪಿಗಳನ್ನು ಬಲ್ಲವರಾಗಿದ್ದ ಇವರು ಪುರಾತತ್ತ್ವ ವಿಭಾಗದಲ್ಲಿಯೂ ಹೆಸರುಗಳಿಸಿದ್ದರು. ಪುರಾತನ ದಾಖಲೆಗಳ ಸಂಶೋಧನೆಗಾಗಿ ಉತ್ತರ ಪ್ರದೇಶದ ಗಢವಾಲ ವಿಭಾಗದಲ್ಲಿ ಸಂಚರಿಸುವಾಗ ಉತ್ತರ ಕಾಶಿಯ ಶಕ್ತಿಸ್ತಂಭದ ಮೇಲೆ ಕೆತ್ತಲ್ಪಟ್ಟ ಒಂದು ಪ್ರಾಚೀನ ಲಿಪಿಯನ್ನು ಇವರು ಓದಿ ಅದರ ಅಭಿಪ್ರಾಯವನ್ನು ಬಿಹಾರ ಪ್ರದೇಶದ "ಪುರಾತತ್ವಾಂಕ" ಎಂಬ ಹಿಂದೀ ಪತ್ರಿಕೆಯಲ್ಲಿ ಪ್ರಸ್ತುತಪಡಿಸಿದ್ದರು. ಇವರ ಈ ಲೇಖನದಿಂದ ಅನೇಕ ಇತಿಹಾಸತಜ್ಞರು ಇವರ ಪಾಂಡಿತ್ಯವನ್ನು ಪ್ರಶಂಸಿಸಿದರಲ್ಲದೇ, ವಿದೇಶದ ರಾಯಲ್ ಏಶ್ಯಾಟಿಕ್ ಸೊಸೈಟಿಯವರು ಇವರನ್ನು ಕೊಂಡಾಡಿದ್ದಾರೆ. ೧೯೩೬ರವರೆಗೆ ಈ ಶಿಲಾಲೇಖನದ ಅರ್ಥ ಸರಿಯಾಗಿ ನಿರ್ಣಯವಾಗಿರಲಿಲ್ಲ.

ಇಂತಹ ಅಗಾಧವಾದ ಲಿಪಿಜ್ಞಾನವನ್ನು ಸಂಪಾದಿಸಿದ ಇವರು "ವಿಜಾಯಾದಿತ್ಯನ ಅಮ್ಮಣಗಿ ತಾಮ್ರಶಾಸನ"ದ ಮೇಲೆ ಒಂದು ಲೇಖನವನ್ನು ಬರೆದು ಸುಪ್ರಸಿದ್ಧ ಇತಿಹಾಸತಜ್ಞರಾದ ಮ.ಮ. ರಾವ್ ಬಹದ್ದೂರ್, ಪಂ॥ ಗೌರೀಶಂಕರ ಹೀರಾಚಂದ ಓಝಾ ಇವರ ಅಭಿನಂದನ ಗ್ರಂಥದಲ್ಲಿ ವಿಕ್ರಮ ಸಂವತ್ಸರ ೧೯೯೧(ಕ್ರಿ.ಶ. ೧೯೩೭)ರಲ್ಲಿ ಪ್ರಯಾಗ ಕ್ಷೇತ್ರದಿಂದ ಪ್ರಕಾಶಪಡಿಸಿದ್ದಾರೆ. ಇದರಿಂದ ಭಾರತೀಯ ಇತಿಹಾಸದಲ್ಲಿಯೇ ಹೊಸ ಬೆಳಕು ಮೂಡಿದಂತಾಗಿದೆ.

ಇವರು ಬರೆದ "ಕಲಿಕಾಲ ಪರಿಚಯ" ಎಂಬ ಕಾಲಮಾಪನದ ಪುಸ್ತಕವು ಇತಿಹಾಸಕಾರರಿಗೆ ಬಹಳ ಉಪಯುಕ್ತವಾಗಿದೆ. ಈ ಪುಸ್ತಕದಲ್ಲಿ ಕಲಿಯುಗದ ಪ್ರಾರಂಭದಿಂದ

೧೯೮೬ನೆಯ ಇಸವಿಯವರೆಗೆ ಕಾಲಚಕ್ರದ ಪರಿಚಯವನ್ನು ಬರೆದು ಇಟ್ಟಿದ್ದಾರೆ. ಇನ್ನು ಮುಂದಿನವರು ಅದನ್ನು ಮುಂದುವರೆಸುವ ಮಾರ್ಗದರ್ಶನವನ್ನು ಸಹ ಮಾಡಿಹೋಗಿದ್ದಾರೆ. ಇದೊಂದು ಇವರ ವಿನೂತನವಾದ ಕೊಡುಗೆಯಾಗಿದೆ.

ಇವರು ಸಂಗ್ರಹಿಸಿದ ಶಿಲಾಶಾಸನ, ತಾಮ್ರಶಾಸನ ಹಾಗೂ ಮತ್ತಿತರ ಪುರಾತತ್ವ ಸಾಮಗ್ರಿಗಳು ಜಗತ್ತಿನ ಇತಿಹಾಸಕ್ಕಾಗಿ ಅತ್ಯಂತ ಮಹತ್ವಪೂರ್ಣಗಳಾಗಿವೆ.

ಕಾಶೀ ವೀರಶೈವ ವಿದ್ವತ್ ಸಂಘದ ಸ್ಥಾಪನೆ :

ಕಾಶಿಯಲ್ಲಿ ಅಧ್ಯಯನ ಮಾಡುತ್ತಿದ್ದ ಚಿದಿರೇಮಠದ ಶ್ರೀ ವೀರಭದ್ರ ಶರ್ಮರು ಕೇವಲ ಏಕಾಂಗಿಯಾಗಿರದೇ ಸಂಘಜೀವಿಯಾಗಿರಲೂ ಶ್ರಮಿಸಿದರು. ಅಂದಿನ ಎಲ್ಲ ವಿದ್ಯಾರ್ಥಿಗಳನ್ನು ಒಂದುಗೂಡಿಸಿ ೧೯೩೪ರಲ್ಲಿ "ಕಾಶೀ ವೀರಶೈವ ವಿದ್ವತ್ ಸಂಘ" ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮುಖಾಂತರ ಸಂಸ್ಕೃತ, ಹಿಂದೀ ಮುಂತಾದ ಭಾಷೆಗಳಲ್ಲಿ ಭಾಷಣ ಹಾಗೂ ಲೇಖನ ಕಲೆಗಳು ವಿದ್ಯಾರ್ಥಿಗಳಲ್ಲಿ ಜಾಗೃತವಾಗುವ ಅನೇಕ ಯೋಜನೆಗಳನ್ನು ಮಾಡಿದರು. ಅವರು ಸ್ಥಾಪಿಸಿದ ಈ ಸಂಘವು ಇಂದಿಗೂ ಅನೇಕ ಕಾರ್ಯಕಲಾಪಗಳನ್ನು ನಡೆಸುತ್ತಾ ಅವರು ತೋರಿದ ಸನ್ಮಾರ್ಗದಲ್ಲಿ ಮುನ್ನಡೆಯುತ್ತಿದೆ.

ಧರ್ಮಪ್ರಚಾರಕ್ಕಾಗಿ ಯಾತ್ರೆ :

"ಕ್ಷಣಶಃ ಕ್ಷಣಶಶ್ಚೈವ ವಿದ್ಯಾಮರ್ಥಂಚ ಸಾಧಯೇತ್" ಎಂಬ ಉಕ್ತಿಗನುಸಾರವಾಗಿ ಪಂ॥ ವೀರಭದ್ರ ಶರ್ಮಾಜಿಯವರು ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದೆ ಕಾಶಿಯಲ್ಲಿ ೧೦ ವರ್ಷ ಅಖಂಡ ಪರಿಶ್ರಮವನ್ನು ಮಾಡಿ, ಅಪಾರ ವಿದ್ಯಾ ಸಂಪಾದನೆಯನ್ನು ಮಾಡಿ, ಆ ಜ್ಞಾನಪ್ರಭೆಯನ್ನು ಸಮಾಜದಲ್ಲಿ ಹರಡುವುದಕ್ಕಾಗಿ ಸೊಲ್ಲಾಪುರ, ದರ್ಶನಾಳ, ಬಾರ್ಸಿ, ಪಂಢರಪುರ ಮುಂತಾದ ಅನೇಕ ವೀರಶೈವ ಸಭೆಗಳಲ್ಲಿ ಜನಾಮಂತ್ರಣದ ಮೇರೆಗೆ ಹೋಗಿ ಪ್ರಭಾವಶಾಲೀ ಉಪನ್ಯಾಸಗಳನ್ನು ಮಾಡಿ, ಅನೇಕ ಸನ್ಮಾನ ಪತ್ರಗಳನ್ನು ಪಡೆದು ಕೀರ್ತಿಶಾಲಿಗಳಾದರು. ಬಾಲತಪಸ್ವಿ, ಚೆನ್ನವೀರ ಶಿವಾಚಾರ್ಯ ಸ್ವಾಮಿಗಳು, ಬೃಹನ್ಮಠ ಹೊಟಗಿ ಇವರು ಪೂಜ್ಯ ಶರ್ಮಾಜಿಯವರನ್ನು ಅನೇಕ ಗ್ರಾಮೀಣ ಸಭೆಗಳಲ್ಲಿಯೂ ಬರಮಾಡಿಕೊಂಡು ಸಾಮಾನ್ಯ ಜನರಿಗೂ ಇವರ ವಿದ್ವತ್ತಿನ ಲಾಭವಾಗುವಂತೆ ಮಾಡಿದರು.

ಯಾದಗಿರಿ ಸಂಸ್ಕೃತ ಕಾಲೇಜಿನ ಪ್ರಾಚಾರ್ಯರು :

ಪಂ॥ ವೀರಭದ್ರ ಶರ್ಮಾಜಿಯವರ ಪಾಂಡಿತ್ಯ ಪ್ರತಿಭೆಯನ್ನು ಬಹುಮುಖವಾಗಿ ಶ್ರವಣ ಮಾಡಿದ ಯಾದಗಿರಿ ಶಂಕರ ಸಂಸ್ಕೃತ ಕಾಲೇಜಿನ ಕಮಿಟಿಯವರು ೧೯೩೫ರಲ್ಲಿ ಇವರನ್ನು ತಮ್ಮ ಕಾಲೇಜಿನ ಪ್ರಾಚಾರ್ಯರಾಗಲು ಕೇಳಿಕೊಂಡಾಗ ವಿದ್ಯಾದಾನದ ತೀವ್ರ ಅಭಿಲಾಷೆಯುಳ್ಳ ಪೂಜ್ಯರು ಅವರ ಕರೆಗೆ ಓಗೊಟ್ಟು, ಸುಮಾರು ಒಂದು ವರ್ಷ ಪರ್ಯಂತವಾಗಿ ಪ್ರಾಚಾರ್ಯರಾಗಿದ್ದು ಅಲ್ಲಿಯ ಆಂತರಿಕ ಕಲಹದಿಂದ ಕಾಲೇಜಿನ ವಾತಾವರಣವು ದೂಷಿತಗೊಂಡಾಗ ಆ ಸ್ಥಾನಕ್ಕೆ ತ್ಯಾಗಪತ್ರವನ್ನು ಕೊಟ್ಟು ಸಿಕಂದರಾಬಾದಿಗೆ ಬಂದರು.

ಸಿಂಕದರಾಬಾದಿನಲ್ಲಿ ವೀರಶೈವ ಗುರುಕುಲ ಸ್ಥಾಪನೆ :

ಯಾದಗಿರಿ ಶಂಕರ ಸಂಸ್ಕೃತ ಕಾಲೇಜಿನಲ್ಲಿ ವಿದ್ಯಾದಾನ ಮಾಡಿದ ಪರಿಣಾಮವಾಗಿ ಇವರು "ಪಂ॥ ವೀರಭದ್ರ ಶಾಸ್ತ್ರಿ" ಎಂಬುದಾಗಿ ಕರೆಯಲ್ಪಟ್ಟರು. ತಮ್ಮದೇ ಆದ ಒಂದು ಸ್ವತಂತ್ರವಾದ ಸ್ಥಾನದಲ್ಲಿ ಪವಿತ್ರ ಗುರುಕುಲವನ್ನು ಸಂಸ್ಥಾಪಿಸಿ ಭಾರತೀಯ ಸಂಸ್ಕೃತಿಯನ್ನು ರಕ್ಷಿಸುವ ಉದ್ದೇಶದಿಂದ ಯಾದಗಿರಿಯನ್ನು ಬಿಟ್ಟು ಸಿಕಂದರಾಬಾದಿಗೆ ಬಂದಾಗ ಪೂಜ್ಯ ಶಾಸ್ತ್ರಿಗಳವರ ಪರಮ ಭಕ್ತರಾದ ಶ್ರೀಮಂತ ಮಠದ ನಾಗಯ್ಯನವರು ಪೂಜ್ಯರ ಅಭಿಲಾಷೆಯ ಪೂರ್ತಿಗಾಗಿ ೨೧,೦೦೦ ರೂಪಾಯಿ ಬೆಲೆಬಾಳುವ ಭವನವನ್ನೇ ಇವರಿಗೆ ದಾನಮಾಡಿದರು.

ಪೂಜ್ಯ ಶಾಸ್ತ್ರಿಗಳವರು ೧೯೩೬ರ ಸೆಪ್ಟಂಬರ್ ತಿಂಗಳಲ್ಲಿ ಆ ಸ್ಥಾನದಲ್ಲಿ ವೀರಶೈವ ಗುರುಕುಲವನ್ನು ಸ್ಥಾಪಿಸಿ ತಾವೇ ಆ ಗುರುಕುಲದ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಯ ಜೊತೆಗೆ ವಿದ್ಯಾದಾನವನ್ನೂ ನೀಡಿದರು.

ಗ್ರಂಥಾಲಯ ಹಾಗೂ ಪತ್ರಿಕೆ :

ಪೂಜ್ಯ ಶಾಸ್ತ್ರಿಗಳವರು ಸಂಶೋಧನೆಯ ಮನೋವೃತ್ತಿಯವರಾಗಿದ್ದರಿಂದ ತಮ್ಮ ವಿದ್ಯಾರ್ಥಿ ಅವಸ್ಥೆಯಲ್ಲಿಯೇ ದುರ್ಲಭವಾದ ಅನೇಕ ಪ್ರಾಚೀನ ಶಾಸ್ತ್ರೀಯ ಗ್ರಂಥಗಳನ್ನು ಸಂಗ್ರಹಿಸಿದ್ದರಿಂದ ಅವುಗಳಿಗಾಗಿ ಸಿಕಂದರಾಬಾದಿನಲ್ಲಿಯೇ "ಶೈವಭಾರತೀ ಭವನ" ಎಂಬ ಗ್ರಂಥಾಲಯವನ್ನು (ನಂ. ೪೨೬೮ ಸಜನ್‌ಲಾಲ್ ಸ್ಟ್ರೀಟ್) ಸ್ಥಾಪಿಸಿದರು. ಈ ಗ್ರಂಥಾಲಯದಲ್ಲಿ ಭಾರತದ ಎಲ್ಲ ಧರ್ಮ-ದರ್ಶನಗಳ ಸಂಸ್ಕೃತ, ಹಿಂದೀ, ಮರಾಠಿ, ಇಂಗ್ಲೀಷ್, ತಮಿಳು, ಉರ್ದು ಮತ್ತು ಬಂಗಾಳಿ ಭಾಷೆಗಳ ಮುದ್ರಿತ ಮತ್ತು ಹಸ್ತಪ್ರತಿಗಳ ಸಹಸ್ರಾರು ಗ್ರಂಥಗಳು ಸಂಗ್ರಹಿಸಲ್ಪಟ್ಟವು. ಅಂದಿನ ನಿಜಾಮ್ ಪ್ರಾಂತದಲ್ಲಿಯೇ ಈ ಗ್ರಂಥಾಲಯವು ಪ್ರಮುಖವೆಂದು ಪರಿಗಣಿಸಲ್ಪಟ್ಟಿತ್ತು.

ಒಂದು ಸಂಸ್ಥೆಯಿಂದ ಸಂಗ್ರಹಿಸಲಸಾಧ್ಯವಾದ ಇಷ್ಟು ಗ್ರಂಥಗಳನ್ನು ಪೂಜ್ಯ ಶಾಸ್ತ್ರಿಗಳು ವ್ಯಕ್ತಿಗತವಾಗಿ ಸಂಗ್ರಹಿಸಿದ್ದನ್ನು ನೋಡಿ ಇವರು ಸಾಮಾನ್ಯ ವ್ಯಕ್ತಿಗಳಲ್ಲವೆಂಬುದು ಜನಮನದಲ್ಲಿ ಮೂಡತೊಡಗಿತು.

ಮನೆಮನೆಗೆ ತತ್ತ್ವಪ್ರಚಾರ ಮಾಡಲು ಪುಸ್ತಕಗಳಿಗಿಂತ ಪತ್ರಿಕೆಗಳ ಪಾತ್ರವು ಮಹತ್ವಪೂರ್ಣವಾದದ್ದೆಂದರಿತ ಪೂಜ್ಯರು ತೆಲುಗು ಭಾಷೆಯಲ್ಲಿ "ವಿಭೂತಿ" ಎಂಬ ಪತ್ರಿಕೆಯನ್ನು ತಮ್ಮ ಸಂಪಾದಕತ್ವದಲ್ಲಿಯೇ ಪ್ರಾರಂಭಿಸಿದರು. ಈ ಪತ್ರಿಕಾ ಪ್ರಕಟಣೆಯಿಂದ ಇವರ ಜ್ಞಾನಪ್ರಭೆಯು ಆಂಧ್ರ ಪ್ರದೇಶದ ತುಂಬೆಲ್ಲ ಹರಡಿತು.

ಕವಿತಾ ಚಾತುರ್ಯ :

ಪೂಜ್ಯರಿಗೆ ಕವಿತಾ ರಚನಾಶಕ್ತಿಯು ಬಾಲ್ಯದಲ್ಲಿಯೇ ಪ್ರಾಪ್ತವಾದ ಕಾರಣ ಇವರಿಗೆ "ಬಾಲಕವಿ" ಎಂಬ ಬಿರುದು ಪ್ರಾಪ್ತವಾಗಿತ್ತು. ಈ ಸಾಮರ್ಥ್ಯವನ್ನು ಪೂಜ್ಯರು ಹಾಗೆಯೇ ಬೆಳೆಸುತ್ತಾ ಹೋದರು. ಇದರ ಪರಿಣಾಮವಾಗಿ ಸಂಸ್ಕೃತ, ಹಿಂದೀ, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ನಿರರ್ಗಳವಾಗಿ ಕವಿತೆಗಳನ್ನು ರಚಿಸುವ ಸಾಮರ್ಥ್ಯವನ್ನು ಹೊಂದಿದ್ದರು. ಅನೇಕ ಪ್ರಸಂಗಗಳಲ್ಲಿ ತತ್‌ಕ್ಷಣದಲ್ಲಿಯೇ ಕವಿತೆಯನ್ನು ರಚಿಸಿದ ಇವರ ವಿಭಿನ್ನ ಛಂದಸ್ಸಿನ ಪದ್ಯಗಳು ಪ್ರಖ್ಯಾತವಾಗಿವೆ. ಮತ್ತು ಇವರೊಬ್ಬ 'ಆಶುಕವಿ' ಎಂಬುದನ್ನು ಪ್ರಸ್ತುತಪಡಿಸಿವೆ.

ಕಾಶೀ ಜ್ಞಾನಸಿಂಹಾಸನಾಧಿಪತ್ಯ :

ಹಲವು ವಿಧದಲ್ಲಿ ಪ್ರತಿಭಾಸಂಪನ್ನರಾಗಿ ಜ್ಞಾನನಿಧಿಗಳಾದ ಪಂ॥ ವೀರಭದ್ರ ಶಾಸ್ತ್ರಿಗಳ ಜ್ಞಾನಪ್ರಭಾವವು ಕಾಶೀ ಜ್ಞಾನಸಿಂಹಾಸನದ ೮೩ನೆಯ ಅಧಿಪತಿಗಳಾಗಿದ್ದ ಲಿಂ॥ ಶ್ರೀ ಜಗದ್ಗುರು

ಪಂಚಾಕ್ಷರ ಶಿವಾಚಾರ್ಯ ಮಹಾಸ್ವಾಮಿಗಳ ಮನಸ್ಸಿನ ಮೇಲೂ ಪರಿಣಾಮವನ್ನುಂಟುಮಾಡಿತು. ಅಂತೆಯೇ ಅವರು ತಮ್ಮ ಅಂತ್ಯಕಾಲದಲ್ಲಿ ತಾ। ೨೦-೪-೧೯೪೪ ರಂದು ಪಂ॥ ವೀರಭದ್ರ ಶಾಸ್ತ್ರಿಗಳ ಹೆಸರಿನಿಂದ ಮೃತ್ಯುಪತ್ರವನ್ನು ಬರೆದು ತಾ। ೨೬-೪-೧೯೪೪ ರಂದು ಲಿಂಗೈಕ್ಯರಾದರು.

ಮುಂದೆ ತಾ॥ ೨೭-೯-೧೯೪೪ ಬುಧವಾರ ವಿಜಯದಶಮಿಯಂದು ಮಧ್ಯಾಹ್ನ ಧನುರ್ಲಗ್ನದ ಶುಭಮುಹೂರ್ತದಲ್ಲಿ ಅಂದಿನ ರಂಭಾಪುರಿ ಜಗದ್ಗುರುಗಳಾಗಿದ್ದ ಶ್ರೀ ಶಿವಾನಂದರಾಜೇಂದ್ರ ಶಿವಾಚಾರ್ಯ ಭಗವತ್ಪಾದರ ಅಮೃತಹಸ್ತದಿಂದ ಕಾಶೀ ಜ್ಞಾನಸಿಂಹಾಸನದ ೮೪ನೆಯ ಜಗದ್ಗುರುಗಳಾಗಿ ಪಂ॥ ವೀರಭದ್ರ ಶಾಸ್ತ್ರಿಗಳು ಅಧಿಕಾರವನ್ನು ಸ್ವೀಕರಿಸಿದರು.

ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳು ಅಧಿಕಾರ ಹೊಂದಿದ ಕೆಲವೇ ದಿನಗಳಲ್ಲಿ "ಜ್ಞಾನಮಂದಿರ"ವೆಂಬ ಭವ್ಯ ಗ್ರಂಥಾಲಯವನ್ನು ಕಟ್ಟಿಸಿ ತಾ।೭-೩-೧೯೪೬ರಂದು ಉದ್ಘಾಟನೆಯನ್ನು ಮಾಡಿದರು. ತಾವು ಈ ಪೂರ್ವದಲ್ಲಿ ಸಿಕಂದರಾಬಾದಿನಲ್ಲಿ ಸಂಸ್ಥಾಪಿಸಿದ "ಶೈವಭಾರತೀ ಭವನ"ವೆಂಬ ಗ್ರಂಥಾಲಯದ ಎಲ್ಲ ಪುಸ್ತಕಗಳನ್ನೂ ಕಾಶಿಗೆ ಸ್ಥಳಾಂತರಿಸಿದರು.

ಇಂದಿನ ಕಾಶೀ ಪೀಠದ ಜ್ಞಾನಮಂದಿರದಲ್ಲಿ ಹತ್ತುಸಾವಿರಕ್ಕೂ ಹೆಚ್ಚು ಮುದ್ರಿತ ಗ್ರಂಥಗಳು ಹಾಗೂ ಸಾವಿರಾರು ತಾಡೋಲೆ ಗ್ರಂಥಗಳಿವೆ. ಇದರಿಂದ ಈ ಗ್ರಂಥಾಲಯವು ಕಾಶಿಯಲ್ಲಿಯೇ ಒಂದು ಅಮೂಲ್ಯ ಗ್ರಂಥಾಲಯವಾಗಿ ಪರಿಗಣಿಸಲ್ಪಟ್ಟಿದೆ. ಈ ಗ್ರಂಥಾಲಯದ ಯಾವುದೇ ಪುಸ್ತಕವನ್ನು ತೆಗೆದು ನೋಡಿದರೂ ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳ ಅಧ್ಯಯನದ ಸಂಕೇತಗಳು ಕಂಡುಬರುತ್ತವೆ. ಮೈಸೂರು ವಿಶ್ವವಿದ್ಯಾಲಯದ ಒ.ಆರ್.ಐ. ಯವರು ಇಲ್ಲಿಯ ಅನೇಕ ತಾಡೋಲೆ ಗ್ರಂಥಗಳ ಛಾಯಾಚಿತ್ರಗಳನ್ನು ತೆಗೆದುಕೊಂಡು ಹೋಗಿದ್ದಾರೆ.

ಪೂಜ್ಯರು ತಮ್ಮ ಅಧಿಕಾರಾವಧಿಯಲ್ಲಿ ಜಂಗಮವಾಡಿಮಠದಲ್ಲಿ ಶಿವಧರ್ಮ ಗ್ರಂಥಮಾಲೆಯನ್ನು ಪ್ರಾರಂಭಿಸಿ, ಅದರ ಮುಖಾಂತರ ವಿಭಿನ್ನ ಭಾಷೆಗಳಲ್ಲಿ ಅನೇಕ ಶಾಸ್ತ್ರೀಯ ಗ್ರಂಥಗಳನ್ನು ಪ್ರಕಾಶನಗೊಳಿಸಿದ್ದಾರೆ. ಸಂಸ್ಕೃತದಲ್ಲಿ "ವೀರಶೈವ ವಿಶ್ವಕೋಶ"ವನ್ನು ತಯಾರಿಸುವ ಮಹೋದ್ದೇಶ ಇವರದಾಗಿತ್ತು. ಆದರೆ ಪೀಠದ ಮೇಲಿನ ಅಧಿಕ ಪ್ರಮಾಣದ ಋಣವನ್ನು ತೀರಿಸಿ ಪೀಠವನ್ನು ಋಣಮುಕ್ತವನ್ನಾಗಿ ಮಾಡುವುದರೊಳಗಾಗಿ ಪೀಠದ ಋಣಾನುಸಂಬಂಧವು ತೀರಿತೋ ಏನೋ ಎಂಬಂತೆ ತಾ॥ ೨೫-೧-೧೯೪೮ (ಪುಷ್ಯ ಶುದ್ಧ ಚತುರ್ದಶಿ)ರಂದು ಶ್ರೀ ಜಗದ್ಗುರು ವೀರಭದ್ರ ಶಿವಾಚಾರ್ಯ ಮಹಾಸ್ವಾಮಿಗಳು ಅಕಸ್ಮಾತ್ ಲಿಂಗೈಕ್ಯರಾದರು.

ಪೂಜ್ಯರು ಪೀಠಾಧ್ಯಕ್ಷರಾಗಿ ಕೆಲವೇ ಕಾಲವಿದ್ದರೂ ಬಹಳ ಮಹತ್ವಪೂರ್ಣಗಳಾದ ಕಾರ್ಯಗಳನ್ನು ಮಾಡಿಹೋಗಿದ್ದಾರೆ. ಸಾಮಾನ್ಯ ವಿದ್ಯಾರ್ಥಿಜೀವನದಿಂದ ಪ್ರಾರಂಭಿಸಿ ಪೀಠಾಧ್ಯಕ್ಷರಾಗಿ ಲಿಂಗೈಕ್ಯರಾಗುವವರೆಗೆ ಮಾಡಿದ ಇವರ ಸಾಧನೆಗಳು ಮಾನವ ಕುಲಕ್ಕೆ ಮಾರ್ಗದರ್ಶಕಗಳಾಗಿವೆ, ಅಪೂರ್ವ ಕೊಡುಗೆಗಳೆನಿಸಿವೆ.

ಪೂಜ್ಯ ಶ್ರೀ ವೀರಭದ್ರ ಜಗದ್ಗುರುಗಳವರು ತಾವು ಲಿಂಗೈಕ್ಯರಾಗುವ ಪೂರ್ವದಲ್ಲಿಯೇ ದಿ॥ ೭-೧-೧೯೪೮ರಂದು ಶಿವಮೊಗ್ಗ ಜಿಲ್ಲಾ ಸೊರಬ ತಾಲ್ಲೂಕಿನ ಕ್ಯಾಸನೂರು ಮಠದ ಪಟ್ಟಾಧಿಕಾರಿಗಳಾಗಿದ್ದ ಶ್ರೀ ಷ॥ಬ್ರ॥ ಜಯಗುರು ಶಿವಾಚಾರ್ಯರ ಹೆಸರಿಗೆ ಉತ್ತರಾಧಿಕಾರದ ಮೃತ್ಯುಪತ್ರವನ್ನು ಬರೆದು ನೋಂದಣಿ ಮಾಡಿಸಿದ್ದರು. ಮುಂದೆ ಆ ಮೃತ್ಯುಪತ್ರದ ಪ್ರಕಾರ ಶಾ.ಶ. ೧೮೭೦ನೆಯ ಸರ್ವಧಾರಿ ಸಂವತ್ಸರ ಕಾರ್ತಿಕ ಶು॥ ತ್ರಯೋದಶೀ ತಾ॥ ೧೪-೧೧-೧೯೪೮ ರವಿವಾರ ಬೆಳಗ್ಗೆ ೯-೪೫ರಿಂದ ೯-೫೭ರವರೆಗೆ ಸಲ್ಲುವ ಧನುರ್ಲಗ್ನದ ಸಿಂಹಾಂಶ ಶುಭಮುಹೂರ್ತದಲ್ಲಿ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಹಾಗೂ ರಂಭಾಪುರೀ ವೀರಸಿಂಹಾಸನಾಧೀಶ್ವರ ಜಗದ್ಗುರು ಪ್ರಸನ್ನರೇಣುಕ ವೀರಗಂಗಾಧರ ಶಿವಾಚಾರ್ಯ ಮಹಾಸ್ವಾಮಿಗಳವರ ಅಮೃತಹಸ್ತದಿಂದ ಶ್ರೀ ಷ॥ಬ್ರ॥ ಜಯಗುರು ಶಿವಾಚಾರ್ಯರಿಗೆ ಈ ಪೀಠದ ೮೫ನೆಯ ಜಗದ್ಗುರುತ್ವವು ದಯಪಾಲಿಸಲ್ಪಟ್ಟಿತು. ಪಟ್ಟಾಭಿಷೇಕದ ನಂತರ ಇವರಿಗೆ ಶ್ರೀ ೧೦೦೮ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳೆಂಬ ನೂತನ ಅಭಿಧಾನವು ಪ್ರಾಪ್ತವಾಯಿತು.

ಇವರು ಧಾರವಾಡ ಜಿಲ್ಲಾ ಹಿರೇಕೆರೂರು ತಾಲ್ಲೂಕು ಮಾಸೂರ ಹಿರೇಮಠದ ಶ್ರೀ ಪರಮೇಶ್ವರಯ್ಯ ಮತ್ತು ಸೌ॥ ರುದ್ರಮ್ಮ ಎಂಬ ದಂಪತಿಗಳ ಪವಿತ್ರಗರ್ಭದಲ್ಲಿ ತಾ॥ ೨೦-೩-೧೯೧೭ರಲ್ಲಿ ಜನಿಸಿದರು. ಇವರು ರಟ್ಟೀಹಳ್ಳಿ, ಕಡೆನಂದಿಹಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು ಹಾಗೂ ಸೊಲ್ಲಾಪುರದ ಶ್ರೀ ಮದ್ವೀರಶೈವ ವಾರದ ಸಂಸ್ಕೃತ ಪಾಠಶಾಲೆಯಲ್ಲಿ ಸಂಸ್ಕೃತ ಶಿಕ್ಷಣವನ್ನು ಮುಗಿಸಿದರು. ಹೆಚ್ಚಿನ ವ್ಯಾಸಂಗಕ್ಕೆ ಕಾಶಿಗೆ ಬಂದು ಅಲ್ಲಿಯ ಅಂದಿನ ರಾಜಕೀಯ ಸಂಸ್ಕೃತ ಮಹಾವಿದ್ಯಾಲಯದ ನ್ಯಾಯಶಾಸ್ತ್ರ ಪ್ರಧಾನ ಅಧ್ಯಾಪಕರಾದ ಪಂ॥ ಶಿವದತ್ತ ಮಿಶ್ರರಿಂದ ನ್ಯಾಯಶಾಸ್ತ್ರವನ್ನು ಹಾಗೂ ಟೀಕಮಣಿ ಸಂಸ್ಕೃತ ಮಹಾವಿದ್ಯಾಲಯದ ಸಾಹಿತ್ಯ ಪ್ರಧಾನಾಧ್ಯಾಪಕರಾದ ಶ್ರೀ ತಾರಾಚರಣ ಭಟ್ಟಾಚಾರ್ಯರಿಂದ ಸಾಹಿತ್ಯಾಧ್ಯಯನವನ್ನು ಮಾಡಿದರು.

ಇವರು ಅಧಿಕಾರ ಸ್ವೀಕರಿಸಿದ ನಂತರ ಪೀಠದ ಸ್ವಾಧೀನದಲ್ಲಿ ಇದ್ದ ಸಾವಿರಾರು ಮನೆಗಳ ಸ್ವಾಮಿತ್ವದ ಬಹು ದೊಡ್ಡ ಆದಾಯವು ೧೯೫೧ರಲ್ಲಿ ಹಾಗೂ ೧೯೫೬ರಲ್ಲಿ, ಹನ್ನೆರಡು ಊರುಗಳ ಜಮೀನ್ದಾರಿಯು ಸರ್ಕಾರಿ ಕಾನೂನಿನ ಪ್ರಕಾರ ಕೈತಪ್ಪಿಹೋಯಿತಲ್ಲದೆ ಹಿಂದಿನಿಂದ ಬಂದ ಮಠದ ಮೇಲಿನ ಲಕ್ಷಾಂತರ ರೂಪಾಯಿಗಳ ಸಾಲದ ಒತ್ತಡ ಏಕಕಾಲಕ್ಕೆ ಎರಗಿ ಬಹಳ ಕಠಿಣತರ ಪ್ರಸಂಗವು ಬಂದೊದಗಿತು. ಇಷ್ಟಾದರೂ ಪೂಜ್ಯರು ಧೈರ್ಯಗೆಡದೇ ಮೂಲ ಪೀಠಾಚಾರ್ಯರನ್ನು ಸ್ಮರಿಸುತ್ತ ಸದ್ಭಕ್ತರ ಸಹಯೋಗ, ಸಹಕಾರಗಳ ಮೂಲಕ ಪೀಠವನ್ನು ಸಂಪೂರ್ಣ ಋಣಮುಕ್ತವನ್ನಾಗಿ ಮಾಡಿ ಪೀಠವನ್ನು ಸ್ವತಂತ್ರಗೊಳಿಸಿದರು.

ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯರು ಮಠದ ಯೋಗಕ್ಷೇಮವನ್ನು ಸುಚಾರುರೂಪವಾಗಿ ನೋಡಿಕೊಳ್ಳುವುದರ ಜೊತೆಗೆ ಮಠದ ಖರ್ಚಿಗೆ ಒಂದು ಸ್ಥಾಯೀ ಉತ್ಪನ್ನವನ್ನು ಮಾಡಬೇಕೆಂಬ ಸದುದ್ದೇಶದಿಂದ ಶ್ರೀ ವಿಶ್ವಾರಾಧ್ಯ ಮಾರ್ಕೆಟ್ ಕಟ್ಟಿಸಿದ್ದಾರೆ. ಇದರಿಂದ ಸಂದಾಯವಾಗುವ ಬಾಡಿಗೆ ಹಣದಲ್ಲಿ ಸಂಸ್ಕೃತ ಹಾಗೂ ಇನ್ನಿತರ ಅನೇಕ ವಿಷಯಗಳ ಅಧ್ಯಯನಕ್ಕಾಗಿ ಆಗಮಿಸಿದ ಸಕಲ ವಿದ್ಯಾರ್ಥಿಗಳಿಗೆ ಉಚಿತವಾದ ವಸತಿ ಹಾಗೂ ಪ್ರಸಾದದ ವ್ಯವಸ್ಥೆ ನಡೆಯುತ್ತಿದೆಯಲ್ಲದೆ ಯಾತ್ರಾರ್ಥಿಗಳಾಗಿ ಬಂದ ಯಾತ್ರಿಕರಿಗೂ ಸಕಲ ವಿಧವಾದ ಸೌಕರ್ಯವನ್ನು ಕಲ್ಪಿಸಿಕೊಡಲಾಗುತ್ತದೆ.

ಪೂಜ್ಯ ಜಗದ್ಗುರುಗಳವರು ಮಹಾರಾಷ್ಟ್ರದ ೨೬ ಜಿಲ್ಲೆಗಳಲ್ಲಿ ಸಂಚರಿಸಿ ವೀರಶೈವ

ಧರ್ಮಜಾಗೃತಿಯನ್ನು ಮಾಡಿದ್ದಾರಲ್ಲದೇ, ಪುಣೆಯಲ್ಲಿ "ವಿಶ್ವಾರಾಧ್ಯ ವಿದ್ಯಾರ್ಥಿ ನಿಲಯ" ಹಾಗೂ ಮಂಗಳವೇಢೆಯಲ್ಲಿ "ಶ್ರೀ ವಿಶ್ವಾರಾಧ್ಯ ಬೋರ್ಡಿಂಗ್"ನ್ನು ಸ್ಥಾಪಿಸಿದ್ದಾರೆ. ಈ ಎರಡು ಸಂಸ್ಥೆಗಳೂ ಕಾಶೀ ಜಂಗಮವಾಡಿಮಠದ ಸಂಪೂರ್ಣ ಸ್ವಾಮಿತ್ವದಲ್ಲಿವೆ. ಇದಲ್ಲದೇ ಔರಂಗಾಬಾದ್ ಹಾಗೂ ನಾಗಪುರಗಳಲ್ಲಿಯ ವೀರಶೈವ ಹಾಸ್ಟೆಲ್‌ಗಳಿಗಾಗಿ ಮಹಾರಾಷ್ಟ್ರದಲ್ಲಿ ಸಂಚರಿಸಿ ವಿಶೇಷ ಧನಸಹಾಯವನ್ನು ಮಾಡಿದ್ದಾರೆ.

ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಸಾಧಿಸಿದ ಇನ್ನೊಂದು ಮಹತ್ವಪೂರ್ಣವಾದ ಸಾಧನೆಯೆಂದರೆ ಕಾಶೀ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ವೇದಾಂತ ವಿಭಾಗದಲ್ಲಿ "ಶಕ್ತಿವಿಶಿಷ್ಟಾದ್ವೈತ ವೇದಾಂತ" ಶಾಖೆಯ ಸ್ಥಾಪನೆ. ೨೦೦ ವರ್ಷಗಳಷ್ಟು ಪ್ರಾಚೀನವಾದ ಈ ಸಂಸ್ಥೆಯಲ್ಲಿ ಭಾರತದ ಎಲ್ಲ ಧರ್ಮಗಳ ಅಧ್ಯಯನವು ನಡೆಯುತ್ತಿದ್ದರೂ ವೀರಶೈವ ದರ್ಶನವಾದ "ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ"ದ ವಿಶ್ವವಿದ್ಯಾಲಯ ಮಟ್ಟದ ಅಧ್ಯಯನವು ನಡೆಯುತ್ತಿರಲಿಲ್ಲ. ಈ ದೊಡ್ಡ ಕೊರತೆಯು ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳ ಕೃಪೆಯಿಂದ ದೂರಾದದ್ದು ವೀರಶೈವರ ಪರಮ ಭಾಗ್ಯವೆಂದೇ ಹೇಳಬೇಕು. ಈ ಮಹತ್ವಪೂರ್ಣವಾದ ಕಾರ್ಯದಲ್ಲಿ ಅದೇ ವಿಶ್ವವಿದ್ಯಾಲಯದ ವೇದಾಂತ ವಿಭಾಗದ ವರಿಷ್ಠ ಸಂಶೋಧಕರಾದ ಡಾ। ಚಂದ್ರಶೇಖರ ಶರ್ಮಾ ಹಿರೇಮಠ ಉರ್ಫ್ ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಅಮರೇಶ್ವರ ಮಠ, ಕೋಟೆಕಲ್ಲು, ಗುಳೇದಗುಡ್ಡ ಇವರ ಪರಿಶ್ರಮವು ಉಲ್ಲೇಖನೀಯವಾಗಿದೆ. (ಈಗ ಅವರೇ ಶ್ರೀ ಕಾಶೀ ಜಗದ್ಗುರುಗಳಾಗಿದ್ದಾರೆ).

೧೯೮೩ರಿಂದ ಪ್ರಾರಂಭವಾದ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ಈ ಶಕ್ತಿವಿಶಿಷ್ಟಾದ್ವೈತ ವೇದಾಂತ ಶಾಖೆಯಲ್ಲಿ ಡಾ। ಚಂದ್ರಶೇಖರ ಶಿವಾಚಾರ್ಯರೇ ತಮ್ಮ ಸಂಶೋಧನೆಯೊಂದಿಗೆ ಶಾಸ್ತ್ರೀ (ಬಿ.ಎ.) ಮತ್ತು ಆಚಾರ್ಯ (ಎಂ.ಎ.) ವರ್ಗದ ವಿದ್ಯಾರ್ಥಿಗಳಿಗೆ ಅಧ್ಯಾಪನ ಕಾರ್ಯವನ್ನೂ ಮಾಡುತ್ತಿದ್ದಾರೆ. ಇವರು ಕರ್ನಾಟಕ ಹಾಗೂ ಮಹಾರಾಷ್ಟ್ರದ ವಿಭಿನ್ನ ಸಂಘಸಂಸ್ಥೆಯವರ ಜೊತೆಗೆ ಸಂಪರ್ಕವನ್ನು ಸಾಧಿಸಿ ವಿದ್ಯಾರ್ಥಿಗಳಿಗೆ ಶಿಷ್ಯವೇತನ (ಸ್ಕಾಲರ್‌ಶಿಪ್) ವ್ಯವಸ್ಥೆಯನ್ನೂ ಮಾಡಿದ್ದಾರೆ.

ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ಗ್ರಂಥ ಪ್ರಕಾಶನದ ಬಗ್ಗೆ ಮಹತ್ವವನ್ನು ನೀಡಿ ಶಕ್ತಿವಿಶಿಷ್ಟಾದ್ವೈತ ವೇದಾಂತ ಪರೀಕ್ಷೆಯ ಶಾಸ್ತ್ರಿ ಮತ್ತು ಆಚಾರ್ಯ ವರ್ಗದ ಪಠ್ಯಪುಸ್ತಕಗಳಾದ ಪ್ರಾಚೀನ ಸಂಸ್ಕೃತ ಗ್ರಂಥಗಳ ಸಮಗ್ರ ಮುದ್ರಣ ಯೋಜನೆಯನ್ನು ಹಮ್ಮಿಕೊಂಡು ಅನೇಕ ಪುಸ್ತಕಗಳನ್ನು ಪ್ರಕಾಶಗೊಳಿಸಿದ್ದಾರೆ.

ಹೀಗೆ ಅನಾದಿಕಾಲದಿಂದ ಕಾಶೀ ಜ್ಞಾನಪೀಠವು ಜಾತಿ-ಮತ-ಪಂಥಗಳ ಭೇದಭಾವವಿಲ್ಲದೇ ಜ್ಞಾನಾರ್ಜನೆಗಾಗಿ ಬಂದ ಸಕಲರಿಗೂ ಅನ್ನಾಶ್ರಯಗಳನ್ನು ಕೊಟ್ಟು ಸಲಹುತ್ತ ಬಂದಿದೆ. ಈ ಜ್ಞಾನಪೀಠದಲ್ಲಿ ಅಧ್ಯಯನ ಮಾಡಿದವರಲ್ಲಿ ಅನೇಕರು ಪಂಚಪೀಠದ ಜಗದ್ಗುರುಗಳೂ, ಚರಪಟ್ಟಾಧಿಕಾರಿಗಳೂ, ನಿರಂಜನಮೂರ್ತಿಗಳೂ, ಶಿವಾನಂದ ಹಾಗೂ ಸಿದ್ಧಾರೂಢ ಸಂಪ್ರದಾಯದ ಮಹಂತರೂ ಮತ್ತು ಶಾಸ್ತ್ರಿಗಳೂ ಆಗಿದ್ದಾರೆ. ಈ ಪೀಠದಲ್ಲಿ ಅಭ್ಯಾಸ ಮಾಡಿಹೋದ ಎಲ್ಲರ ಚರಿತ್ರೆಯನ್ನೂ ಸಂಗ್ರಹಿಸಿ ಕಾಶೀ ಪೀಠದ ಭವ್ಯ ಪರಂಪರೆಯೊಂದಿಗೆ ಮುದ್ರಿಸಿ ಪ್ರಕಾಶಗೊಳಿಸುವುದು ಅವಶ್ಯವಿದೆ. ಇದೀಗ ಪ್ರಸ್ತುತ ಜಗದ್ಗುರುಗಳು ಆ ಕಾರ್ಯವನ್ನು ಕೈಗೆತ್ತಿಕೊಂಡಿದ್ದಾರೆ.

ಶ್ರೀ ಕಾಶಿಯ ಜ್ಞಾನಕೋಶ :

ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ದಿನಾಂಕ ೧೪-೧೧-೧೯೪೮ ರಿಂದ ೨-೧೦-೧೯೮೯ರವರೆಗೆ ಅಂದರೆ ಸುಮಾರು ೪೧ ವರ್ಷಗಳ ಸುದೀರ್ಘ ಕಾಲ ಅಧಿಕಾರದಲ್ಲಿದ್ದು ಕಾಶೀ ಮಹಾಪೀಠದ ಬಹುಮುಖ ವಿಕಾಸವನ್ನು ಮಾಡಿ ಅಪಾರವಾದ ಶಿಷ್ಯ ಸಂಪದವನ್ನು ಸಂಪಾದಿಸಿದರು. ಸರಳ ಸಜ್ಜನಿಕೆಯ ಸಾಕಾರ ಮೂರ್ತಿಗಳಾದ ಮಹಾಸನ್ನಿಧಿಯವರ ವ್ಯಕ್ತಿತ್ವಕ್ಕೆ ಮಾರುಹೋಗದವರೇ ಇಲ್ಲ. ಬಡವ-ಬಲ್ಲಿದರೆಂಬ ಭೇದ ಭಾವವಿಲ್ಲದೆ ಸರ್ವರನ್ನೂ ಶ್ರೀ ಸನ್ನಿಧಿಯವರು ಪ್ರೀತಿಸುತ್ತಿದ್ದರು. ಭಕ್ತರ ಯೋಗಕ್ಷೇಮಗಳನ್ನು ವಿಚಾರಿಸಿಕೊಳ್ಳುವುದರಲ್ಲಿಯೇ ಹೆಚ್ಚು ಗಮನವಿತ್ತ ಶ್ರೀ ಮಹಾಸನ್ನಿಧಿಯವರು ತಮ್ಮ ಆರೋಗ್ಯದ ಕಡೆಗೆ ಸ್ವಲ್ಪ ಅಲಕ್ಷ್ಯ ವಹಿಸಿದರೇನೋ! ಅಂತೆಯೇ ಬರಬರುತ್ತಾ ಅವರ ಶರೀರವು ಅನಾರೋಗ್ಯದ ತವರಾಯಿತು. ಎಪ್ಪತ್ತೆರಡನೆಯ ವಯಸ್ಸಿಗೆ ಬಹಳಷ್ಟು ಅಸ್ವಸ್ಥರೂ, ಅಶಕ್ತರೂ ಆಗಿ ತಮ್ಮ ಮೇಲಿರುವ ಮಹಾಪೀಠದ ಹೊಣೆಯನ್ನು ಯಾರಿಗೆ ವಹಿಸಿಕೊಡಬೇಕು ಎಂದು ಆಲೋಚಿಸುತ್ತ ಕೆಲವು ಕಾಲ ಮಹಾರಾಷ್ಟ್ರದ ಪುಣೆ ನಗರದಲ್ಲಿರುವ ತಮ್ಮ ಖಾಸಾ ಶಾಖಾಮಠದಲ್ಲಿ ವಾಸ್ತವ್ಯ ಮಾಡಿ ಔಷಧೋಪಚಾರ ಮಾಡಿಸಿಕೊಳ್ಳತೊಡಗಿದರು. ಮಹಾಸನ್ನಿಧಿಯವರು ತಮ್ಮ ಉತ್ತರಾಧಿಕಾರಿಯ ಬಗ್ಗೆ ಯೋಚಿಸುವ ಸಂದರ್ಭದಲ್ಲಿ ಅವರ ಸ್ಮೃತಿಪಟಲದಲ್ಲಿ ಬಂದವರೇ ಕಾಶೀಪೀಠದ ವರಿಷ್ಠ ಸಂಶೋಧಕ ವಿದ್ಯಾರ್ಥಿಯಾದ ಕೋಟೆಕಲ್ ಗುಳೇದಗುಡ್ಡ ಅಮರೇಶ್ವರ ಮಠದ ಪಟ್ಟಾಧ್ಯಕ್ಷರಾದ ಶ್ರೀ ಷ.ಬ್ರ.ಡಾ.॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು. ಅಂತೆಯೇ ಮಹಾಸನ್ನಿಧಿಯು ಗುಳೇದಗುಡ್ಡಕ್ಕೆ ಒಂದು ಪತ್ರವನ್ನು ಬರೆದು "ನಿಮ್ಮ ಜೊತೆಗೆ ಕೆಲವೊಂದು ಮಹತ್ವಪೂರ್ಣ ವಿಚಾರವನ್ನು ಕುರಿತು ಸಮಾಲೋಚಿಸಬೇಕಾಗಿದೆ. ಆದ್ದರಿಂದ ನೀವು ಗುಳೇದಗುಡ್ಡದಿಂದ ಕಾಶಿಗೆ ಹೋಗುವಾಗ ಪುಣೆಗೆ ಬಂದು ಶ್ರೀ ಸನ್ನಿಧಿಯ ದರ್ಶನಾಶೀರ್ವಾದ ಪಡೆದುಕೊಂಡು ಹೋಗಬೇಕು. ಗಡಿಬಿಡಿಯಲ್ಲಿ ಬರಬಾರದು. ಹೆಚ್ಚಿನ ಸಮಯ ತೆಗೆದುಕೊಂಡು ಬರಬೇಕು" ಈ ರೀತಿಯಾಗಿ ಮಹಾಸನ್ನಿಧಿಯವರು ಅಪ್ಪಣೆ ದಯಪಾಲಿಸಿದ್ದರು.

ಶ್ರೀ ಸನ್ನಿಧಿಯ ಅಪ್ಪಣೆ ಪ್ರಕಾರ ಡಾ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು ಪುಣೆಗೆ ಹೋಗುವ ಉದ್ದೇಶದಿಂದ ಸೊಲ್ಲಾಪುರಕ್ಕೆ ಬಂದಾಗ ಅಲ್ಲಿಯ ಭಕ್ತಾದಿಗಳು ನವರಾತ್ರಿ ಕಾರ್ಯಕ್ರಮದ ನಿಮಿತ್ತವಾಗಿ ದುರ್ಗಾ ಸಪ್ತಶತಿಯ ಮೇಲೆ ಹತ್ತು ದಿನಗಳವರೆಗೆ ಪ್ರವಚನವನ್ನು ಮಾಡಲೇಬೇಕೆಂಬುದಾಗಿ ಆಗ್ರಹಪಡಿಸಿದರು. ಭಕ್ತರ ಅತಿ ಆಗ್ರಹದ ಮೇರೆಗೆ ಶ್ರೀ ಸ್ವಾಮಿಗಳವರು ಅಲ್ಲಿಯ ಕೃಷಿ ಮಾರುಕಟ್ಟೆಯ ಪ್ರಾಂಗಣದಲ್ಲಿ ಹೊಸದಾಗಿ ನಿರ್ಮಿಸಲ್ಪಟ್ಟ ದೇವಿಮಂದಿರದ ಪರಿಸರದಲ್ಲಿ ಆಶ್ವೀಜ ಶುದ್ಧ ಪ್ರತಿಪದೆಯಂದು ಪ್ರವಚನವನ್ನು ಪ್ರಾರಂಭಿಸಿದರು. ಈ ಕಾರ್ಯಕ್ರಮವು ಎರಡು ದಿನ ಸಾಂಗವಾಗಿ ನೆರವೇರಿತಾದರೂ ಮೂರನೆಯ ದಿನ ಪ್ರಾತಃಕಾಲದಲ್ಲಿ ಕಾಶೀ ಜಗದ್ಗುರು ಶ್ರೀ ವಿಶ್ವೇಶ್ವರ ಶಿವಾಚಾರ್ಯ ಭಗವತ್ಪಾದರು ಪುಣೆ ನಗರದಲ್ಲಿ ಲಿಂಗೈಕ್ಯರಾದರೆಂಬ ವಾರ್ತೆಯು ಸರ್ವತ್ರ ಹಬ್ಬಿ ಭಕ್ತರ ಹೃದಯಕ್ಕೆ ಆಘಾತವನ್ನುಂಟುಮಾಡಿತು. ಈ ವಾರ್ತೆ ತಿಳಿದೊಡನೆ ಸೋಲಾಪುರದ ಭಕ್ತರು ಡಾ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರನ್ನು ಕರೆದುಕೊಂಡು ಪುಣೆ ನಗರಕ್ಕೆ ಧಾವಿಸಿದರು. ಇವರು ಪುಣೆ ನಗರವನ್ನು ತಲುಪುವುದರೊಳಗಾಗಿ

ಮಹಾಸನ್ನಿಧಿಯವರ ಪಾರ್ಥಿವ ಶರೀರವನ್ನು ವೀರಶೈವರತ್ನ ಡಾ॥ನೀಲಕಂಠರಾವ್ ಕಲ್ಯಾಣಿ ಹಾಗೂ ಪುಣೆ ಭಕ್ತರೆಲ್ಲರೂ ಸೇರಿ ಕಿರ್ಲೋಸ್ಕರ್ ಕಂಪನಿಯ ವಿಶೇಷ ವಿಮಾನದ ಮೂಲಕ ಕಾಶೀ ಕ್ಷೇತ್ರಕ್ಕೆ ಕಳುಹಿಸಿಕೊಟ್ಟಿದ್ದರು. ಆಗ ಅನೇಕ ಭಕ್ತರೊಡನೆ ಶ್ರೀ ಸ್ವಾಮಿಗಳು ಕಾಶಿಯನ್ನು ತಲುಪುವಷ್ಟರಲ್ಲಿಯೇ ರಂಭಾಪುರೀ ಪೀಠದ ಶ್ರೀ ಜಗದ್ಗುರು ವೀರರುದ್ರಮುನಿದೇವ ಶಿವಾಚಾರ್ಯ ಭಗವತ್ಪಾದರು ನೆಲಮಂಗಲದಲ್ಲಿ ನಡೆದ ತಮ್ಮ ದಸರಾ ದರ್ಬಾರವನ್ನು ಮೊಟಕುಗೊಳಿಸಿ ವಿಮಾನದಿಂದ ದಯಮಾಡಿಸಿ ತಮ್ಮ ಸಾನ್ನಿಧ್ಯದಲ್ಲಿ ಲಿಂಗೈಕ್ಯ ಕಾಶೀ ಜಗದ್ಗುರುಗಳ ಸಮಾಧಿ ಕ್ರಿಯೆಯನ್ನು ಪೂರ್ಣಗೊಳಿಸಿದ್ದರು. ಹೀಗಾಗಿ ಡಾ॥ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರಿಗೆ ಅಂತ್ಯದರ್ಶನವೂ ಸಹ ಆಗ ದೊರೆಯಲಿಲ್ಲವೆಂಬುದು ಖೇದದ ಸಂಗತಿಯಾಗಿದೆ.

ಕಾಶೀ ಮಹಾಪೀಠದಲ್ಲಿ ಉತ್ತರಾಧಿಕಾರಿಯನ್ನು ಮಾಡುವ ಒಂದು ವಿಶಿಷ್ಟ ಪರಂಪರೆಯನ್ನು ಲಿಂಗೈಕ್ಯ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಭಗವತ್ಪಾದರು ಬರೆದಿಟ್ಟಿದ್ದರು. ಅವರು ಬರೆದಿಟ್ಟ ನಿಯಮಾನುಸಾರವಾಗಿ (೧) ವರ್ತಮಾನ ಪೀಠಾಚಾರ್ಯರು ತಮ್ಮ ಜೀವಿತ ಕಾಲದಲ್ಲಿಯೇ ಯೋಗ್ಯ ಉತ್ತರಾಧಿಕಾರಿಯನ್ನು ಗುರುತಿಸಿ ಆತನಿಗೆ ತಮ್ಮ ಕರಕಮಲಗಳಿಂದಲೇ ಪೀಠಾಧಿಕಾರವನ್ನು ದಯಪಾಲಿಸುವುದು. (೨) ಒಂದುವೇಳೆ ತಮ್ಮ ಜೀವಿತಾವಧಿಯಲ್ಲಿ ಪೀಠಾಧಿಕಾರವನ್ನು ಕೊಡುವ ಅಪೇಕ್ಷೆಯಿರದಿದ್ದರೆ ತಮ್ಮ ಪಶ್ಚಾತ್ ಇಂಥವರೇ ಉತ್ತರಾಧಿಕಾರಿಗಳಾಗಬೇಕೆಂಬುದನ್ನು ಗುಪ್ತವಾಗಿ ಮೃತ್ಯುಪತ್ರ ಮುಖೇನ ಬರೆದಿಡುವುದು. (೩) ಮೇಲಿನ ನಿಯಮಗಳಿಗನುಸಾರವಾಗಿ ಯಾವುದನ್ನೂ ಮಾಡದೇ ಒಂದು ವೇಳೆ ಪೀಠಾಚಾರ್ಯರು ಲಿಂಗೈಕ್ಯರಾದರೆ ಆಗ ಉಳಿದ ಸಮಾನ ಪೀಠಗಳಾದ ರಂಭಾಪುರಿ, ಉಜ್ಜಯಿನಿ, ಹಿಮವತ್ಕೇದಾರ ಹಾಗೂ ಶ್ರೀಶೈಲ ಪೀಠದ ಜಗದ್ಗುರುಗಳವರು ಒಮ್ಮತದಿಂದ ಓರ್ವ ಉತ್ತರಾಧಿಕಾರಿಯನ್ನು ಆಯ್ಕೆಮಾಡಿ ಆತನಿಗೆ ಸರ್ವರೂ ಸೇರಿಕೊಂಡು ಪಟ್ಟಾಭಿಷೇಕವನ್ನು ಮಾಡಬೇಕು.

ಶ್ರೀ ಕಾಶೀ ಪೀಠದಲ್ಲಿ ಹೀಗೆ ಲಿಖಿತವಾದ ಪುರಾವೆ ದೊರೆತ ಕಾರಣ ಸುಮಾರು ಒಂದೂವರೆ ತಿಂಗಳು ಉಂಟಾದ ಅಸ್ಥಿರ ವಾತಾವರಣವನ್ನು ಸುಸ್ಥಿರಗೊಳಿಸಲೋಸುಗ ತತ್ಕಾಲೀನ ಪೀಠಾಚಾರ್ಯರಾದ ಶ್ರೀ ಜಗದ್ಗುರು ವೀರರುದ್ರಮುನಿದೇವ ಶಿವಾಚಾರ್ಯ ಭವತ್ಪಾದರು ರಂಭಾಪುರಿ, ಶ್ರೀ ಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯ ಭಗವತ್ಪಾದರು ಉಜ್ಜಯಿನಿ, ಶ್ರೀ ಜಗದ್ಗುರು ರಾವಲ್ ಸಿದ್ಧೇಶ್ವರಲಿಂಗ ಶಿವಾಚಾರ್ಯ ಭಗವತ್ಪಾದರು ಹಿಮವತ್ಕೇದಾರ ಮತ್ತು ಶ್ರೀ ಜಗದ್ಗುರು ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಭಗವತ್ಪಾದರು ಶ್ರೀಶೈಲ ಈ ನಾಲ್ವರು ಮಹಾಚಾರ್ಯರು ದಿನಾಂಕ ೧೬-೧೧-೧೯೮೯ರಂದು ಶ್ರೀ ಕಾಶೀ ಮಹಾಪೀಠದಲ್ಲಿ ಸಮಾವೇಶಗೊಂಡು ಪರಸ್ಪರ ಸುದೀರ್ಘ ಸಮಾಲೋಚನೆಯನ್ನು ಮಾಡಿ ಒಮ್ಮತದಿಂದ ಡಾ॥ ಚಂದ್ರಶೇಖರ ಶಿವಾಚಾರ್ಯರನ್ನು ಕಾಶೀಪೀಠದ ಉತ್ತರಾಧಿಕಾರಿಯೆಂದು ಘೋಷಿಸಿದರು.

ಮರುದಿನ ದಿನಾಂಕ ೧೭-೧೧-೧೯೮೯ನೆಯ ಶುಕ್ರವಾರದಂದು ನಾಲ್ಕೂ ಪೀಠದ ಮಹಾಚಾರ್ಯರು, ಉಪಸ್ಥಿತರಿರುವ ಶಿವಾಚಾರ್ಯರ ಹಾಗೂ ಭಕ್ತಸ್ತೋಮದ ಸಾಕ್ಷಿಯಲ್ಲಿ ಜಗದ್ಗುರು ಪಟ್ಟಾಭಿಷೇಕ ಮಹೋತ್ಸವವನ್ನು ಪೀಠದ ಕೈಲಾಸ ಮಂಟಪದಲ್ಲಿ ಪರಂಪರಾನುಸಾರವಾಗಿ ಸಕಲ ವಿಧಿ ವಿಧಾನಗಳೊಂದಿಗೆ ನೆರವೇರಿಸಿದರು. ಅಂದು ಶ್ರೀ ೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ಕಾಶೀ ಮಹಾಪೀಠದ ೮೬ನೆಯ ಜಗದ್ಗುರುಗಳಾಗಿ ಅಧಿಕಾರವನ್ನು ವಹಿಸಿಕೊಂಡರು. ಭಕ್ತಸ್ತೋಮದಲ್ಲೆಲ್ಲ ಆನಂದಮಯ ವಾತಾವರಣವು ಸರ್ವತ್ರ ಪಸರಿಸಿತು.

ಪೂಜ್ಯ ಮಹಾಸನ್ನಿಧಿಯವರು ಪೀಠಾಧಿಕಾರವನ್ನು ಸ್ವೀಕರಿಸಿದ ನಂತರ ನಲವತ್ತೆಂಟು ದಿನಗಳ ತಪೋನುಷ್ಠಾನವನ್ನು ಗೈದು ಸರ್ವ ಪೂರ್ವಾಚಾರ್ಯರ ಅನುಗ್ರಹವನ್ನು ಪಡೆದುಕೊಂಡು ದೇಶಮಧ್ಯದಲ್ಲಿ ಧರ್ಮದ ದಂಡಯಾತ್ರೆಯನ್ನು ಪ್ರಾರಂಭಿಸಿದರು.

ಇವರು ನಮ್ಮ ಜ್ಞಾನಪೀಠಾಧೀಶ್ವರರು :

ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ಇಂದಿನ ಬಾಗಿಲುಕೋಟೆ ಜಿಲ್ಲಾ ಬದಾಮಿ ತಾಲೂಕಿನ ತೋಗುಣಸಿ ಗ್ರಾಮದ ವೇ. ಮೂ॥ ಸಿದ್ಧಯ್ಯ ಪುರಾಣಮಠ ಹಾಗೂ ಸೌ॥ ಸಾವಂತ್ರಮ್ಮನವರ ದ್ವಿತೀಯ ಪುತ್ರರಾಗಿ ದಿನಾಂಕ ೨೮-೮-೧೯೪೭ರಂದು ತಾಯಿಯ ತವರೂರಾದ ನರಗುಂದ ತಾಲೂಕಿನ ರಡ್ಡೇರನಾಗನೂರು ಬೃಹನ್ಮಠದಲ್ಲಿ ಜನಿಸಿದರು. ನಾಗನೂರು ಬೃಹನ್ಮಠದ ಲಿಂ॥ ಪಂಡಿತ ಕಾಶೀನಾಥ ಶಾಸ್ತ್ರಿಗಳವರು ಇಂದಿನ ಜಗದ್ಗುರುಗಳವರಿಗೆ ಪೂರ್ವಾಶ್ರಮದ ಸೋದರಮಾವನವರು. ಹೀಗೆ ಶ್ರೀ ಸನ್ನಿಧಿಯವರ ಪೂರ್ವಾಶ್ರಮದ ಮಾತೃಕುಲವು ಆನುವಂಶಿಕ ಪಾಂಡಿತ್ಯ ಪರಂಪರೆಯನ್ನು ಹೊಂದಿದೆ. ಶ್ರೀ ಮಹಾಸನ್ನಿಧಿಯವರ ಪೂರ್ವಾಶ್ರಮದ ತಂದೆಯ ತಂದೆಯವರಾದ ಲಿಂ॥ ವೇ॥ ವಿರೂಪಾಕ್ಷ ಶಾಸ್ತ್ರಿಗಳವರೂ ಸಹ ಸಂಸ್ಕೃತ ಪ್ರಕಾಂಡ ಪಂಡಿತರಾಗಿದ್ದರು. ಹೀಗೆ ಶ್ರೀ ಸನ್ನಿಧಿಯವರ ಪೂರ್ವಾಶ್ರಮದ ಉಭಯ ವಂಶಗಳು ಸಂಸ್ಕೃತ ಪಾಂಡಿತ್ಯ ಪರಂಪರೆಯನ್ನು ಹೊಂದಿದಂಥವುಗಳಾಗಿವೆ.

ಬಾಲ್ಯದಲ್ಲಿ ಇವರಿಗೆ ಶೇಖರಯ್ಯ ಎಂಬುದಾಗಿ ನಾಮಕರಣ ಮಾಡಲಾಯಿತು. ಪ್ರಾಥಮಿಕ ನಾಲ್ಕನೆಯ ಇಯತ್ತೆವರೆಗೆ ಇವರು ತಮ್ಮ ಮೂಲಗ್ರಾಮವಾದ ತೋಗುಣಸಿಯಲ್ಲಿ ಅಭ್ಯಾಸವನ್ನು ಮುಗಿಸಿದರು. ಹೆಚ್ಚಿನ ಅಭ್ಯಾಸಕ್ಕಾಗಿ ಇವರನ್ನು ಇನ್ನೊಬ್ಬ ಸೋದರಮಾವನವರಾದ ವೇ. ಸಿದ್ಧಲಿಂಗಯ್ಯನವರು ಬ್ಯಾಡಗಿಗೆ ಕರೆದುಕೊಂಡು ಹೋದರು. ಅಲ್ಲಿ ಎಂಟನೆಯ ವರ್ಗದವರೆಗೆ ಅಭ್ಯಾಸವನ್ನು ಮುಗಿಸಿ ಪುನಃ ತೋಗುಣಸಿಗೆ ಆಗಮಿಸಿದರು. ನಂತರ ಇವರ ತಂದೆಯವರಾದ ಸಿದ್ಧಯ್ಯನವರು ಗುಳೇದಗುಡ್ಡದ ಮುನ್ಸಿಪಲ್ ಹೈಸ್ಕೂಲಿನಲ್ಲಿ ಪ್ರವೇಶವನ್ನು ಮಾಡಿಸಿ ವಸತಿ ಹಾಗೂ ಅಭ್ಯಾಸದ ಅನುಕೂಲತೆಗಾಗಿ ಸಮೀಪದ ಅಮರೇಶ್ವರ ಮಠದಲ್ಲಿ ಇವರನ್ನು ಇರಿಸಿದರು. ಒಂದು ವರ್ಷದವರೆಗೆ ಆ ಮಠದ ಶ್ರೀ ಷ.ಬ್ರ. ಅಮರೇಶ್ವರ ಶಿವಾಚಾರ್ಯ ಸ್ವಾಮಿಗಳವರ ಕೃಪಾಛತ್ರದಲ್ಲಿ ಮಾಧ್ಯಮಿಕ ಶಾಲಾ ಅಭ್ಯಾಸವನ್ನು ಮಾಡತೊಡಗಿದರು. ತಮ್ಮ ನಡೆ, ನುಡಿ, ವಿನಯಾದಿ ಗುಣಗಳಿಂದ ಅಮರೇಶ್ವರ ಸ್ವಾಮಿಗಳವರ ಆತ್ಮೀಯ ಶಿಷ್ಯರಾದರು. ಆಗಲೇ ಎಂಭತ್ತು ವರ್ಷ ವಯಸ್ಸಿನವರಾಗಿದ್ದ ಅಮರೇಶ್ವರ ಸ್ವಾಮಿಗಳವರು ಬಾಲಕನ ಭವಿಷ್ಯವನ್ನು ಅರಿತವರಾಗಿದ್ದರೇನೋ! ಅಂತೆಯೇ ಇವರ ತಂದೆತಾಯಿಗಳ ಒಪ್ಪಿಗೆಯನ್ನು ಪಡೆದು ೧೯೬೩ರಲ್ಲಿ ಶೇಖರಯ್ಯನವರನ್ನು ಮೃತ್ಯುಪತ್ರ ಮುಖೇನ ತಮ್ಮ ಮಠದ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡು ಬಾಲಕನಿಗೆ ಮಂತ್ರೋಪದೇಶವನ್ನು ಮಾಡಿ, "ಚಂದ್ರಶೇಖರಯ್ಯ" ಎಂಬುದಾಗಿ ನಾಮಕರಣವನ್ನು ಮಾಡಿದರು. ವೇದಾಂತ, ಆಯುರ್ವೇದ

ಮತ್ತು ಜ್ಯೋತಿಷ್ಯ ಶಾಸ್ತ್ರದಲ್ಲಿ ಅಪಾರ ಅನುಭವವನ್ನು ಹೊಂದಿದ್ದ ಶ್ರೀ ಅಮರೇಶ್ವರ ಸ್ವಾಮಿಗಳವರು ಚಂದ್ರಶೇಖರಯ್ಯನಿಗೆ ಸಂಸ್ಕೃತಾಭ್ಯಾಸವನ್ನು ಮಾಡಿಸುವ ಉದ್ದೇಶದಿಂದ ಸೊಲ್ಲಾಪುರದ ಶ್ರೀಮದ್ವೀರಶೈವ ಗುರುಕುಲ (ಹೊಟಗಿಮಠ) ದಲ್ಲಿ ೧೯೬೩ರಲ್ಲಿ ಗುರುಪೌರ್ಣಿಮೆಯ ದಿನ ಪ್ರವೇಶವನ್ನು ಮಾಡಿಸಿದರು. ಆ ಗುರುಕುಲದಲ್ಲಿ ಅನುಗೊಂಡ ಶಾಲಾ ಮಠದ ಶ್ರೀ ವೇ.ಮೂ. ಗಂಗಾಧರ ಶಾಸ್ತ್ರಿಗಳವರು ಪ್ರಧಾನಾಧ್ಯಾಪಕರಾಗಿದ್ದರು. ಅವರು ಗುರುಕುಲದಲ್ಲಿ ಚಂದ್ರಶೇಖರಯ್ಯನಿಗೆ ಪ್ರವೇಶವನ್ನು ಕೊಡುವುದರ ಜೊತೆಗೆ ಇವರಿಗೆ 'ಚಂದ್ರಶೇಖರ ಶರ್ಮ' ಎಂಬುದಾಗಿ ನಾಮಕರಣ ಮಾಡಿದರು. ೧೯೬೩ರಿಂದ ೧೯೬೯ರವರೆಗಿನ ಆರು ವರ್ಷದ ಕಾಲಾವಧಿಯಲ್ಲಿ ಚಂದ್ರಶೇಖರ ಶರ್ಮಾ ಇವರು ಕಲಕತ್ತಾದ ವಂಗೀಯ ಸಂಸ್ಕೃತ ಶಿಕ್ಷಾ ಪರಿಷತ್ತಿನ 'ಕಾವ್ಯ ಆದ್ಯ', 'ಕಾವ್ಯ ಮಧ್ಯಮ' ಮತ್ತು 'ಕಾವ್ಯ ತೀರ್ಥ' ಪರೀಕ್ಷೆಗಳನ್ನು ಉತ್ತಮ ಶ್ರೇಣಿಯಲ್ಲಿ ಪಾಸಾದರು. ಸೊಲ್ಲಾಪುರದಲ್ಲಿ ಇವರು ಅಭ್ಯಾಸವನ್ನು ಮಾಡುತ್ತಿರುವಾಗ ಅಚಲೇರಿಯ ವೇ.ಮೂ. ಶರಣಯ್ಯ ಶಾಸ್ತ್ರಿಗಳವರಿಂದಲೂ ಸಹ ವ್ಯಾಕರಣದ ಕೆಲವು ಪಾಠಗಳನ್ನು ಹೇಳಿಸಿಕೊಳ್ಳುತ್ತಿದ್ದರು.

ಶ್ರೀ ಜಗದ್ಗುರು – ಗುರುಕಾರುಣ್ಯ ಃ

ಶ್ರೀ ಚಂದ್ರಶೇಖರ ಶರ್ಮ ಇವರು ಹೊಟಗಿಮಠದಲ್ಲಿ ಇದ್ದು ಕಾವ್ಯತೀರ್ಥ ಪರೀಕ್ಷೆಯ ಅಭ್ಯಾಸವನ್ನು ಮಾಡುತ್ತಿರುವಾಗ ಕಾಶೀ ಮಹಾಪೀಠದ ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಸೊಲ್ಲಾಪುರದ ಗುರುಪೀಠಕ್ಕೆ ದಯಮಾಡಿಸಿದ್ದರು. ಆಗ ಇವರು ಸನ್ನಿಧಿಯ ದರ್ಶನಕ್ಕೆ ಹೋದಾಗ ಬಾಲಕನ ಅಭ್ಯಾಸಾದಿಗಳ ಬಗ್ಗೆ ತಿಳಿದುಕೊಂಡು ಸನ್ನಿಧಿಯವರು ಉನ್ನತ ವ್ಯಾಸಂಗಕ್ಕಾಗಿ ಕಾಶಿಗೆ ಬರಬೇಕೆಂದು ಆಶೀರ್ವದಿಸಿದರು. ಚಂದ್ರಶೇಖರ ಶರ್ಮಾ ಇವರು ಕಾವ್ಯತೀರ್ಥ ಪರೀಕ್ಷೆಯನ್ನು ಮುಗಿಸಿ ದಿನಾಂಕ ೧೪-೫-೧೯೬೯ರಂದು ಮರಳಿ ಸೊಲ್ಲಾಪುರಕ್ಕೆ ಬಂದ ದಿನವೇ ಅಮರೇಶ್ವರ ಸ್ವಾಮಿಗಳವರು ಹುಬ್ಬಳ್ಳಿಯಲ್ಲಿ ಲಿಂಗೈಕ್ಯರಾದರೆಂಬ ತಂತಿ ಸಂದೇಶವು ತಲುಪಿತು. ಆಗ ಸೊಲ್ಲಾಪುರದ ಭಕ್ತರೊಂದಿಗೆ ಇವರು ಗುಳೇದಗುಡ್ಡವನ್ನು ತಲುಪುವುದರೊಳಗಾಗಿ ಲಿಂ॥ ಅಮರೇಶ್ವರ ಸ್ವಾಮಿಗಳವರ ಪಾರ್ಥಿವ ಶರೀರವನ್ನು ಗುಳೇದಗುಡ್ಡಕ್ಕೆ ತೆಗೆದುಕೊಂಡು ಬಂದಿದ್ದರು. ಅಮರೇಶ್ವರ ಮಠದಲ್ಲಿ ಪೂರ್ವದಲ್ಲಿಯೇ ತಯಾರಿಸಲ್ಪಟ್ಟ ಕ್ರಿಯಾಸಮಾಧಿಯಲ್ಲಿ ಬನ್ನೂರಿನ ಚಿಕ್ಕಮಠದ ಶ್ರೀ ಷ.ಬ್ರ. ಚೆನ್ನಮಲ್ಲ ಶಿವಾಚಾರ್ಯ ಸ್ವಾಮಿಗಳವರ ನೇತೃತ್ವದಲ್ಲಿ ವಿಧಿಪೂರ್ವಕ ಅಂತ್ಯಕ್ರಿಯೆಯನ್ನು ನೆರವೇರಿಸಲಾಯಿತು.

ಈ ಕ್ರಿಯಾ ಸಮಾಧಿಯ ಸಂದರ್ಭದಲ್ಲಿ ಸೇರಿದ ಸ್ವಾಮಿಗಳು ಹಾಗೂ ಭಕ್ತರೆಲ್ಲ ಒಂದು ವರ್ಷದೊಳಗಾಗಿ ಮರಿದೇವರ ಪಟ್ಟಾಭಿಷೇಕವನ್ನು ನೆರವೇರಿಸಿ ಉನ್ನತ ಅಭ್ಯಾಸಕ್ಕಾಗಿ ಇವರನ್ನು ಕಾಶಿಗೆ ಕಳುಹಿಸಿಕೊಡಬೇಕೆಂಬುದಾಗಿ ನಿರ್ಣಯಿಸಿದರು. ಈ ನಿರ್ಣಯದ ಪ್ರಕಾರ ೧೯೭೦ನೇ ಇಸ್ವಿಯ ವೈಶಾಖ ಮಾಸ ಕೃಷ್ಣ ಪಕ್ಷದ ದ್ವಾದಶಿ ತಿಥಿಯಂದು ಹುಬ್ಬಳ್ಳಿ ಹನ್ನೆರಡು ಮಠದ ಶ್ರೀ ಷ.ಬ್ರ. ಮಡಿವಾಳ ಶಿವಾಚಾರ್ಯರಿಂದ ವಿಧಿವತ್ತಾಗಿ ಪಟ್ಟಾಭಿಷೇಕ ಕಾರ್ಯಕ್ರಮವನ್ನು ನೆರವೇರಿಸಿದರು. ಆಗ ಇವರಿಗೆ ಶ್ರೀ ಷ.ಬ್ರ. ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳೆಂಬ ನಾಮಕರಣವನ್ನು ಮಾಡಲಾಯಿತು.

ಜ್ಞಾನೋನ್ನತಿಯತ್ತ ಗಮನ ಃ

೧೯೭೦ನೆಯ ಇಸ್ವಿಯಲ್ಲಿ ಅಮರೇಶ್ವರಮಠದ ಪಟ್ಟಾಧಿಕಾರವನ್ನು ಸ್ವೀಕರಿಸಿದ ಸ್ವಾಮಿಗಳವರು ಕಾಶೀ ಮಹಾಸನ್ನಿಧಿಗೆ ಪತ್ರಮುಖೇನ ಅರಿಕೆ ಮಾಡಿಕೊಂಡು ಸನ್ನಿಧಿಯ ಅಪ್ಪಣೆ ಪಡೆದು ಕಾಶೀ ನಗರಿಗೆ ಆಗಮಿಸಿದರು. ಶ್ರೀಮಹಾಪೀಠದಲ್ಲಿಯ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದಲ್ಲಿ ಆಶ್ರಯವನ್ನು ಪಡೆದರು. ಕಾಶಿಯಲ್ಲಿ ಸುಪ್ರಸಿದ್ಧವಾಗಿರುವ ಸಂಪೂರ್ಣಾನಂದ ಸಂಸ್ಕೃತ ವಿಶ್ವಾವಿದ್ಯಾಲಯದ ವೇದಾಂತ ವಿಭಾಗದ ಆಚಾರ್ಯ ವರ್ಗದಲ್ಲಿ ಪ್ರವೇಶವನ್ನು ಪಡೆದು ಅಭ್ಯಾಸವನ್ನು ಮಾಡತೊಡಗಿದರು.

ಚಿನ್ನಕ್ಕೆ ಚಿನ್ನ ಃ

ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳವರು ೧೯೭೦ನೇಯ ಇಸ್ವಿಯಿಂದ ೧೯೭೩ರವರೆಗೆ ಮೂರು ವರ್ಷಗಳ ಕಾಲ ವೇದಾಂತಾಚಾರ್ಯದ ಅಭ್ಯಾಸವನ್ನು ಮಾಡಿ ಮೂರನೆಯ ವರ್ಷದಲ್ಲಿ ವಿಶ್ವವಿದ್ಯಾಲಯಕ್ಕೆ ಪ್ರಥಮ ರ್‍ಯಾಂಕಿನಲ್ಲಿ ಪಾಸಾಗಿ ಸಂಪೂರ್ಣಾನಂದ ಸ್ವರ್ಣಪದಕ, ಸ್ವಾಮಿ ವಿವೇಕಾನಂದ ಸ್ವರ್ಣಪದಕ ಹಾಗೂ ಅನ್ನದಾಪ್ರಸಾದ ಮುಖರ್ಜಿ ಸ್ವರ್ಣಪದಕಗಳೆಂಬ ಮೂರು ಚಿನ್ನದ ಪದಕಗಳನ್ನು ಪಡೆದು ವೇದಾಂತ ವಿಭಾಗಕ್ಕೆ ಕೀರ್ತಿಯನ್ನು ತಂದುಕೊಟ್ಟರಲ್ಲದೆ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದ ಹೆಗ್ಗಳಿಕೆ ಹೆಚ್ಚಿಸಿದರು. ಶ್ರೀ ಸ್ವಾಮಿಗಳವರು ಕಲ್ಕತ್ತಾದ ವಂಗೀಯ ಸಂಸ್ಕೃತ ಶಿಕ್ಷಾ ಪರಿಷತ್ತಿನ "ಸರ್ವದರ್ಶನತೀರ್ಥ" ಪರೀಕ್ಷೆಯನ್ನೂ ಸಹ ಪ್ರಥಮ ರ್‍ಯಾಂಕಿನಲ್ಲಿ ಪಾಸಾಗಿ ಪಶ್ಚಿಮ ಬಂಗಾಳ ಸರಕಾರದ ಅಂದಿನ ರಾಜ್ಯಪಾಲರಾಗಿದ್ದ ನೂರುಲ್ ಹಸನ್‌ರವರಿಂದ 'ಶರದಿಂದುಕುಮಾರ ಸ್ವರ್ಣಪದಕ'ವನ್ನೂ ಪಡೆದು ಕೀರ್ತಿಯ ಕ್ಷಿತಿಜವನ್ನು ಹೆಚ್ಚಿಸಿಕೊಂಡರು. ಇದೂ ಅಲ್ಲದೇ ೧೯೭೩ನೆಯ ಇಸ್ವಿಯಲ್ಲಿ ಕೇರಳದ ಗುರುವಾಯೂರಿನಲ್ಲಿ ನಡೆದ ಅಖಿಲ ಭಾರತ ಸಂಸ್ಕೃತ ಆಶುಭಾಷಣ ಸ್ಪರ್ಧೆಯಲ್ಲಿ ಉತ್ತರ ಪ್ರದೇಶದ ಪ್ರತಿನಿಧಿಗಳಾಗಿ ಪಾಲುಗೊಂಡು ಅಲ್ಲಿಯೂ ಸಹ ವೇದಾಂತ ವಿಷಯದಲ್ಲಿ ಪ್ರಥಮ ಪುರಸ್ಕಾರವನ್ನು ಪಡೆದು ಉತ್ತರ ಪ್ರದೇಶಕ್ಕೆ ಗೌರವವನ್ನು ತಂದುಕೊಟ್ಟರು. ಹೀಗೆ ಅವರ ವಿದ್ಯಾರ್ಥಿ ಜೀವನದ ಸುವರ್ಣ ಸಮಯವು ಸ್ವರ್ಣಮಯವಾಯಿತು, ಚಿನ್ನಕ್ಕೆ ಕುಂದಣವಿಟ್ಟಂತಾಯಿತು.

ಜ್ಞಾನದ ಗೌರೀಶಂಕರ ಶಿಖರ ಃ

ವೇದಾಂತಾಚಾರ್ಯ ಪರೀಕ್ಷೆಯನ್ನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಸ್ವಾಮಿಗಳವರು ಶ್ರೀ ಕಾಶೀ ಜಗದ್ಗುರುಗಳವರ ಅಪ್ಪಣೆಯ ಮೇರೆಗೆ 'ಶ್ರೀ ಸಿದ್ಧಾಂತ ಶಿಖಾಮಣಿ' ಹಾಗೂ 'ಷಡ್‌ದರ್ಶನಗಳು' ಇವುಗಳ ತೌಲನಿಕ ಅಧ್ಯಯನ ಎಂಬ ವಿಷಯವನ್ನು ಕುರಿತು ಸಂಶೋಧನೆಯನ್ನು ಮಾಡುವ ಉದ್ದೇಶದಿಂದ ೧೯೭೪ರಲ್ಲಿ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ವೇದಾಂತ ವಿಭಾಗಾಧ್ಯಕ್ಷರಾದ ಡಾ॥ ದೇವಸ್ವರೂಪ ಮಿಶ್ರಾ ಅವರ ಮಾರ್ಗದರ್ಶನದಲ್ಲಿ ಪಂಜೀಕರಣ (ರಿಜಿಸ್ಟ್ರೇಶನ್)ವನ್ನು ಮಾಡಿಸಿದರು. ಮುಂದೆ ಸತತವಾಗಿ ಏಳು ವರ್ಷಗಳ ಕಾಲ ಸಂಶೋಧನಾಧ್ಯಯವನ್ನು ಮಾಡಿ ಐದುನೂರು ಪುಟಗಳ ಶೋಧ ಪ್ರಬಂಧವನ್ನು ಸಂಸ್ಕೃತ ಭಾಷೆಯಲ್ಲಿ ಬರೆದು ೧೯೮೦ರಲ್ಲಿ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದರು. ಮುಂದೆ ಒಂದು ವರ್ಷದ ಕಾಲಾವಧಿಯಲ್ಲಿ ಅದರ ಪರೀಕ್ಷೆ ಹಾಗೂ ಮೌಖಿಕ ಪರೀಕ್ಷೆ

ಪೂರೈಸಿ ೧೯೮೧ ರಲ್ಲಿ ಆ ಪ್ರಬಂಧಕ್ಕೆ ವಿದ್ಯಾವಾರಿಧಿ (ಪಿಎಚ್.ಡಿ) ಉಪಾಧಿ ಪ್ರಾಪ್ತವಾಯಿತು.

ಸಿದ್ಧಾಂತ ಶಿಖಾಮಣಿಯ ಮೇಲೆ ಶೋಧ ಪ್ರಬಂಧವನ್ನು ಮುಗಿಸಿ ಶ್ರೀಗಳವರು ಇನ್ನೇನು ಮರಳಿ ಗುಳೇದಗುಡ್ಡಕ್ಕೆ ಹೋಗಬೇಕೆನ್ನುವ ವಿಚಾರದಲ್ಲಿದ್ದಾಗ ಶ್ರೀ ಕಾಶೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು, ಡಾ॥ ಚಂದ್ರಶೇಖರ ಶಿವಾಚಾರ್ಯರನ್ನು ಕರೆಯಿಸಿ ನಿಮಗೆ ಅಭ್ಯಾಸದಲ್ಲಿ ಅಭಿರುಚಿ ಹೆಚ್ಚು ಇದೆ. ಕಾರಣ ಅಭ್ಯಾಸವನ್ನು ನಿಲ್ಲಿಸಬೇಡಿ. ಇನ್ನೂ ಹೆಚ್ಚಿನ ಸಂಶೋಧನಾ ಕಾರ್ಯವನ್ನು ಮಾಡಬೇಕೆಂಬುದಾಗಿ ಪುನಃ ಆಜ್ಞಾಪಿಸಿದರು. ಮಹಾಸನ್ನಿಧಿಯ ಆಜ್ಞೆಯನ್ನು ಶಿರಸಾ ಮಾನ್ಯ ಮಾಡಿದ ಡಾ॥ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಪುನಃ ೧೯೮೨ನೆಯ ಇಸ್ವಿಯಲ್ಲಿ ವಿದ್ಯಾವಾಚಸ್ಪತಿ ಉಪಾಧಿಗಾಗಿ ಅದೇ ಸಂಪೂರ್ಣಾನಂದ ಸಂಸ್ಕೃತ ವಿಶ್ವವಿದ್ಯಾಲಯದ ವೇದಾಂತ ವಿಭಾಗಾಧ್ಯಕ್ಷರಾದ ಡಾ॥ ದೇವಸ್ವರೂಪ ಮಿಶ್ರಾರವರ ಮಾರ್ಗದರ್ಶನದಲ್ಲಿ 'ಶಕ್ತಿ ವಿಶಿಷ್ಟಾದ್ವೈತ ತತ್ತ್ವತ್ರಯ ವಿಮರ್ಶೆ' ಎಂಬ ವಿಷಯದ ಮೇಲೆ ಉನ್ನತ ಶೋಧ ವ್ಯಾಸಂಗವನ್ನು ಮಾಡತೊಡಗಿದರು. ಶ್ರೀ ಸ್ವಾಮಿಗಳವರು ಸುಮಾರು ಆರು ವರ್ಷಗಳ ಕಾಲ ಆಳವಾದ ಅಧ್ಯಯನ ನಡೆಸಿ, ಶೋಧ ಪ್ರಬಂಧವನ್ನು ತಯಾರಿಸಿ ೧೯೮೮ರಲ್ಲಿ ಅದನ್ನೂ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದರು. ಮುಂದೆ ೧೯೮೯ರಲ್ಲಿ ಇವರು ಜಗದ್ಗುರು ಪಟ್ಟಾಭಿಷೇಕವನ್ನು ವಹಿಸಿಕೊಂಡ ನಂತರ 'ವಿದ್ಯಾವಾಚಸ್ಪತಿ' (ಡಿ.ಲಿಟ್) ಎಂಬ ಉಪಾಧಿಯು ಪ್ರಾಪ್ತವಾಯಿತು. ವಿಶ್ವವಿದ್ಯಾಲಯದಿಂದ ಶೋಧ ಪ್ರಬಂಧಕ್ಕಾಗಿ ವಿದ್ಯಾವಾಚಸ್ಪತಿಯೆಂಬ ಉಪಾಧಿಯನ್ನು ಪಡೆದು ಏಕಮೇವ ವೀರಶೈವ ಜಗದ್ಗುರುಗಳೆಂಬ ಕೀರ್ತಿಗೆ ಪಾತ್ರರಾದರು.

ಜಗದ್ಗುರುಗಳ ದೂರದೃಷ್ಟಿ – ಸೃಷ್ಟಿ ಃ

ಕಾಶೀ ಮಹಾಪೀಠದ ಎಂಭತ್ತಾರನೆಯ ಪೀಠಾಧ್ಯಕ್ಷರಾದ ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ೧೯೮೯ರಲ್ಲಿ ಪೀಠಾರೋಹಣಗೈದ ನಂತರ ಧಾರ್ಮಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ವಿಕಾಸದ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಕ್ರಮವಾಗಿ ಅವುಗಳನ್ನು ಸಾಧಿಸುತ್ತ ಬಂದಿದ್ದಾರೆ. ಪೂಜ್ಯ ಸನ್ನಿಧಿಯವರು ಪೀಠಾರೋಹಣ ಮಾಡಿದ ಕೆಲವೇ ದಿನಗಳಲ್ಲಿ ಶ್ರೀ ಸಿದ್ಧಾಂತ ಶಿಖಾಮಣಿಯ ಮರಾಠಿ ಅನುವಾದವನ್ನು ಮಾಡಿಸಿ ಅದನ್ನು ಸ್ವತಃ ತಾವೇ ಸಂಪಾದಿಸಿ ಸೊಲ್ಲಾಪುರದ ಸಾಹಿತ್ಯ ಸಂಶೋಧನಾ ಮಂಡಳದ ವತಿಯಿಂದ ೧೯೯೦ರಲ್ಲಿ ಪ್ರಕಾಶನಗೊಳಿಸಿದರು. ಈ ಗ್ರಂಥದ ಮರಾಠಿ ಅನುವಾದವನ್ನು ಗುಲ್ಬರ್ಗಾದ ಡಾ॥ ಚಂದ್ರಶೇಖರ ಕಪಾಳೆ, ಸೊಲ್ಲಾಪುರದ ವೇ॥ ಶರಣಯ್ಯ ಶಾಸ್ತ್ರಿ ಅಚಲೇರಿ ಹಾಗೂ ಶೇ.ದೇ. ಪಸಾರಕರ ಎಂಬ ಮೂವರು ವಿದ್ವಾಂಸರು ಪೂರೈಸಿದ್ದಾರೆ. ಸೊಲ್ಲಾಪುರದಲ್ಲಿ ಆನೆಯ ಮೇಲೆ ಅಂಬಾರಿಯಲ್ಲಿರಿಸಿ ಈ ಗ್ರಂಥೋತ್ಸವವನ್ನು ಮಾಡಿ ಅದರ ಬಿಡುಗಡೆಯನ್ನು ಮಾಡಲಾಯಿತು. ವಾರದ ಮಲ್ಲಪ್ಪನವರು ೧೯೦೫ನೆಯ ಇಸ್ವಿಯಲ್ಲಿ ಸಂಕ್ಷಿಪ್ತ ಮರಾಠಿ ಅನುವಾದದೊಂದಿಗೆ ಇದನ್ನು ಪ್ರಕಾಶನಗೊಳಿಸಿದ್ದರು. ಅನಂತರ ಇದರ ನವೀನ ಸಂಸ್ಕರಣಗಳೇ ಆಗಿರಲಿಲ್ಲ. ಅದರ ಕೊರತೆಯನ್ನು ಶ್ರೀ ಮಹಾಸನ್ನಿಧಿಯವರು ಮರಾಠಿ ವಿದ್ವಾಂಸರ ಸಹಾಯದಿಂದ ನಿವಾರಿಸಿ ಸಮಾಜಕ್ಕೆ ಲೋಕಕಲ್ಯಾಣಕ್ಕಾಗಿ ಬಹುದೊಡ್ಡ ಕೊಡುಗೆಯನ್ನು ನೀಡಿದ್ದಾರೆ.

ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ ಃ

ಕಾಶೀ ಜಗದ್ಗುರುಗಳವರು ದಿನಾಂಕ ೨೦–೮–೧೯೯೩ರಂದು ಅಧಿಕ ಮಾಸದ ಅನುಷ್ಠಾನದ ನಿಮಿತ್ತವಾಗಿ ಪ್ರಯಾಗ ಕ್ಷೇತ್ರದ ಜಂಗಮವಾಡಿ ಮಹಾಮಠದಲ್ಲಿ ಜನಕಲ್ಯಾಣಾರ್ಥವಾಗಿ "ಶ್ರೀ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನ"ವೆಂಬ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಪ್ರಧಾನ ಕಾರ್ಯಾಲಯವು ಕಾಶೀ ಜಂಗಮವಾಡಿಮಠದಲ್ಲಿದ್ದು ಇದರ ವ್ಯಾಪ್ತಿಯು ಸಂಪೂರ್ಣ ಭಾರತದಲ್ಲಿ ಪಸರಿಸಿರುವುದಾಗಿದೆ. ಈ ಸಂಸ್ಥೆಯ ಅಡಿಯಲ್ಲಿ ಅನೇಕ ಶಾಖೋಪಶಾಖೆಗಳು ಇಂದು ಕಾರ್ಯನಿರತವಾಗಿವೆ. ಇದರ ಒಂದು ಪ್ರಧಾನ ಶಾಖೆ "ಶೈವಭಾರತಿ ಶೋಧ ಪ್ರತಿಷ್ಠಾನ"ವೆಂಬ ಹೆಸರಿನ ಸಂಶೋಧನಾ ಸಂಸ್ಥೆಯು ಕಾಶೀ ಜಂಗಮವಾಡಿಮಠದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದೆ. ಈ ಶೋಧ ಸಂಸ್ಥಾನಕ್ಕೆ ಹೊಸದಿಲ್ಲಿಯಲ್ಲಿರುವ ರಾಷ್ಟ್ರೀಯ ಸಂಸ್ಕೃತ ಸಂಸ್ಥಾನದ ಮಾನ್ಯತೆ ದೊರೆತಿದ್ದು ಶೋಧ ವಿದ್ಯಾರ್ಥಿಗಳಿಗೆ ಇಲ್ಲಿ ಶಿವಾಗಮಗಳನ್ನು ಕುರಿತು ಸಂಶೋಧನೆಯನ್ನು ಮಾಡಲು ಅವಕಾಶವನ್ನು ಕೊಡಲಾಗಿದೆ. ಸಂಶೋಧಕ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳು ಐದುನೂರು ರೂಪಾಯಿಗಳ ಶಿಷ್ಯವೇತನವನ್ನು ಸಹ ಕೊಡಲಾಗುತ್ತದೆ.

ಈ ಶೈವಭಾರತಿ ಶೋಧ ಪ್ರತಿಷ್ಠಾನದಿಂದ ಈಗಾಗಲೇ ಅನೇಕ ಶಿವಾಗಮಗಳು ಹಾಗೂ ಇತರ ಗ್ರಂಥಗಳೂ ಸೇರಿ ಸುಮಾರು ಇಪ್ಪತ್ತಕ್ಕೂ ಮಿಕ್ಕಿ ಪುಸ್ತಕಗಳು ಪ್ರಕಾಶನಗೊಂಡಿವೆ. ಇಲ್ಲಿ ಪ್ರಕಾಶನಗೊಂಡ ಶಿವಾಗಮಗಳು ಹಿಂದೀ, ಇಂಗ್ಲೀಷ್ ಭಾಷೆಗಳಲ್ಲಿ ಕೂಡ ಅನುವಾದಿಸಲ್ಪಟ್ಟಿವೆ.

'ವೀರಶೈವ ಅನುಸಂಧಾನ ಸಂಸ್ಥಾನ' ಬೆಂಗಳೂರು ಃ

ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರಿನಲ್ಲಿ ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನದ ಅಂಗಸಂಸ್ಥೆಯಾದ 'ವೀರಶೈವ ಅನುಸಂಧಾನ ಸಂಸ್ಥಾನ'ವು ಕಳೆದ ಹತ್ತು ವರ್ಷಗಳಿಂದ ಕಾರ್ಯನಿರತವಾಗಿದೆ. ಈ ಅನುಸಂಧಾನ ಸಂಸ್ಥಾನದಿಂದ ಈಗಾಗಲೇ ಮಕುಟಾಗಮ, ಕಾರಣಾಗಮ, ಸೂಕ್ಷ್ಮಾಗಮ ಮತ್ತು ಪಾರಮೇಶ್ವರಾಗಮಗಳು ಕನ್ನಡದಲ್ಲಿ ಅನುವಾದಿಸಲ್ಪಟ್ಟು ಮುದ್ರಣಗೊಂಡಿವೆಯಲ್ಲದೇ "ಸಿದ್ಧಾಂತ ಶಿಖಾಮಣಿ ವಿಚಾರದೀಪ್ತಿ", "ಶೈವಾಗಮಗಳಲ್ಲಿ ವೀರಶೈವ", "ಚಂದ್ರಜ್ಞಾನಾಗಮ ವಿಚಾರ ರಶ್ಮಿ" ಮುಂತಾದ ವಿಚಾರ ಸಂಕಿರಣ (ಸೆಮಿನಾರ್)ದ ವರದಿರೂಪದ ಒಟ್ಟು ೧೭ ಗ್ರಂಥಗಳು ಪ್ರಕಟವಾಗಿವೆ.

'ಶ್ರೀ ಜಗದ್ಗುರು ಪಂಚಾಚಾರ್ಯ ವೇದ ಆಗಮ–ಸಂಸ್ಕೃತ ಯೋಗ–ಪಾಠಶಾಲೆ' ಗದಗ ಃ

ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನದ ಅಂಗಸಂಸ್ಥೆಯಾಗಿ ಗದಗ ನಗರದಲ್ಲಿ ಒಂದು ಪಾಠಶಾಲೆಯು ಪ್ರತಿಷ್ಠಾಪಿಸಲ್ಪಟ್ಟಿದೆ. ಈ ಪಾಠಶಾಲೆಯಲ್ಲಿ ವೇದ, ಆಗಮ, ಸಂಸ್ಕೃತ ಹಾಗೂ ಯೋಗಾಭ್ಯಾಸವನ್ನು ಮಾಡಿಸಲಾಗುವುದು. ಸುಮಾರು ಮೂವತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಅಲ್ಲಿಯ ಕಟ್ಟಡ ನಿರ್ಮಾಣಗೊಂಡಿದ್ದು ಗದಗ ಹಾಗೂ ಸುತ್ತಮುತ್ತಲಿನ ಪರಿಸರದ ಭಕ್ತಾದಿಗಳು ಭವನ ನಿರ್ಮಾಣಕ್ಕಾಗಿ ತಮ್ಮ ಉದಾರವಾದ ದೇಣಿಗೆಗಳನ್ನು ಸಮರ್ಪಿಸಿರುತ್ತಾರೆ.

ಶ್ರೀ ಜಗದ್ಗುರು ವಿಶ್ವಾರಾಧ್ಯ ಜನ ಕಲ್ಯಾಣ ಪ್ರತಿಷ್ಠಾನದ ವಿವಿಧ ಶಾಖೆಗಳು:

ಮೇಲಿನ ಸಂಸ್ಥೆಯ ಅನೇಕ ಶಾಖೆಗಳು ಧಾರವಾಡದಲ್ಲಿ, ಗುಲ್ಬರ್ಗಾದಲ್ಲಿ,

ಸೊಲ್ಲಾಪುರದಲ್ಲಿ, ನರಖೇಡದಲ್ಲಿ, ನಾಗಪುರದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿದ್ದು ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳನ್ನು ನಿರ್ವಹಿಸುತ್ತಲಿರುತ್ತವೆ. ಇದೂ ಅಲ್ಲದೆ ಕಾಶೀ ಕ್ಷೇತ್ರದ ಗಂಗಾನದಿ ದಂಡೆಯಲ್ಲಿರುವ ಅತಿ ಪ್ರಾಚೀನವಾದ ವಾಲ್ಮೀಕಿ ಕುಂಡದ ಬಳಿಯಲ್ಲಿ ಒಂದು ಬಾಲವಿದ್ಯಾಲಯವನ್ನು ಪ್ರತಿಷ್ಠಾಪಿಸಲಾಗಿದೆ. ಇಲ್ಲಿ ಸದ್ಯ, ಪ್ರಾಥಮಿಕ ವಿದ್ಯಾಲಯವು ಕಾರ್ಯ ಮಾಡುತ್ತಲಿದೆ.

ಪುಣೆ ಮಹಾನಗರದಲ್ಲಿ ಸದಾಶಿವಪೇಟೆಯಲ್ಲಿ ಇರುವ ಜಂಗಮವಾಡಿಮಠದಲ್ಲಿ ವಿದ್ಯಾರ್ಥಿಗಳ ವಾಸ್ತವ್ಯಕ್ಕಾಗಿ ವಸತಿ ನಿಲಯವನ್ನು ಕಟ್ಟಿಸಿ ಉನ್ನತ ಅಧ್ಯಯನಕ್ಕೆ ಪುಣೆಗೆ ಬರುವ ವಿದ್ಯಾರ್ಥಿ ಬಳಗಕ್ಕೆ ಅನುಕೂಲ ಮಾಡಿಕೊಟ್ಟಿದ್ದಾರೆ. ಅದೇ ಪುಣೆ ಮಹಾನಗರದಲ್ಲಿ ಇತ್ತೀಚೆಗೆ ನಿರ್ಮಾಣವಾದ ಸಾಂಗವಿನಗರದ 'ಪಿಂಪಳೆಗುರವ' ಬಡಾವಣೆಯೊಂದರಲ್ಲಿ ಆ ಭಾಗದ ವಿದ್ಯಾರ್ಥಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಪ್ರಾಥಮಿಕ ಶಾಲೆಯೊಂದನ್ನು ತೆರೆದಿದ್ದಾರೆ. ಮಹಾರಾಷ್ಟ್ರದ ಲಾತೂರು ಮಹಾನಗರದಲ್ಲಿ ಇತ್ತೀಚೆಗೆ ವಿದ್ಯಾರ್ಥಿಗಳ ವಸತಿಗೃಹ ಒಂದನ್ನು ಕಟ್ಟಿಸಿ ಉನ್ನತ ಅಧ್ಯಯನಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದಾರೆ.

ವಿಶೇಷ ಶಿಷ್ಯವೃತ್ತಿ ಯೋಜನೆಗಳು :

ಜಗದ್ಗುರು ವಿಶ್ವಾರಾಧ್ಯ ಜನಕಲ್ಯಾಣ ಪ್ರತಿಷ್ಠಾನದ ವತಿಯಿಂದ ಬುದ್ಧಿವಂತರಾದ ಬಡಮಕ್ಕಳಿಗೆ ಹೆಚ್ಚಿನ ಅಭ್ಯಾಸಕ್ಕೋಸುಗ ಅನುಕೂಲವಾಗಲೆಂಬ ಉದ್ದೇಶದಿಂದ ಮೆಡಿಕಲ್ ಹಾಗೂ ಇಂಜಿನೀಯರಿಂಗ್ ವಿದ್ಯಾರ್ಥಿಗಳಿಗೆ ಪ್ರತಿತಿಂಗಳು ಒಂದು ಸಾವಿರ ರೂ. ಶಿಷ್ಯವೇತನವನ್ನು ಕೊಡಲಾಗುತ್ತಿದೆ. ಈ ಶಿಷ್ಯವೇತನಗಳು ಪುಣೆಯ ಸುಪ್ರಸಿದ್ಧ ಉದ್ಯೋಗಪತಿಗಳಾದ ಕಲ್ಯಾಣಿ ಪರಿವಾರದ 'ಅಕ್ಕೂತಾಯಿ ಕಲ್ಯಾಣಿ ಟ್ರಸ್ಟ್' ವತಿಯಿಂದ ಪ್ರಾಪ್ತವಾಗಿವೆ.

ಸಮಾಜದಲ್ಲಿ ಬಡ ಹಾಗೂ ಪ್ರತಿಭಾನ್ವಿತ ಮಕ್ಕಳಿಗೆ ಶೈಕ್ಷಣಿಕ ಅನುಕೂಲತೆಯನ್ನು ಮಾಡುವ ಉದ್ದೇಶದಿಂದ ಮೆಡಿಕಲ್ ಹಾಗೂ ಇಂಜನಿಯರಿಂಗ್ ವಿದ್ಯೆಯನ್ನು ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಪ್ರತಿತಿಂಗಳು ಒಂದು ಸಾವಿರ ರೂಪಾಯಿಯಂತೆ ಅವರ ಶಿಕ್ಷಣ ಪೂರ್ಣವಾಗುವವರೆಗೆ ಕೊಡುವಂತಹ ಒಂದು ವ್ಯವಸ್ಥೆಯನ್ನು ಶ್ರೀ ಸನ್ನಿಧಿಯವರು ರೂಪಿಸಿಕೊಂಡಿದ್ದು ಈಗಾಗಲೇ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಲ್ಲಿಯ ೨೪ ಜನ ವಿದ್ಯಾರ್ಥಿ – ವಿದ್ಯಾರ್ಥಿನಿಯರು ಈ ಶಿಷ್ಯವೇತನದ ಪ್ರಯೋಜನವನ್ನು ಪಡೆಯುತ್ತಿದ್ದಾರೆ. ಶ್ರೀ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸನ್ನಿಧಿಯವರ ಷಷ್ಠ್ಯಬ್ದಿ ಮಹೋತ್ಸವದ ಉಪಲಕ್ಷದಲ್ಲಿ ಈ ಶಿಷ್ಯವೇತನದ ಸಂಖ್ಯೆಯನ್ನು ಅರವತ್ತರವರೆಗೆ ವಿಸ್ತರಿಸುವ ಒಂದು ಬೃಹತ್ ಯೋಜನೆಯನ್ನು ಹಮ್ಮಿಕೊಂಡಿದ್ದು ಇದಕ್ಕೆ ಬೇಕಾಗುವ ನಿಧಿ ಸಂಗ್ರಹಕ್ಕಾಗಿ ಶ್ರೀ ಪೀಠದಲ್ಲಿ ಹಾಗೂ ದೇಶಮಧ್ಯದಲ್ಲಿ ತುಲಾಭಾರದ ಸೇವಾವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ. ಭಕ್ತಾದಿಗಳು ಈ ಯೋಜನೆಯಲ್ಲಿ ಶ್ರದ್ಧೆಯಿಂದ ಪಾಲ್ಗೊಳ್ಳುತ್ತಲಿದ್ದು ೨೦೦೭ ನೆಯ ಸಾಲಿನ ಕೊನೆಯೊಳಗೆ ಈ ಯೋಜನೆ ಸಂಪೂರ್ಣ ಕಾರ್ಯರೂಪಕ್ಕೆ ಬರಲಿದೆ.

ಶ್ರೀ ಜಗದ್ಗುರು ವಿಶ್ವೇಶ್ವರ ನಿತ್ಯ ಅನ್ನದಾನ ಛತ್ರ :

ಕಾಶೀ ಜಂಗಮವಾಡಿಮಠದಲ್ಲಿ ಲಿಂ. ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರ ಪವಿತ್ರ ಸ್ಮೃತಿಯಲ್ಲಿ ಅನ್ನಛತ್ರವನ್ನು ೧೯೮೦ರಲ್ಲಿಯೇ ಪ್ರಾರಂಭಿಸಿದ್ದಾರೆ. ಯಾತ್ರೆಗಾಗಿ ಬಂದ ಭಕ್ತಾದಿಗಳಿಗೆ ಶ್ರೀ ಮಹಾಪೀಠದಲ್ಲಿ ವಸತಿಯ ಜೊತೆಗೆ ಉಚಿತವಾದ ಪ್ರಸಾದ ವ್ಯವಸ್ಥೆಯನ್ನೂ ಸಹ ಮಾಡಲಾಗುತ್ತಿದೆ. ಈ ಅನ್ನಛತ್ರದಲ್ಲಿ ವರ್ಷದಲ್ಲಿ ಒಂದು ದಿನ ಅನ್ನದಾನವನ್ನು ಮಾಡಲಿಚ್ಛಿಸುವವರು ಹತ್ತು ಸಾವಿರದ ಎಂಟು ರೂಪಾಯಿಗಳನ್ನು ಕಾಯಂ ನಿಧಿಯಾಗಿ ಕೊಡಬೇಕಾಗುತ್ತದೆ. ಈ ಅನ್ನಛತ್ರದಲ್ಲಿ ದಿನಾಲು ಬಂದ ಯಾತ್ರಿಗಳು ಹಾಗೂ ಇಲ್ಲಿ ಸಂಸ್ಕೃತಾಧ್ಯಯನಕ್ಕಾಗಿ ಬಂದಿರುವ ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲದ ವಿದ್ಯಾರ್ಥಿಗಳು ಪ್ರತಿದಿನ ಪ್ರಸಾದವನ್ನು ಪಡೆಯುತ್ತಾರೆ.

ಮಹಾಶಿವರಾತ್ರಿಯ ವರಪ್ರಸಾದ :

ಮಹಾಶಿವರಾತ್ರಿಯ ಪರ್ವಕಾಲವು ಕಾಶೀ ಮಹಾಪೀಠದ ಕಲಿಯುಗದ ಆಚಾರ್ಯರಾದ ಶ್ರೀ ಜಗದ್ಗುರು ವಿಶ್ವಾರಾಧ್ಯ ಲಿಂಗಾವಿರ್ಭಾವದ ಪವಿತ್ರ ಕಾಲವಾಗಿದೆ. ಅಂದು ವಿಭಿನ್ನ ಪ್ರಾಂತಗಳ ಅನೇಕ ಭಕ್ತರು ಈ ಪ್ರಾಕಟ್ಯೋತ್ಸವದ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಶ್ರೀಜಗದ್ಗುರು ವಿಶ್ವಾರಾಧ್ಯ ಹಾಗೂ ಕಾಶೀ ವಿಶ್ವನಾಥರ ಕೃಪಾ ಪ್ರಸಾದವನ್ನು ಪಡೆಯುತ್ತಾರೆ. ಭಕ್ತಾದಿಗಳು (೫೦೧) ಐದು ನೂರ ಒಂದು ಇಲ್ಲವೇ (೧೦೦೮) ಒಂದು ಸಾವಿರದ ಎಂಟು ರೂಪಾಯಿಗಳ ಕಾಯಂ ನಿಧಿಯನ್ನು ಶ್ರೀಪೀಠಕ್ಕೆ ಸಮರ್ಪಿಸಿದರೆ ಅವರ ಹೆಸರಿನಿಂದ ಇಲ್ಲಿ ಪೂಜಾದಿಗಳನ್ನು ನೆರವೇರಿಸಿ ಮಹಾಪ್ರಸಾದವನ್ನು ಅಂಚೆ ಮೂಲಕ ಅವರವರ ವಿಳಾಸಕ್ಕೆ ಕಳುಹಿಸಲಾಗುವುದು.

ಶ್ರೀ ಜಗದ್ಗುರು ವಿಶ್ವಾರಾಧ್ಯ ವಿಶ್ವಭಾರತಿ ಪುರಸ್ಕಾರ ಯೋಜನೆ :

ಭಾರತೀಯ ಪ್ರಾಚೀನ ಸಂಸ್ಕೃತ ಭಾಷೆಯಲ್ಲಿರುವ ಧರ್ಮದರ್ಶನಗಳ ಅದರಲ್ಲೂ ವಿಶೇಷವಾಗಿ ವೀರಶೈವ ಧರ್ಮದರ್ಶನದ ಅಭ್ಯಾಸವನ್ನು ಮಾಡುತ್ತಿರುವ ಹಾಗೂ ಅದರಲ್ಲಿ ಪ್ರಾವೀಣ್ಯತೆಯನ್ನು ಪಡೆದ ಶ್ರೇಷ್ಠ ಸಂಶೋಧಕ ಸಾಹಿತಿಗಳಿಗೆ ಗೌರವವನ್ನು ಕೊಡುವ ಉದ್ದೇಶದಿಂದ ಶ್ರೀ ಕಾಶೀ ಜಗದ್ಗುರುಗಳವರು "ಶ್ರೀ ಜಗದ್ಗುರು ವಿಶ್ವಾರಾಧ್ಯ ವಿಶ್ವಭಾರತಿ" ಪುರಸ್ಕಾರವನ್ನು ೧೯೯೭ನೆಯ ಇಸ್ವಿಯಿಂದ ಕೊಡಲು ಪ್ರಾರಂಭಿಸಿದ್ದಾರೆ. ಇಪ್ಪತ್ತೈದು ಸಾವಿರ ರೂಪಾಯಿಗಳ (೨೫,೦೦೦) ನಗದು ಹಣ, ಪ್ರಶಸ್ತಿ ಪತ್ರ, ಶಾಲು ಹಾಗೂ ಶ್ರೀಫಲಗಳನ್ನು ಈ ಪುರಸ್ಕಾರವು ಒಳಗೊಂಡಿರುತ್ತದೆ. ಈಗಾಗಲೇ ಕರ್ನಾಟಕ, ಮಹಾರಾಷ್ಟ್ರ, ಉತ್ತರಪ್ರದೇಶಗಳಲ್ಲಿಯ ಹತ್ತು ಜನ ಮೂರ್ಧನ್ಯ ವಿದ್ವಾಂಸರಿಗೆ ಪುರಸ್ಕಾರ ನೀಡಲಾಗಿದೆ. ಈ ಕ್ರಮವು ಮುಂದೆಯೂ ಕೂಡ ನಡೆಯುವಂಥದ್ದಾಗಿದೆ.

ಷಷ್ಠ್ಯಬ್ದಿ ನಿಮಿತ್ತವಾದ ವಿಶೇಷ ಕಾರ್ಯಕ್ರಮ:

೧೦೦೮ ಜಗದ್ಗುರು ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸನ್ನಿಧಿಯವರ ಷಷ್ಠ್ಯಬ್ದಿ ಮಹೋತ್ಸವದ ನಿಮಿತ್ತವಾಗಿ ಶ್ರೀ ಪೀಠದಲ್ಲಿ ದಿ. ೧೪.೮.೨೦೦೭ ರಿಂದ ೨೯.೧೧.೨೦೦೭ ರವರೆಗೆ ೧೦೮ ದಿನಗಳ ಬೃಹತ್ ಧಾರ್ಮಿಕ ಸಮಾರಂಭವನ್ನು ಏರ್ಪಡಿಸಲಾಗುತ್ತಿದೆ. ಈ ಅವಧಿಯಲ್ಲಿ ಶ್ರೀಪೀಠದಲ್ಲಿಯ ವಿಶ್ವನಾಥ ಲಿಂಗಕ್ಕೆ ಲಕ್ಷ ಕುಂಭಾಭಿಷೇಕ ಹಾಗೂ ಶ್ರೀ ಜಗದ್ಗುರು ವಿಶ್ವಾರಾಧ್ಯ ಲಿಂಗೋದ್ಭವ ಮೂರ್ತಿಗೆ ಕೋಟಿ ಬಿಲ್ವಾರ್ಚನೆ ಕಾರ್ಯಕ್ರಮ ಇದರ ಜೊತೆಯಲ್ಲಿಯೇ ವಿವಿಧ ಧಾರ್ಮಿಕ ಕಾರ್ಯಕ್ರಮಗಳು, ವಿದ್ವಾಂಸರ ಸನ್ಮಾನ, ದಾನ ಹಾಗೂ ಸಮಾಜಸೇವೆ ಮಾಡಿದ ಭಕ್ತರಿಗೆ ಪುರಸ್ಕಾರ ಕೊನೆಗೆ ಬೃಹತ್ ಪ್ರಮಾಣದ ವೀರಶೈವ ಸಾಹಿತ್ಯ ಸಮ್ಮೇಳನವನ್ನು

ನೆರವೇರಿಸುವ ಬಹು ದೊಡ್ಡ ಯೋಜನೆಯನ್ನು ಶ್ರೀಪೀಠವು ಹಮ್ಮಿಕೊಂಡಿದೆ. ಈ ಕಾರ್ಯಕ್ರಮಕ್ಕೆ ಎಲ್ಲ ರಾಜ್ಯಗಳ ಲಕ್ಷ ಲಕ್ಷ ಭಕ್ತಾದಿಗಳು ಪಾಲ್ಗೊಂಡು ಪ್ರಯೋಜನವನ್ನು ಪಡೆಯಲಿದ್ದಾರೆ.

ಕಾಶೀಪೀಠದಿಂದ ಕೊಡಮಾಡಲ್ಪಡುವ ವಿದ್ವತ್ ಪುರಸ್ಕಾರಗಳು:

೧. ವಿಶ್ವಾರಾಧ್ಯ ವಿಶ್ವಭಾರತಿ ಪುರಸ್ಕಾರ

೨. ಡಾ. ಚಂದ್ರಶೇಖರ ಕಪಾಳೆ ಸಾಹಿತ್ಯ ಪುರಸ್ಕಾರ : ಮಹಾರಾಷ್ಟ್ರದ ಸುಪ್ರಸಿದ್ಧ ವೀರಶೈವ ಮರಾಠಿ ಸಾಹಿತ್ಯ ವಿದ್ವಾಂಸರಾಗಿದ್ದ ಡಾ. ಚಂದ್ರಶೇಖರ ಕಪಾಳೆ ಇವರ ಸವಿನೆನಪಿನಲ್ಲಿ ಈ ಪುರಸ್ಕಾರವು ಕೊಡಮಾಡಲ್ಪಡುತ್ತದೆ. ಪುರಸ್ಕೃತ ವಿದ್ವಾಂಸರಿಗೆ ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮೃತಿಚಿನ್ನ, ಶಾಲು, ಶ್ರೀಫಲಗಳನ್ನು ಈ ಪುರಸ್ಕಾರದಲ್ಲಿ ಅನುಗ್ರಹಿಸಲಾಗುವುದು. ಈಗಾಗಲೇ ಮರಾಠಿ ವೀರಶೈವ ಸಾಹಿತ್ಯದಲ್ಲಿ ಕೃಷಿ ಮಾಡಿದ ವಿದ್ವಾಂಸರುಗಳಿಗೆ ಈ ಪುರಸ್ಕಾರವು ಕೊಡಲ್ಪಟ್ಟಿದ್ದು ಮುಂದೆಯೂ ಇದು ನಿರಂತರವಾಗಿ ನಡೆಯುತ್ತದೆ. ಮರಾಠಿಭಾಷೆಯಲ್ಲಿ ವೀರಶೈವ ಸಾಹಿತ್ಯದ ಬಗ್ಗೆ ಸೇವೆ ಸಲ್ಲಿಸಿದವರಿಗೆ ಮಾತ್ರ ಈ ಪುರಸ್ಕಾರವು ಕೊಡಲ್ಪಡುವುದು. ಡಾ. ಚಂದ್ರಶೇಖರ ಕಪಾಳೆಯವರ ಸುಪುತ್ರರಾದ ಶ್ರೀ ಅಭಯ ಕಪಾಳೆಯವರು ಶ್ರೀ ಪೀಠಕ್ಕೆ ಒಂದು ಲಕ್ಷ ರೂಪಾಯಿ ನಿಧಿಯನ್ನು ಸಮರ್ಪಿಸಿದ್ದಾರೆ. ಅದರಿಂದ ಬರುವ ಬಡ್ಡಿಯ ಹಣದಲ್ಲಿ ಈ ಪುರಸ್ಕಾರವನ್ನು ಕೊಡಲಾಗುವುದು.

೩. ಶ್ರೀ ವೀರಸಂಗಯ್ಯಸ್ವಾಮಿ ಆದರ್ಶ ಶಿಕ್ಷಕ ಪುರಸ್ಕಾರ: ಶಿಕ್ಷಣ ಕ್ಷೇತ್ರದಲ್ಲಿ ಪ್ರಾಥಮಿಕದಿಂದ ಹಿಡಿದು ವಿಶ್ವವಿದ್ಯಾಲಯದ ಮಟ್ಟದವರೆಗಿನ ಶಿಕ್ಷಕರಲ್ಲಿ ಅವರ ಶೈಕ್ಷಣಿಕ ಸೇವೆ ಮತ್ತು ಪ್ರತಿಭೆಗಳನ್ನು ಪರಿಶೀಲಿಸಿ ಪ್ರತಿ ವರುಷ ಈ ಪುರಸ್ಕಾರವನ್ನು ಕೊಡಲಾಗುವುದು. ಇದು ೨೦೦೬ ನೆಯ ಸಾಲಿನಿಂದ ಆರಂಭವಾಗಿದೆ. ವೇ. ವೀರಸಂಗಯ್ಯನವರ ಪುತ್ರರಾದ ಚಿ. ಚಂದ್ರಶೇಖರಯ್ಯ ಹಿರೇಮಠರವರು ಈ ಪುರಸ್ಕಾರಕ್ಕಾಗಿ ಒಂದು ಲಕ್ಷ ರೂಪಾಯಿ ಠೇವಣಿಯಾಗಿ ಸಮರ್ಪಿಸಿದ್ದಾರೆ.

೪. ಶಿವಕಮಲ ಸಾಹಿತ್ಯ ಪುರಸ್ಕಾರ: ಕರ್ನಾಟಕ ಪ್ರಾಂತದ ಓರ್ವ ವೀರಶೈವ ವಿದ್ವಾಂಸರಿಗೆ ಈ ಪುರಸ್ಕಾರವನ್ನು ಕೊಡಲಾಗುತ್ತಿದ್ದು ಕಳೆದ ಮೂರು ವರ್ಷಗಳಿಂದ ಈ ಪುರಸ್ಕಾರವನ್ನು ಕೊಡಲಾಗುತ್ತಿದೆ. ಬೆಂಗಳೂರಿನ ವೀರಶೈವ ಅನುಸಂಧಾನ ಸಂಸ್ಥಾನವು ಹಮ್ಮಿಕೊಳ್ಳುವ ಧನುರ್ಮಾಸದ ಶಿವಪೂಜಾ ಅನುಷ್ಠಾನ – ಆಧ್ಯಾತ್ಮಿಕ ಆಶೀರ್ವಚನ ಕಾರ್ಯಕ್ರಮದಲ್ಲಿ ಈ ಪುರಸ್ಕಾರವನ್ನು ಕೊಡಮಾಡಲಾಗುವುದು. ಬೆಂಗಳೂರಿನ ಸುಪ್ರಸಿದ್ಧ ವ್ಯಾಪಾರಸ್ಥರು, ಪಂಚಪೀಠಗಳ ಪರಮ ಭಕ್ತರೂ ಆದ ಲಿಂಗೈಕ್ಯ ಶಿವಪ್ಪ ಶೆಟ್ಟರ ಸ್ಮರಣಾರ್ಥವಾಗಿ ಅವರ ಚಿರಂಜೀವಿ ವಾಗೀಶ ಪ್ರಸಾದ ಇವರು ಈ ಪುರಸ್ಕಾರದ ದಾನಿಗಳಾಗಿದ್ದಾರೆ. ಈ ಪುರಸ್ಕಾರವನ್ನು ಪಡೆಯುವ ವಿದ್ವಾಂಸರಿಗೆ ಹತ್ತು ಸಾವಿರ ರೂಪಾಯಿ ನಗದು ಹಣ, ಸ್ಮೃತಿಚಿನ್ನ, ಮಾನಪತ್ರ, ಶಾಲು, ಶ್ರೀಫಲಗಳನ್ನು ಅನುಗ್ರಹಿಸಲಾಗುವುದು.

ಗ್ರಂಥ ಸಂಪದ :

ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಪೂರ್ವಾಶ್ರಮದಲ್ಲಿ ಗುಳೇದಗುಡ್ಡದ ಅಮರೇಶ್ವರ ಮಠಾಧ್ಯಕ್ಷರಾಗಿದ್ದಾಗಿನಿಂದಲೂ ಸಾಹಿತ್ಯ ರಚನೆಯತ್ತ ಗಮನ ಹರಿಸಿದ್ದಾರೆ. ಆಗ ಅವರು ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ (ಕನ್ನಡ) (ಕಿರಣ ೧ರಿಂದ ೭ರವರೆಗೆ), ವೀರಶೈವ ಅಷ್ಟಾವರಣ ವಿಜ್ಞಾನ (ಹಿಂದಿ), ಶ್ರೀ ಸಿದ್ಧಾಂತ ಶಿಖಾಮಣಿ ಸಮೀಕ್ಷಾ (ಸಂಸ್ಕೃತ), ಶಕ್ತಿ ವಿಶಿಷ್ಟಾದ್ವೈತ ತತ್ತ್ವತ್ರಯ ವಿಮರ್ಶ (ಸಂಸ್ಕೃತ), ವೀರಶೈವ ದರ್ಶನ ಕೋಶ (ಹಿಂದಿ), ವೀರಶೈವ ಪಂಚಪೀಠ ಪರಂಪರೆ (ಕನ್ನಡ), ಶಿವಾದ್ವೈತ ಪರಿಭಾಷಾ (ಸಂಸ್ಕೃತ ಸಂಪಾದನೆ), ಶಿವಾದ್ವೈತ ಮಂಜರಿ (ಸಂಸ್ಕೃತ ಸಂಪಾದನೆ), ಶ್ರೀ ಸಿದ್ಧಾಂತ ಶಿಖಾಮಣಿ (ಮರಾಠಿ ಅನುವಾದ ಸಹಿತ, ಸಂಪಾದನೆ) ಮುಂತಾದ ಮೌಲಿಕ ಕೃತಿಗಳ ರಚನೆ ಹಾಗೂ ಸಂಪಾದನೆಯನ್ನು ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸಾಧನೆಯನ್ನು ಮಾಡಿದ್ದಾರೆ. ಮುಂದೆ ಕಾಶೀ ಪೀಠದ ಅಧಿಪತ್ಯವನ್ನು ಸ್ವೀಕರಿಸಿದ ನಂತರವೂ ಸಹ ಬಿಡುವಿನ ಸಮಯವನ್ನು ಸಾಧಿಸಿ ಸಾಹಿತ್ಯ ಸೃಜನ ಕಾರ್ಯದತ್ತ ಗಮನ ಹರಿಸುತ್ತಿದ್ದಾರೆ. ಈಗ ಶ್ರೀ ಮಹಾಸನ್ನಿಧಿಯು ಸಂಕಲ್ಪಿಸಿದ 'ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ' ಎಂಬ ನೂರೊಂದು ಸ್ಥಲಗಳ ಎರಡು ಸಂಪುಟದ ಗ್ರಂಥವು ಬೆಂಗಳೂರು 'ಶ್ರೀ ಜಗದ್ಗುರು ಪಂಚಾಚಾರ್ಯ ಮಾನವ ಧರ್ಮ ಸಂಸ್ಥೆ'ಯಿಂದ ಪ್ರಕಟಗೊಂಡು ದಿ॥ ೯–೪–೨೦೦೦ದಂದು ಹುಬ್ಬಳ್ಳಿ ಮಹಾನಗರದಲ್ಲಿ ಜರುಗಿದ ಪಂಚಾಚಾರ್ಯ ಯುಗಮಾನೋತ್ಸವದಲ್ಲಿ ಗಜಮಹೋತ್ಸವ ಮೆರವಣಿಗೆಯ ನಂತರ ಬಿಡುಗಡೆಯಾಯಿತು. ಎರಡು ಸಂಪುಟಗಳ ಈ ಬೃಹತ್ ಗ್ರಂಥದ ಆರು ಸಾವಿರ ಪ್ರತಿಗಳು ಮನೆ–ಮನಗಳಲ್ಲಿ ವಿರಾಜಮಾನವಾಗಿವೆ.

ಶ್ರೀ ಮಹಾಸನ್ನಿಧಿಯವರು ಲೇಖನಕಲಾ ಪ್ರವೀಣರಾಗಿರುವಂತೆ ಪ್ರವಚನ ಕಲೆಯಲ್ಲೂ ಸಹ ನೈಪುಣ್ಯವನ್ನು ಹೊಂದಿದ್ದಾರೆ. ಕಾಶೀ ಪೀಠದ ಜಗದ್ಗುರುತ್ವವನ್ನು ಸ್ವೀಕರಿಸಿದ ನಂತರ ಗುರುಪೂರ್ಣಿಮೆ, ಶ್ರಾವಣ ಮಾಸ, ನವರಾತ್ರಿ, ಅಧಿಕ ಮಾಸ ಮುಂತಾದ ಪರ್ವಗಳಲ್ಲಿ ತಪೋನುಷ್ಠಾನದ ಜೊತೆಗೆ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ಕನ್ನಡ, ಮರಾಠಿ ಹಾಗೂ ಹಿಂದೀ ಭಾಷೆಗಳಲ್ಲಿ ವಿಭಿನ್ನ ಗ್ರಾಮ ವ ನಗರಗಳಲ್ಲಿ ಆಶೀರ್ವಚನಗಳನ್ನು ದಯಪಾಲಿಸಿದ್ದಾರೆ. ಹಿಂದೀ ಭಾಷೆಯಲ್ಲಿರುವ ಧ್ವನಿಸುರುಳಿಗಳನ್ನು ಸಂಗ್ರಹಿಸಿಕೊಂಡು ಸೊಲ್ಲಾಪುರದ ಡಾ॥ ಶೇ.ದೇ. ಪಸಾರಕರ ಇವರು ಮರಾಠಿಗೆ ಅನುವಾದಿಸಿ ಸಂಪಾದನೆಯನ್ನು ಮಾಡಿರುತ್ತಾರೆ. ಆ ಸಮಗ್ರ ಸಂಪಾದನೆಯ ಕೃತಿಗೆ 'ಜನ್ಮ ಹಾ ಅಕೇರ ಚೆ' (ಇದುವೇ ಕೊನೆಯ ಜನ್ಮ) ಎಂಬ ಶಿರೋನಾಮೆಯನ್ನು ಕೊಡಲಾಗಿದೆ. ಆ ಸಮಗ್ರ ಕೃತಿಯು ದಿ॥ ೨೫–೧೨–೨೦೦೦ದಂದು ನಾಂದೇಡ ನಗರದಲ್ಲಿ ಜರುಗಿದ ಮಹಾರಾಷ್ಟ್ರ ವೀರಶೈವ ಮಹಾಸಮ್ಮೇಳನದಲ್ಲಿ ಪಲ್ಲಕ್ಕಿ ಮೆರವಣಿಗೆಯ ನಂತರ ಪಂಚಪೀಠಾಧೀಶ್ವರರ ಪ್ರಸಾದಹಸ್ತದಿಂದ ಬಿಡುಗಡೆಯಾಯಿತು. ಅಂದಿನ ದಿನವೇ ಈ ಗ್ರಂಥದ ಸಾವಿರ ಪ್ರತಿಗಳು ಮಾರಾಟವಾದದ್ದು ಒಂದು ದಾಖಲೆಯಾಗಿದೆ.

ಕೋಟಿ ಬಿಲ್ವಾರ್ಚನ :

ಶ್ರೀ ಜಗದ್ಗುರುಗಳು ೧೯೯೭ನೆಯ ಇಸವಿ ಆಷಾಢ ಮಾಸದ ಗುರುಪೌರ್ಣಿಮೆಯಿಂದ ಕಾರ್ತಿಕ ಮಾಸದ ಪೌರ್ಣಿಮೆಯವರೆಗೆ ವಿಶ್ವಶಾಂತಿಗಾಗಿ ಕೋಟಿ ಬಿಲ್ವಾರ್ಚನಾ ಕಾರ್ಯಕ್ರಮವನ್ನು ಹಮ್ಮಿಕೊಂಡು ಪ್ರತಿದಿನವೂ ಮಹಾರುದ್ರಾಭಿಷೇಕ, ಬಿಲ್ವಾರ್ಚನೆ ಮತ್ತು ಸಾಯಂಕಾಲ ಶ್ರೀ ಸಿದ್ಧಾಂತ ಶಿಖಾಮಣಿಯ ಆಶೀರ್ವಚನವನ್ನು ದಯಪಾಲಿಸುತ್ತಿದ್ದರು. ಈ ಕಾಲಾವಧಿಯಲ್ಲಿ ೮೦ ಸಾವಿರಕ್ಕೂ ಹೆಚ್ಚು ಜನ ಭಕ್ತಾದಿಗಳು ಬಂದು ಪೂಜೆಯಲ್ಲಿ ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ಶ್ರೀ ಜಗದ್ಗುರುಗಳವರ 'ಜನ್ಮ ಸುವರ್ಣ ಮಹೋತ್ಸವವನ್ನು' ಆಚರಿಸಲಾಯಿತಲ್ಲದೇ ಶ್ರೀ ಸಿದ್ಧಾಂತ ಶಿಖಾಮಣಿಯ ಮೇಲೆ ಒಂದು ರಾಷ್ಟ್ರಮಟ್ಟದ ಸಂಗೋಷ್ಠಿ ಚರ್ಚಾಸತ್ರವನ್ನೂ ಸಹ ಆಯೋಜಿಸಲಾಗಿತ್ತು. ಆ ಚರ್ಚಾಗೋಷ್ಠಿಯಲ್ಲಿ ಉತ್ತರಪ್ರದೇಶ, ಬಿಹಾರ, ದಿಲ್ಲಿ,

ಮಹಾರಾಷ್ಟ್ರ, ಕರ್ನಾಟಕ, ಆಂಧ್ರ ಹಾಗೂ ತಮಿಳ್ನಾಡು ಪ್ರದೇಶಗಳಿಂದ ಆಗಮಿಸಿದ ವಿದ್ವಾಂಸರುಗಳು ಭಾಗವಹಿಸಿ ತಮ್ಮ ಪ್ರಬಂಧವಾಚನಗೈದರು.

ಈ ಕಾರ್ಯಕ್ರಮದ ಸಮಾಪನ ಸಮಾರಂಭಕ್ಕೆ ಅನೇಕ ಪ್ರಾಂತಗಳಿಂದ ಶತಾಧಿಕ ಶಿವಾಚಾರ್ಯರು ಮತ್ತು ಪಂಚಪೀಠಗಳ ಮಹಾಚಾರ್ಯರೂ ಸಹ ಆಗಮಿಸಿದ್ದರು. ಈ ಪ್ರಸಂಗದಲ್ಲಿ ಭಕ್ತಾದಿಗಳಿಂದ ಬಂದ ವಿಶೇಷ ದೇಣಿಗೆಯಿಂದ ಸುಮಾರು ೩೦ ಲಕ್ಷ ರೂಪಾಯಿಗಳ ವೆಚ್ಚದಿಂದ ಶ್ರೀ ಜಗದ್ಗುರು ವಿಶ್ವಾರಾಧ್ಯ ಭಕ್ತನಿವಾಸವು ನಿರ್ಮಾಣಗೊಂಡಿದೆ. ಇದರಿಂದಾಗಿ ಇಂದು ಮಹಾಪೀಠದಲ್ಲಿ ಬಂದ ಭಕ್ತಾದಿಗಳಿಗೆ ವಸತಿಯ ಯೋಗ್ಯ ವ್ಯವಸ್ಥೆಯೂ ಆಗಿರುತ್ತದೆ.

ಜಗದ್ಗುರುಗಳವರು ದಿ| ೧೭–೧೦–೨೦೦೧ ರಿಂದ ದಿ| ೫–೧೨–೨೦೦೧ರವರೆಗಿನ ಕಾಲಾವಧಿಯಲ್ಲಿ ತಮ್ಮ ಪೀಠಾರೋಹಣದ ದ್ವಾದಶ ವಾರ್ಷಿಕ ಮಹೋತ್ಸವದ ನಿಮಿತ್ತವಾಗಿ ಮಹಾಪೀಠದಲ್ಲಿ ನೂತನವಾಗಿ ಸ್ಥಾಪಿತಗೊಂಡ ಶ್ರೀ ವಿಶ್ವನಾಥ ಲಿಂಗಕ್ಕೆ ಅತಿರುದ್ರ ಮಹಾಭಿಷೇಕ, ಬಿಲ್ವಾರ್ಚನೆ ಹಾಗೂ ಕೋಟಿ ದೀಪೋತ್ಸವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಸತತವಾಗಿ ೫೦ ದಿನಗಳವರೆಗೆ ಜರುಗಿದ ಈ ಪೂಜಾ ಸಮಾರಂಭದಲ್ಲಿ ವಿಭಿನ್ನ ಪ್ರಾಂತಗಳಿಂದ ಲಕ್ಷಕ್ಕೂ ಹೆಚ್ಚು ಭಕ್ತಾದಿಗಳು ಬಂದಿದ್ದರು. ಈ ಪ್ರಸಂಗದಲ್ಲಿ ನೂತನವಾಗಿ ಭಕ್ತನಿವಾಸವನ್ನೂ ಸಹ ನಿರ್ಮಾಣಗೊಳಿಸಲಾಗಿದೆ.

ಹೀಗೆ ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳವರು ತಮ್ಮ ಪೀಠಾರೋಹಣದ ಹದಿನೆಂಟು ವರುಷಗಳ ಕಾಲಾವಧಿಯಲ್ಲಿ ಅನೇಕ ವಿಧವಾದ ರಚನಾತ್ಮಕ ವಿಕಾಸ ಕಾರ್ಯಗಳನ್ನು ಮಾಡಿರುವರಲ್ಲದೆ ಇನ್ನು ಮುಂದೆಯೂ ಸಹ ಅನೇಕ ಯೋಜನೆಗಳನ್ನು ಹಮ್ಮಿಕೊಂಡು ಸದಾ ಕಾರ್ಯಪ್ರವೃತ್ತರಾಗಲು ಸಂಕಲ್ಪಿಸಿದ್ದಾರೆ. ಶ್ರೀ ಸನ್ನಿಧಿಯ ಕ್ರಿಯಾಶಕ್ತಿ ಹಾಗೂ ಜ್ಞಾನಶಕ್ತಿಗಳೆರಡೂ ಮಾನವ ಸಮಾಜಕ್ಕೆ ಮಾರ್ಗದರ್ಶಕವಾಗುತ್ತಿರುವುದು ನಮ್ಮ ದೇಶದ ಭಕ್ತಕೋಟಿಯ ಅಹೋಭಾಗ್ಯವೇ ಸರಿ.

ಶ್ರೀಪೀಠದ ನೂತನ ಭಕ್ತನಿವಾಸಗಳು:

ಶ್ರೀಪೀಠದಲ್ಲಿ ಯಾತ್ರಾರ್ಥಿಗಳಾಗಿ ಬಂದ ಭಕ್ತರಿಗೆ ಉಚಿತವಾಗಿ ನಿವಾಸದ ವ್ಯವಸ್ಥೆಯನ್ನು ಮಾಡುವುದಕ್ಕಾಗಿ ಶ್ರೀ ಸನ್ನಿಧಿಯವರು ೧೯೯೭ನೆಯ ಇಸ್ವಿಯಲ್ಲಿ ಶ್ರೀಪೀಠದಲ್ಲಿ ಜರುಗಿದ ಕೋಟಿ ಬಿಲ್ವಾರ್ಚನೆ ಕಾರ್ಯಕ್ರಮದ ನಂತರ ಭಕ್ತ ನಿವಾಸದ ಯೋಜನೆಯನ್ನು ಪ್ರಾರಂಭಿಸಿದ್ದಾರೆ. ಆ ಯೋಜನೆಯ ಅಡಿಯಲ್ಲಿ ಭಕ್ತಾದಿಗಳ ಉದಾರ ದೇಣಿಗೆಯಿಂದ ಭಕ್ತ ನಿವಾಸಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ

೧. ಶ್ರೀ ಜಗದ್ಗುರು ವಿಶ್ವಾರಾಧ್ಯ ಭಕ್ತನಿವಾಸ
೨. ಶ್ರೀ ಜಗದ್ಗುರು ಹರೇಶ್ವರ ಭಕ್ತನಿವಾಸ
೩. ಶ್ರೀ ಜಗದ್ಗುರು ವೀರಭದ್ರ ಭಕ್ತನಿವಾಸ
೪. ಶ್ರೀ ಜಗದ್ಗುರು ರಾಜೇಶ್ವರ ಭಕ್ತನಿವಾಸ
೫. ಶ್ರೀ ಜಗದ್ಗುರು ಶಿವಲಿಂಗ ಭಕ್ತನಿವಾಸ
೬. ಶ್ರೀ ಜಗದ್ಗುರು ಪಂಚಾಕ್ಷರ ಭಕ್ತನಿವಾಸ
೭. ಶ್ರೀ ಜಗದ್ಗುರು ವೀರಭದ್ರ ಸ್ಮೃತಿಭವನ
೮. ಶ್ರೀ ಜಗದ್ಗುರು ವಿಶ್ವೇಶ್ವರ ಭಕ್ತನಿವಾಸ

ಹೀಗೆ ಒಟ್ಟು ೧೫೦ ಕೊಠಡಿಗಳ ವಿಭಿನ್ನ ಭಕ್ತನಿವಾಸಗಳನ್ನು ನಿರ್ಮಿಸಲಾಗಿದ್ದು ೨೦೦೭ನೆಯ ಇಸ್ವಿಯಲ್ಲಿ ಶ್ರೀ ಜಗದ್ಗುರುಗಳವರ ಷಷ್ಠ್ಯಬ್ದಿ ಮಹೋತ್ಸವದ ಶುಭಸಂದರ್ಭದಲ್ಲಿ ಇವೆಲ್ಲವುಗಳು ವಿಧಿವತ್ತಾಗಿ ಉದ್ಘಾಟನೆಗೊಳ್ಳುವವು. ಶ್ರೀ ಪೀಠದಲ್ಲಿ ಏಕಕಾಲದಲ್ಲಿ ಎರಡು ಸಾವಿರ ಭಕ್ತಾದಿಗಳು ಆಗಮಿಸಿದರೂ ಅವರಿಗೆ ವ್ಯವಸ್ಥಿತವಾದ ನಿವಾಸ ಹಾಗೂ ಮಹಾಪ್ರಸಾದದ ವ್ಯವಸ್ಥೆಯನ್ನು ಶ್ರೀ ಪೀಠದಲ್ಲಿ ಮಹಾಸನ್ನಿಧಿಯವರು ಮಾಡಿದ್ದಾರೆ.

ಶ್ರೀ ಕಾಶೀ ಜ್ಞಾನಸಿಂಹಾಸನದ ಜಗದ್ಗುರು ಪರಂಪರೆ

ಶ್ರೀ ಜಗದ್ಗುರು ಪಂಚಾಕ್ಷರ ಶಿವಾಚಾರ್ಯ ಭಗವತ್ಪಾದರು (ಕೃತಯುಗದ ಆದಿ)
ಶ್ರೀ ಜಗದ್ಗುರು ಪಂಚವಕ್ತ್ರ ಶಿವಾಚಾರ್ಯ ಭಗವತ್ಪಾದರು (ತ್ರೇತಾಯುಗದ ಆದಿ)
ಶ್ರೀ ಜಗದ್ಗುರು ವಿಶ್ವಕರ್ಣ ಶಿವಾಚಾರ್ಯ ಭಗವತ್ಪಾದರು (ದ್ವಾಪರಯುಗದ ಆದಿ)
ಶ್ರೀ ಜಗದ್ಗುರು ವಿಶ್ವಾರಾಧ್ಯ ಶಿವಾಚಾರ್ಯ ಭಗವತ್ಪಾದರು (ಕಲಿಯುಗದ ಆದಿ)

೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು (ಗಾದೀಸ್ವಾಮಿ) ಕ್ರಿ.ಪೂ.೨೦೦೧–೧೬೯೦
೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೬೯೦–೧೫೭೬
೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೫೭೬–೧೫೦೧
೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೫೦೧–೧೪೦೦
೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೪೦೦–೧೨೭೫
೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೨೭೫–೧೧೯೫
೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೧೯೫–೧೧೩೧
೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೧೩೧–೧೦೭೬
೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೦೭೬–೧೦೧೯
೧೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ.೧೦೧೯–೯೫೬
೧೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೯೫೬–೮೮೧
೧೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೮೮೧–೮೪೭
೧೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೮೪೭–೮೦೨
೧೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೮೦೨–೭೬೫
೧೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೭೬೫–೬೯೯
೧೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೬೯೯–೬೬೮
೧೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೬೬೮–೬೪೩
೧೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೬೪೩–೬೨೬
೧೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೬೨೬–೬೧೧
೨೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೬೧೧–೫೯೦
೨೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೫೯೦–೫೧೩

೨೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೫೧೩–೪೭೮
೨೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೪೭೮–೪೩೮
೨೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೪೩೮–೩೯೩
೨೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೩೯೩–೩೪೨
೨೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೩೪೨–೩೧೪
೨೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೩೧೪–೩೦೦
೨೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೩೦೦–೨೩೩
೨೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೨೩೩–೨೧೪
೩೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೨೧೪–೧೯೦
೩೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೧೬೦– ೧೬೮
೩೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೧೯೮–೧೧೬
೩೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೧೧೬–೭೮
೩೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೭೮–೩೬
೩೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಪೂ. ೩೬–೨೭
೩೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೨ – ೫
೩೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೫– ೫೯
೩೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೫೯–೮೧
೩೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೮೧– ೧೦೫
೪೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೦೫– ೧೩೧
೪೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೩೧– ೧೫೫
೪೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೫೫– ೨೧೪
೪೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೨೧೪–೨೨೮
೪೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೨೨೮–೨೮೫
೪೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೨೮೫–೩೫೪
೪೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೩೫೪–೪೧೭
೪೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೪೧೭– ೪೩೮
೪೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೪೩೮–೪೪೯
೪೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೪೪೯– ೫೨೧
೫೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೫೨೧–೫೫೩
೫೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೫೫೩–೬೭೪
೫೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೬೭೪–೭೫೯
೫೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೭೫೯–೭೯೩
೫೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೭೯೩–೮೨೯
೫೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೮೨೯–೮೮೨
೫೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೮೮೨– ೯೪೦
೫೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೯೪೦– ೯೯೬
೫೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೯೯೬–೧೦೦೬
೫೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೦೦೬– ೧೦೫೭
೬೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೦೫೭– ೧೧೦೩
೬೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೧೦೩–೧೧೨೨
೬೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೧೨೨–೧೧೮೭
೬೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೧೮೭–೧೨೦೧
೬೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೨೦೧–೧೨೭೫
೬೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೨೭೫–೧೩೪೭
೬೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೩೪೭–೧೩೫೬
೬೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೩೫೬–೧೪೨೯
೬೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೪೨೯–೧೪೪೨
೬೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೪೪೨–೧೪೬೦
೭೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೪೬೦–೧೫೨೭
೭೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೫೨೭–೧೫೪೭
೭೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೫೪೭–೧೫೮೩
೭೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೫೮೩–೧೬೩೧
೭೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೬೩೧–೧೬೩೯
೭೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೬೩೯–೧೬೬೩
೭೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೬೬೩–೧೭೧೦
೭೭. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು ಕ್ರಿ.ಶ. ೧೭೧೦–೧೭೫೦
೭೮. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ಶಿವಲಿಂಗ ಶಿವಾಚಾರ್ಯರು ಕ್ರಿ.ಶ. ೧೭೫೦–೧೮೨೫
೭೯. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ಹರೇಶ್ವರ ಶಿವಾಚಾರ್ಯರು ಕ್ರಿ.ಶ. ೧೮೨೫–೧೮೭೯
೮೦. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ವೀರಭದ್ರ ಶಿವಾಚಾರ್ಯರು ಕ್ರಿ.ಶ. ೧೮೭೯–೧೮೯೧
೮೧. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ರಾಜೇಶ್ವರ ಶಿವಾಚಾರ್ಯರು ಕ್ರಿ.ಶ. ೧೮೯೧–೧೯೦೭
೮೨. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ಶಿವಲಿಂಗ ಶಿವಾಚಾರ್ಯರು ಕ್ರಿ.ಶ. ೧೯೦೭–೧೯೩೨

೮೩. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ಪಂಚಾಕ್ಷರ ಶಿವಾಚಾರ್ಯರು ಕ್ರಿ.ಶ. ೧೯೩೨–೧೯೪೪

೮೪. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ವೀರಭದ್ರ ಶಿವಾಚಾರ್ಯರು ಕ್ರಿ.ಶ. ೧೯೪೪–೧೯೪೮

೮೫. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜ॥ ವಿಶ್ವೇಶ್ವರ ಶಿವಾಚಾರ್ಯರು ಕ್ರಿ.ಶ. ೧೯೪೮–೧೯೪೯

೮೬. ಶ್ರೀ ಜಗದ್ಗುರು ಮಲ್ಲಿಕಾರ್ಜುನ ಶಿವಾಚಾರ್ಯರು
ಉರ್ಫ್ ಶ್ರೀ ಜಗದ್ಗುರು ಚಂದ್ರಶೇಖರ ಶಿವಾಚಾರ್ಯರು ೧೯೪೯

ಇಲ್ಲಿಯವರೆಗೆ ವರ್ಣನೆಯನ್ನು ಮಾಡಿದ ಪಂಚಪೀಠಗಳಲ್ಲಿ ಪಟ್ಟಾಭಿಷಿಕ್ತರಾದವರಿಗೆ ಪಂಚಾಚಾರ್ಯರೆಂದು ಕರೆಯುತ್ತಾರೆ. ಈ ಪಂಚಪೀಠಗಳ ಆದಿಆಚಾರ್ಯರೇ ವೀರಶೈವ ಧರ್ಮವನ್ನು ಭೂಲೋಕದಲ್ಲಿ ಪ್ರಪ್ರಥಮವಾಗಿ ಸಂಸ್ಥಾಪಿಸಿದ್ದಾರೆ.

## ಗ್ರಂಥಋಣ


ಕನ್ನಡ

೧. ಪಂಚಾಚಾರ್ಯ ವಂಶಾವಳಿ; ಓರಿಯಂಟಲ್ ಬುಕ್ ಡಿಪೋ ಪ್ರೆಸ್, ಧಾರವಾಡ, ೧೮೮೭
೨. ಪಂಚಾಚಾರ್ಯ ಮಹಾಸಭೆ; ತರಂಗಿಣಿ ಮುದ್ರಣಾಲಯ, ಧಾರವಾಡ ೧೯೧೮
೩. ಹಿಮವತ್ಕೇದಾರ ಪೀಠದ ಚರಿತ್ರೆ; ಕಪ್ಪುಗಲ್ಲ ಕರಿಬಸವಶಾಸ್ತ್ರಿ, ಬಳ್ಳಾರಿ, ೧೯೨೩
೪. ವೀರಶೈವ ಮಹಾತ್ಮರು; ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು, ೧೯೩೮
೫. ಶ್ರೀ ಮರುಳಸಿದ್ಧಾಂಕ; ವೀರಶೈವ ಧರ್ಮಾಲಯ, ಹರಿಹರ, ೧೯೪೯
೬. ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಮಹಾಸ್ವಾಮಿಗಳ ಜೀವನಚರಿತ್ರೆ, ಜಗದ್ಗುರು ಸೂರ್ಯಸಿಂಹಾಸನ ಮಠ, ಗುಂತಕಲ್ಲು ೧೯೫೨
೭. ಶ್ರೀ ಸಿದ್ಧಲಿಂಗ ಶಿವಯೋಗಿ ಚರಿತ್ರೆ; ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು ೧೯೫೬
೮. ವಿಮರ್ಶ, ಶ್ರೀ ಷ॥ ಬ್ರ॥ ಗುರುದೇವ ಶಿವಾಚಾರ್ಯ, ನವಲಗುಂದ ೧೯೬೩
೯. ರೇಣುಕವಿಜಯ; ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು ೧೯೬೮
೧೦. ಹರಕು ಪಾಟಿನ ಅರಸು; ವಿಶ್ವಶಕ್ತಿ ಪ್ರಕಾಶನ, ಹುಬ್ಬಳ್ಳಿ ೧೯೭೧
೧೧. ಶ್ರೀ ಜಗದ್ಗುರು ಪಂಚಾಚಾರ್ಯ ದರ್ಶನ (ಸ್ಮರಣ ಸಂಚಿಕೆ) ಬೆಂಗಳೂರು ೧೯೭೨
೧೨. ವಿಶ್ವಧರ್ಮವಾದ ವೀರಶೈವ; ಪೃಥ್ವಿ ಪ್ರಿಂಟರ್ಸ್, ಬೆಂಗಳೂರು
೧೩. ರತ್ನ ಗರ್ಭಗಣಪತಿ ಮತ್ತು ಚಂದ್ರಮೌಳೀಶ್ವರಲಿಂಗ; ಟಿ.ಬಿ. ಬಸವರಾಜಯ್ಯ ಬೆಂಗಳೂರು ೧೯೮೫

ಸಂಸ್ಕೃತ

೧೪. ಸುಪ್ರಭೇದಾಗಮಾಂತರ್ಗತ ಪಂಚಾಚಾರ್ಯ – ಪಂಚಮೋತ್ಪತ್ತಿ ಪ್ರಕರಣಂ; ವೀ. ಲಿಂ ಬ್ರಾ. ಗ್ರಂಥಮಾಲಾ ಸೋಲಾಪುರ, ೧೯೦೩
೧೫. ವೀರಶೈವಸದಾಚಾರ ಸಂಗ್ರಹ ಃ ವೀ. ಲಿಂ. ಬ್ರಾ. ಗ್ರಂಥಮಾಲಾ ಸೋಲಾಪುರ ೧೯೦೫
೧೬. ಶ್ರೀ ಮಲ್ಲಿಕಾರ್ಜುನಪಂಡಿತಾರಾಧ್ಯ ಚರಿತಂ; ಶ್ರೀಮತ್ಕನ್ಯಕಾ ಪರಮೇಶ್ವರೀ ಮುದ್ರಣಾಲಯ, ಮೈಸೂರು ೧೯೨೧
೧೭. ರತ್ನತ್ರಯಂ; ವಾಣೀವಿಲಾಸ ಮುದ್ರಣಾಲಯ, ಶ್ರೀರಂಗಂ ೧೯೨೩
೧೮. ಗುರುವಂಶಕಾವ್ಯಂ; ವಾಣೀವಿಲಾಸ ಮುದ್ರಣಾಲಯ, ಶ್ರೀರಂಗಂ
೧೯. ಮಹಾನಾರಾಯಣೋಪನಿಷತ್ ; ಜಂಗಮವಾಡಿಮಠ, ವಾರಣಾಸಿ, ೧೯೨೯
೨೦. ಸಿದ್ಧಾಂತ ಶಿಖಾಮಣಿ ; ಪಂಚಾಚಾರ್ಯ ಪ್ರೆಸ್, ಮೈಸೂರು ೧೯೩೬
೨೧. ವೀರಶೈವಾನಂದ ಚಂದ್ರಿಕಾ; ಮೂರುಸಾವಿರಮಠ, ಹುಬ್ಬಳ್ಳಿ ೧೯೩೬
೨೨. ಭಾಸ್ಕರೀ; ಸರಸ್ವತೀ ಭವನ ಟೆಕ್ಸ ನಂ. ೮೩. ಅಲಾಹಾಬಾದ್. ೧೯೫೦
೨೩. ಶ್ರೀಕರಭಾಷ್ಯಂ; (ಚತುಃಸೂತ್ರೀ) ಜಂಗಮವಾಡಿಮಠ, ವಾರಾಣಾಸಿ ೧೯೫೬
೨೪. ಕ್ರಿಯಾಸಾರಃ ಓ.ಆರ್.ಐ, ಮೈಸೂರು ೧೯೫೭

ತೆಲುಗು ಃ

೨೫. ರೇಣುಕವಿಜಯಮು; ಶಿವಧರ್ಮ ಗ್ರಂಥಮಾಲಾ, ಸಿಕಂದ್ರಾಬಾದ್ ೧೯೪೩
೨೬. ಶ್ರೀಶೈಲಕ್ಷೇತ್ರ ಮಹಿಮಾ ; ಜ್ಯೂಪಿಟರ್ ಪ್ರಿಂಟಿಂಗ್ ಪ್ರೆಸ್, ಗುಂಟೂರ, ೧೯೮೦

ಮರಾಠಿ

೨೭. ಕಾಶೀಪೀಠಾಚೇ ಪ್ರಾಚೀನತ್ವ; ಶೈವಭಾರತೀ ಭವನ ಕಾಶಿ, ೧೯೩೪
೨೮. ವೀರಶೈವರತ್ನ; ಜಂಗಮವಾಡಿಮಠ, ವಾರಣಸಿ

ಹಿಂದಿ

೨೯. ವಿಜಯಾದಿತ್ಯ ಕಾ ಅಮ್ಮಣಗಿ ತಾಮ್ರ ಪತ್ರ (ಚಿದ್ರೇಮಠ ವೀರಭದ್ರಶರ್ಮರ ಶೋಧಲೇಖ) ಪ್ರಯಾಗ ೧೯೩೭
೩೦. ಹಿಂದುತ್ವ ; ಶಿವಪ್ರಸಾದಗುಪ್ತ ಸೇವಾ ಉಪವನ, ವಾರಾಣಸಿ ೧೯೩೮
೩೧. ಶೈವಮತ, ಬಿಹಾರ ರಾಷ್ಟ್ರ ಭಾಷಾ ಪರಿಷತ್, ಪಟನಾ, ೧೯೫೫
೩೨. ಗಢವಾಲ ಕಾ ಇತಿಹಾಸ

ಇಂಗ್ಲಿಷ್

೩೩. ಖಿಜ ರಿಣಜರಜಟಜಟಣ ಎಟ ಃಜಟಚಿಡಿಛ ಖಡು ರಿಚಿರಿಚಿಜರಣಾಡಿಣ ಗ್ರಿತಿಚಿಡಿಚಿಜ್ಞಿಥಿಚಿ ಖಟಿಝಿಛಿಟಿಚಿಟಚಿಣು ಅಛಿಜ–೧೯೩೫
೩೪. ೦ ಊಚಿಟಿಜಛಿಠಠಞ ಠಜಿ ಗಿಡಿಛಿಚಿತುಜಚಿಟ, ಖ.ಅ. ಓಚಿಟಿಜುಟಚಿಣು ಒಠಣುಟಚಿಟ ಃಚಿಟಿಚಿಡಿಛಿಖಿಜಛಿ, ಆಜಟ್ಟು – ೧೯೭೯
೩೫. ೦ ಊಣಠಡಿಥಿ ಠಜಿ ಖಟಿಜುಚಿಟ ಘುಟಥಿಠಿಥಿ, ಖ.ಓ. ಆಛಿಚಿರಣಾಠಿಣಚಿ ಅಚಿಟಛಡುಜರಜ

ಗಟುತಿತಜಢುಣಥಿ ಕಡಿಜ಼ ಅಚಿಟಟಥಡುಜಂಜ – ೧೯೫೫
೩೬. ೦ ಉಘಣಠಡಿಥಿ ಠಜಿ ಖಠಣಾಣು ಖಟಿಜುಚಿ, ಏ.ಂ. ಓಜಜಟಚಿಞಚಿಟಣಚಿ ಖುಛಿಣಡಿಥಿ, ಔಥಜಿಂಡಿಜ
ಗಟುತಿತಜಢುಣಥಿ ಕಡಿಜ಼, ಔಥಜಿಂಡಿಜ ೧೯೬೬
ಪರಿಷ್ಕೃತ ಆವೃತ್ತಿಗಾಗಿ
೩೭. ವೀರಶೈವ ಪಂಚಪೀಠ ಪರಂಪರೆ (ಪ್ರಥಮ ಆವೃತ್ತಿ)
ಡಾ। ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು, ಅಮರೇಶ್ವರ ಮಠ, ಗುಳೇದಗುಡ್ಡ ೧೯೮೮
೩೮. ಜಗದ್ಗುರು ಪಂಚಪೀಠಾಧೀಶ್ವ ರರು – ಶ್ರೀ ಷ। ಬ್ರ। ಡಾ। ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಹಿರೇಮಠ, ತುಮಕೂರು ೧೯೯೩
೩೯. ಶ್ರೀಶೈಲ ಪೀಠ ದರ್ಶನ –ಶ್ರೀ ಷ। ಬ್ರ। ಡಾ। ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಹಿರೇಮಠ, ತುಮಕೂರು ೧೯೯೯
೪೦. ಶ್ರೀ ರಂಭಾಪುರಿ ಪೀಠ ದರ್ಶನ – ಶ್ರೀ ಷ। ಬ್ರ। ಡಾ। ಶಿವಾನಂದ ಶಿವಾಚಾರ್ಯ ಸ್ವಾಮಿಗಳು, ಹಿರೇಮಠ, ತುಮಕೂರು ೨೦೦೦
೪೧. ಮುಕ್ತಿಮಂದಿರ ಮಹರ್ಷಿ _ ಅ.ಸಿ. ಹಿರೇಮಠ, ರಾಣೇಬೆನ್ನೂರು ೧೯೯೪
೪೨. ಅಮರ ಜೀವನ _ ಮಾಸಪತ್ರಿಕೆ ಸಂ. ೪. ಸಂಚಿಕೆ –೧೦, ಮೇ ೧೯೮೪
ಸಂ ಃ ಶ್ರೀ ಷ ಬ್ರ। ಸಿದ್ಧಲಿಂಗ ಶಿವಾಚಾರ್ಯ ಸ್ವಾಮಿಗಳು, ಪಂಚಗೃಹ ಹಿರೇಮಠ, ಹಳ್ಯಾಳ.
೪೩. ಸದ್ಧರ್ಮ ಪ್ರಭಾ ತ್ರೈಮಾಸಿಕ ಸಂ–೩೬ ಸಂಚಿಕೆ – ೧ ಸಂಃ ಅ.ಸಿ. ಹಿರೇಮಠ, ೧೯೯೯

ಗ್ರಂಥಕರ್ತರು

ಶ್ರೀಮತ್ ಕಾಶೀಜ್ಞಾನ ಸಿಂಹಾಸನಾಧೀಶ್ವರ ಶ್ರೀ ೧೦೦೮ ಜಗದ್ಗುರು ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳನ್ನು ಅರಿಯದ ಕನ್ನಡಿಗನಿಲ್ಲ; ಅಷ್ಟೇ ಏಕೆ? ಭಾರತದ ಅನೇಕ ರಾಜ್ಯಗಳು, ರಾಜಧಾನಿಗಳು, ಹಳ್ಳಿ – ಪಟ್ಟಣಗಳಲ್ಲಿ ತಮ್ಮ ಪಾಂಡಿತ್ಯಪೂರ್ಣ, ಆದರೆ ಸರಸಮಯ ಪ್ರವಚನ – ಆಶೀರ್ವಚನಗಳ ಮುಖೇನ ಬಹುಶ್ರುತರೆನಿಸಿದ್ದಾರೆ. ಚತುರ್ಭಾಷಾ ಪಂಡಿತರಾದ ಶ್ರೀ ಸನ್ನಿಧಿಯವರು ಕನ್ನಡದಷ್ಟೇ ಸರಳ – ಸುಂದರ ಶೈಲಿಯಲ್ಲಿ ಹಿಂದಿ, ಮರಾಠಿ ಹಾಗೂ ಸಂಸ್ಕೃತ ಭಾಷೆಗಳಲ್ಲಿಯೂ ವಿದ್ವತ್ಪೂರ್ಣ ಆಶೀರ್ವಚನ ನೀಡಬಲ್ಲ ವಾಗ್ಮಿಗಳಾಗಿದ್ದು, ವಾಗ್ದೇವಿಯ ಸುಪುತ್ರರೆನಿಸಿದ್ದಾರೆ.

ಜಗದ್ಗುರುಗಳವರು ಗುಳೇದಗುಡ್ಡ ಶ್ರೀ ಅಮರೇಶ್ವರ ಮಠದ ಪಟ್ಟಾಧ್ಯಕ್ಷರಾಗಿ ೧೯೭೦ ರಲ್ಲಿ ಅಧಿಕಾರ ಸ್ವೀಕರಿಸಿದರು. ೧೯೮೦ ರ ದಶಕದಲ್ಲಿ "ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ" ಎಂಬ ನಾಮಾಂಕಿತದಲ್ಲಿ ಸೊಗಸಾದ, ಸತ್ವಪೂರ್ಣವಾದ ಕನ್ನಡ ಕೃತಿಗಳಿಂದ ಕನ್ನಡಮ್ಮನ ಉಡಿ ತುಂಬಿದರು. ಜಗದ್ಗುರುಗಳಾದ ನಂತರವೂ (೧೯೮೯) ಬರವಣಿಗೆಯ ಕಾರ್ಯವನ್ನು ಮುಂದುವರೆಸಿದರು. "ಶ್ರೀ ಸಿದ್ಧಾಂತ ಶಿಖಾಮಣಿ ಪ್ರವಚನ ಪ್ರಭೆ" ಸಮಗ್ರ ಕೃತಿಯಾಗಿ ಅಂತಃಸತ್ವ ಹಾಗೂ ತತ್ತ್ವವನ್ನೊಳಗೊಂಡು ೨೦೦೦ನೇ ಏಪ್ರಿಲ್‌ನಲ್ಲಿ ಎರಡು ಸಂಪುಟಗಳಲ್ಲಿ ಪ್ರಕಟವಾಯಿತು. ಪಂಡಿತಪಾಮರರೆಲ್ಲರನ್ನೂ ರಂಜಿಸಬಲ್ಲ ಈ ಕೃತಿ ಸುಮಾರು ನಾಲ್ಕು ಸಾವಿರ ಪ್ರತಿಗಳ ಮಾರಾಟದೊಂದಿಗೆ ದಾಖಲೆ ಸ್ಥಾಪಿಸಿದೆ. ಜನತೆಯ ಭಾವ – ಬುದ್ಧಿಗೆ ಬೆಳಕನ್ನು ನೀಡುತ್ತಿದೆ; ಜನಮನ್ನಣೆಗೆ ಪಾತ್ರವಾಗಿದೆ.

ಹೊನ್ನಾಳಿಯ "ಚೆನ್ನಚೇತನ ಪ್ರಕಾಶನ"ದ ಚೊಚ್ಚಲು ಕೃತಿಯಾಗಿ ೧೯೮೮ ರಲ್ಲಿ ರಾಣೇಬೆನ್ನೂರು ನಗರದಲ್ಲಿ 'ವೀರಶೈವ ಪಂಚಪೀಠ ಪರಂಪರೆ' ಎಂಬ ಸಂಶೋಧಕ ಕೃತಿ ಪ್ರಕಟವಾಯಿತು. ಸಂಕ್ಷಿಪ್ತ ಮಾಹಿತಿ ಒಳಗೊಂಡ ಆ ಪರಿಚಯಾತ್ಮಕ ಗ್ರಂಥದ ಮೂರು ಸಾವಿರ ಪ್ರತಿಗಳು ಮಾರಾಟವಾಗಿ ಅನೇಕ ವರ್ಷಗಳೇ ಕಳೆದವು. ಆದರೆ ಆ ಗ್ರಂಥಕ್ಕೆ ಬೇಡಿಕೆ ಮಾತ್ರ ಇಂದೂ ಮುಂದುವರೆದಿದೆ. ಅದನ್ನು ಗಮನಿಸಿ ಪುನರಮುದ್ರಣ ಮಾಡಲು ಶ್ರೀ ಮದುಜ್ಜಯಿನಿ ಜಗದ್ಗುರುಗಳವರು ಸಮ್ಮತಿಸಿದ್ದಾರೆ. ಸದರಿ ಗ್ರಂಥವನ್ನು ಪರಿಷ್ಕರಿಸಿ ಪ್ರಸಕ್ತ ಪೀಠಾಚಾರ್ಯರ ಸಂಕ್ಷಿಪ್ತ ಚರಿತ್ರೆಗಳನ್ನು ಸೇರಿಸಿ ಮತ್ತೆ ಕನ್ನಡಿಗರಿಗೆ ಆ ಕೃತಿಯನ್ನು ಉಡುಗೊರೆಯಾಗಿ ಕೊಡಲಾಗುತ್ತಿದೆ. ಆತ್ಮೀಯ ಓದುಗರು ಹಿಂದಿನಂತೆ ಇಂದೂ ಕೂಡಾ 'ವೀರಶೈವ ಪಂಚಪೀಠ ಪರಂಪರೆ'ಯನ್ನು ಸಹೃದಯದಿಂದ ಸ್ವೀಕರಿಸಲು ಉತ್ಸುಕರಾಗಿದ್ದಾರೆಂಬುದರಲ್ಲಿ ಎರಡು ಮಾತಿಲ್ಲ.

ಅ.ಸಿ.ಹಿರೇಮಠ
ಅಧ್ಯಕ್ಷರು, ಹಾವೇರಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು
ರಾಣೇಬೆನ್ನೂರು

ವೀರಶೈವರ ಧರ್ಮದರ್ಶಿಕೆ
(ವೀರಶೈವರ ಗೋತ್ರ– ಸೂತ್ರಾದಿ ವಿವರಣೆ)

ಶ್ರೀ ರಂಭಾಪುರಿ ಶ್ರೀ ಉಜ್ಜಯಿನಿ
ಶ್ರೀ ಕೇದಾರ ಶ್ರೀ ಶ್ರೀಶೈಲ ಶ್ರೀ ಕಾಶಿ
೧ ಪರಶಿವನ ಪಂಚಮುಖಗಳು ಸದ್ಯೋಜಾತ ವಾಮದೇವ
ಅಘೋರ ತತ್ಪುರುಷ ಈಶಾನ
೨ ಪಂಚಾಚಾರ್ಯರು ಅವರ ಅವತಾರ ರೇವಣರಾಧ್ಯ
ಮರುಳಾರಾಧ್ಯ ಏಕೋರಾಮರಾಧ್ಯ ಪಂಡಿತಾರಾಧ್ಯ
ವಿಶ್ವಾರಾಧ್ಯ
ಕ್ಷೇತ್ರ ಮತ್ತು ಲಿಂಗ ಕೊಲ್ಲಿಪಾಕಿ ವಟಕ್ಷೇತ್ರ

ದ್ರಾಕ್ಷಾ ರಾಮಕ್ಷೇತ್ರ ಶ್ರೀಶೈಲಕ್ಷೇತ್ರ ಕಾಶೀಕ್ಷೇತ್ರ
ಸೋಮೇಶ್ವರ ಲಿಂಗ
ಸಿದ್ದೇಶ್ವರಲಿಂಗ ರಾಮನಾಥಲಿಂಗ ಮಲ್ಲಿಕಾರ್ಜುನಲಿಂಗ
ವಿಶ್ವನಾಥಲಿಂಗ
೩ ಸಿಂಹಾಸನದ ಹೆಸರು ವೀರಸಿಂಹಾಸನ ಸದ್ಧರ್ಮ ಸಿಂಹಾಸನ
ವೈರಾಗ್ಯ ಸಿಂಹಾಸನ ಸೂರ್ಯಸಿಂಹಾಸನ ಜ್ಞಾನ ಸಿಂಹಾಸನ
೪ ಸಿಂಹಾಸನದ ಸ್ಥಾನ ಬಾಳೋಹೊನ್ನೂರು ಉಜ್ಜಯಿನಿ
ಕೇದಾರ ಶ್ರೀಶೈಲ ಕಾಶೀ
೫ ಗೋತ್ರಪುರುಷ ವೀರ ನಂದಿ
ಭೃಂಗಿ ವೃಷಭ ಸ್ಕಂದ
೬ ಗೋತ್ರ ಪುರುಷರ ಶಕ್ತಿಯರು ಭದ್ರಕಾಳಿ ಕುಂಡಲಿನೀ
ಹ್ಲಾದಿನೀ ಭದ್ರಾ ದೇವಯಾನೀ
೭. ಮಹಾಸೂತ್ರಗಳು ಪಡ್ವಿಡಿ ವೃಷ್ಟಿ
ಲಂಬನ ಮುಕ್ತಾಗುಚ್ಚ ಪಂಚವರ್ಣ
೮. ಶಾಖೆಗಳು ರೇಣುಕ ಶಾಖಾ ದಾರುಕ ಶಾಖಾ
ಘಂಟಾಕರ್ಣ ಶಾಖಾ ಧೇನುಕರ್ಣ ಶಾಖಾ ವಿಶ್ವಕರ್ಣ ಶಾಖಾ
೯ ಪ್ರವರಗಳು ಏಕಾಕ್ಷರಶಿವಾಚಾರ್ಯ ದ್ವಕ್ಷರಶಿವಾಚಾರ್ಯ
ತ್ರ್ಯಕ್ಷರಶಿವಾಚಾರ್ಯ ಚತುರಕ್ಷರಶಿವಾಚಾರ್ಯ ಪಂಚಾಕ್ಷರಶಿವಾಚಾರ್ಯ
೧೦ ವೇದಗಳು ಋಗ್ವೇಧ ಯಜುರ್ವೇದ
ಸಾಮವೇದ ಅಥರ್ವಣವೇದ ಅಜಪವೇದ(ಶೈವಾಗಮ)
೧೧ ದಂಡಗಳು ಅಶ್ವತ್ಥ (ಅರಳಿದಂಡ) ಪಲಾಶ (ಮುತ್ತಲದಂಡ) ವೇಣು(ಬಿದಿರಿನದಂಡ) ನೈಗ್ರೋಧ ( ಆಲದದಂಡ) ಬಿಲ್ವ (ಪತ್ರಿದಂಡ)
೧೨ ಕಮಂಡಲ ಧಾತುಗಳು ಸುವರ್ಣ ರಜತ
ತಾಮ್ರ ಕಬ್ಬಿಣ ಸೀಸ
೧೩ ಕಂಥಾ ವರ್ಣಗಳು (ಧ್ವಜ ವರ್ಣಗಳು) ಹಸಿರು ಕೆಂಪು
ನೀಲಿ ಬಿಳಿ ಹಳದಿ
೧೪ ತತ್ತ್ವಗಳು ಪೃಥ್ವೀ ಜಲ
ತೇಜಸ್ ವಾಯು ಆಕಾಶ
೧೫ ಬೀಜ ಮಂತ್ರಗಳು ನಕಾರ ಮಕಾರ
ಶಿಕಾರ ವಾಕಾರ ಯಕಾರ
೧೬ ಪಂಚಾಕ್ಷರಗಳು ಪ್ರಸಾದಪಂಚಾಕ್ಷರ ಮಾಯಾಪಂಚಾಕ್ಷರ
ಸೂಕ್ಷ್ಮಪಂಚಾಕ್ಷರ ಸ್ಥೂಲಪಂಚಾಕ್ಷೆ ಮೂಲಪಂಚಾಕ್ಷರ

೧೭ ಉಪಸೂತ್ರಗಳು ಪುರಾಣ ಲೋಹಕಂಥಾ
ಗೋಣಿಕಂಥಾ ತ್ರಿಪುಟೀ ಪಂಚವರ್ಣ
ಪಚ್ಚಕಂಥಾ ಸ್ವರ್ಣಕಂಥಾ
ದಂತೀ ರಜ್ಜು ಕಂಬಾಲ
ಷಡಂಗ ಶೃಂಗೀ
ಜಠರ ಕಂಥಾ ವೃಷಭ
ಸುರಗೀ ಮಸಣೀ
ತ್ರಿಗುಣ ಭಸ್ಮೀ ದಶವಕ್ತ್ರ
ಮಹಿಷೀ ಕುಠಾರ
ಕೇಶಕಂಥಾ ಶಿಖರೀ ಜರತ್ಕಂಥಾ
ದಿಗಂಬರ ಭೈತ್ರೀ
ಲಲಾಟ ರೌಪ್ಯಕ ಪಂಚಮುಖ
ವೇಣೀ ಠಕಾರ
ವ್ಯಾಘ್ರಕಂಥಾ ಚಂದ್ರಗುಂಡ ಗುಹಾಗ್ರ
ಭಿತ್ತಿ ಚಾಮರೀ
ಲೋಚನ ಮೃತ್ಕಂಥಾ ಗೋಚರ
ಮೋರಟ ಕವಾಟ
ಭಗಿನೀ ಕಾಷ್ಠಕಂ ಗಗನ
ನಾಟೀ ಕುಕ್ಷಕಂಥಾ
ಜಾಲಕಂಥಾ ಪವನ ಮುಸಲೀ
ಶೌರೀ ಜ್ವಲತ್ಕಂಥಾ
ನಟನ ರಾಮಗಿರಿ ಲಗುಡ
ಮುಸಡೀ ಸಿಂಹೀ
ಬದಡೀ ಖಡ್ಗೀ ಶಿಥಿಲೀ

ಈ ರೀತಿಯಾಗಿ ವೀರಶೈವರ ಗೋತ್ರ–ಸೂತ್ರಗಳ ವಿವರಣೆಯನ್ನು ವೀರಶೈವ ಸದಾಚಾರ ಸಂಗ್ರಹ ಮತ್ತು ಪಂಚಾಚಾರ್ಯ ಪಂಚಮೋತ್ಪತ್ತಿ ಪ್ರಕರಣ (ಸೋಲಾಪುರ ವಾರದ ಪ್ರಕಾಶನ ೧೯೦೫) ಈ ಗ್ರಂಥಗಳ ಆಧಾರ ಹಾಗೂ ಕಾಶೀಪೀಠದಿಂದ ಪ್ರಕಾಶಿತವಾದ ಗೋತ್ರಸೂತ್ರ ಪಟದ ಆಧಾರದಿಂದ ರಚಿಸಲಾಗಿದೆ. ಈ ಪಟದಲ್ಲಿ ಪ್ರಕಟಿಸಲ್ಪಟ್ಟ ವೀರ ನಂದ್ಯಾದಿ ಶಿವಗಣರ ಶಕ್ತಿಯರ ಹೆಸರುಗಳನ್ನು ಕ್ರಿಯಸಾರ ಭಾಗ–೨ ಪುಟ ೨೭೮–೨೭೯ (ಮೈಸೂರು ಓ.ಋ.ಋ ಪ್ರಕಾಶನ ೧೯೫೭) ದ ಆಧಾರದಿಂದ ತೆಗೆದುಕೊಳ್ಳಲಾಗಿದೆ.